# ಸ್ಕೌಟ್ ಮಾಸ್ಟರುಗಳ ಕೈಪಿಡಿ








**ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ**

#39, ಶಾಂತಿಗೃಹ, ಅರಮನೆ ರಸ್ತೆ, ಬೆಂಗಳೂರು 560 001

ದೂ.: 080-22260017, 22267470, shq@bsgkarnataka.org

shanthigruha@scout.org.in, www.bsgkarnataka.org

## ಸ್ಕೌಟ್ಸ್ ಮತ್ತು ಗೈಡ್ಸ್ ಪ್ರಾರ್ಥನೆ

ದಯಾ ಕರ್ ದಾನ್ ಭಕ್ತೀ ಕಾ
ಹಮೇ ಪರಮಾತ್ಮಾ ದೇನಾ ।
ದಯಾ ಕರನಾ ಹಮಾರೀ
ಆತ್ಮಾ ಮೆ ಶುದ್ಧತಾ ದೇನಾ ॥

ಹಮಾರೆ ಧ್ಯಾನ್ ಮೆ ಆವೋ
ಪ್ರಭು, ಆಂಖೋಮೆ ಬಸ್ ಜಾವೋ ।
ಅಂಧೇರೆ ದಿಲ್ ಮೆ ಆಕರ್ ಕೆ
ಪರಂಜ್ಯೋತಿ ಜಗಾದೇನಾ ॥

ಬಹಾ ದೋ ಪ್ರೇಮ್ ಕೀ ಗಂಗಾ,
ದಿಲೋ ಮೆ ಪ್ರೇಮ್ ಕಾ ಸಾಗರ್ ।
ಹಮೆ ಆಪಸ್ ಮೆ ಮಿಲ್ ಜುಲ್ ಕರ್
ಪ್ರಭು, ರೆಹನಾ ಸಿಖಾದೇನಾ ॥

ಹಮಾರಾ ಕರ್ಮ್ ಹೋ ಸೇವಾ,
ಹಮಾರಾ ಧರ್ಮ್ ಹೋ ಸೇವಾ ।
ಸದಾ ಈಮಾನ್ ಹೋ ಸೇವಾ,
ವಹ್ ಸೇವಕ್ ಚರ್ ಬನಾದೇನಾ ॥

ವತನ್ ಕೆ ವಾಸತೆ ಜೀನಾ,
ವತನ್ ಕೆ ವಾಸತೆ ಮರನಾ ।
ವತನ್ ಪರ್ ಜಾನ್ ಫಿದಾ ಕರ್‌ನಾ
ಪ್ರಭು, ಹಮ್‌ಕೋ ಸಿಖಾ ದೇನಾ
॥ ದಯಾಕರ್ ॥

## ಧ್ವಜಗೀತೆ

ಭಾರತ್ ಸ್ಕೌಟ್ ಗೈಡ್ ಝಂಡಾ
ಊಂಚಾ ಸದಾ ರಹೇಗಾ ।
ಊಂಚಾ ಸದಾ ರಹೇಗಾ ಝಂಡಾ
ಊಂಚಾ ಸದಾ ರಹೇಗಾ ॥

ನೀಲಾ ರಂಗ್ ಗಗನ್ ಸಾ ವಿಸ್ತೃತ
ಭಾತೃ ಭಾವ್ ಫೈಲಾತಾ ।
ತ್ರಿದಲ ಕಮಲನಿತ್ ತೀನ್
ಪ್ರತಿಜ್ಞಾವೊಂ ಕೀ ಯಾದ್ ದಿಲಾತಾ ।
ಔರ್ ಚಕ್ರ ಕಹತಾಹೈ
ಪ್ರತಿಪಲ್ ಆಗೆ ಕದಂ ಬಢೇಗಾ ॥

ಊಂಚಾ ಸದಾ ರಹೇಗಾ ಝಂಡಾ
ಊಂಚಾ ಸದಾ ರಹೇಗಾ ।
ಭಾರತ್ ಸ್ಕೌಟ್ ಗೈಡ್ ಝಂಡಾ
ಊಂಚಾ ಸದಾ ರಹೇಗಾ ॥

# ಸ್ಕೌಟ್ ಮಾಸ್ಟರುಗಳ ಕೈಪಿಡಿ

ಆಂಗ್ಲ ಮೂಲಾಧಾರ :

**ದಿ|| ಟಿ.ವಿ. ನೀಲಕಂಠಂ,** ಬಿ.ಎ., ಬಿ.ಎಲ್.,

ಮಾಜಿ ಕ್ಯಾಂಪ್ ಛೀಫ್, ರಾಷ್ಟ್ರೀಯ ಪ್ರಶಿಕ್ಷಣ ಕೇಂದ್ರ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಪಚಮಡಿ (ಮ.ಪ್ರ.) 461881

ಅನುವಾದ, ಪರಿಷ್ಕರಣೆ, ಅಳವಡಿಕೆ :

**ರಾ. ಚಂದ್ರಶೇಖರನ್**

ಮಾಜಿ ರಾಜ್ಯ ಸ್ಥಾನಿಕ ಆಯುಕ್ತ (ಪ್ರಕಟಣೆಗಳು)

ರೋವರ್ ಸ್ಕೌಟ್ ಲೀಡರ್, ಚಾಮುಂಡಿ ಸ್ಕೌಟ್‌ದಳ, ಬೆಂಗಳೂರು



ಪ್ರಕಾಶಕರು

**ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ**

ರಾಜ್ಯ ಕಾರ್ಯಾಲಯ

ನಂ. 39, ಶಾಂತಿಗೃಹ, ಅರಮನೆ ರಸ್ತೆ, ಬೆಂಗಳೂರು – 560 002

**ಸ್ಕೌಟ್ ಮಾಸ್ಟರುಗಳ ಕೈಪಿಡಿ:** ಪ್ರಕಾಶಕರು: ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ
ನಂ. 39, ಶಾಂತಿಗೃಹ, ಅರಮನೆ ರಸ್ತೆ,ಬೆಂಗಳೂರು–560 001
ದೂರವಾಣಿ : ರಾಜ್ಯ ಕೇಂದ್ರ ಕಾರ್ಯಾಲಯ : 22260017
ಗೈಡ್ ಕಾರ್ಯಾಲಯ : 22267470

| | | |
|---|---|---|
| ಮೊದಲನೆಯ ಮುದ್ರಣ | : | ೨೦೦೭ |
| ಎರಡನೆಯ ಮುದ್ರಣ | : | ೨೦೧೧ |
| ಮೂರನೆಯ ಮುದ್ರಣ | : | ೨೦೧೮ |
| ಹಕ್ಕುಗಳು | : | ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ |
| ಪ್ರತಿಗಳು | : | ೨೦೦೦ |
| ಪುಟಗಳು | : | xii + ೨೮೪ = ೨೯೬ |
| **ಬೆಲೆ** | : | **ರೂ. ೫೦/–** |

---

**SCOUT MASTERUGALA KAIPIDI :** PUBLISHER:
The Bharat Scouts & Guides, Karnataka, State Headquarters
No. 39, Shanthigruha, Palace Road, Bengaluru-560 001
Telephone : State Head Quarters : 22260017
Guide Office : 22267470

| | | |
|---|---|---|
| First Edition | : | 2007 |
| Second Edition | : | 2011 |
| Third Edition | : | 2018 |
| © | : | The Bharat Scouts & Guides, Karnataka |
| Copies | : | 2000 |
| Pages | : | xii + 284 = 296 |
| **Price** | : | **₹ 50/-** |

Printed at :

**SATHYASRI PRINTERS PVT. LTD.,**
No. 16/1, 3rd Cross, 2nd Main Road
Kasturiba Nagar, Mysore Road, Bangalore-560 026
Tele: **080-2674 8811**

# ರಾಜ್ಯ ಮುಖ್ಯ ಆಯುಕ್ತರ ನುಡಿ

ಕರ್ನಾಟಕದಲ್ಲಿ ರಾಜ್ಯದ ಸ್ಕೌಟಿಂಗ್ ಶತಮಾನೋತ್ಸವವನ್ನು ನಾವೆಲ್ಲ ಬರುವ ವರ್ಷ ಸಂಭ್ರಮದಿಂದ ಆಚರಿಸಲಿದ್ದೇವೆ. ಅಂದಿನ ಮೈಸೂರು ಸಂಸ್ಥಾನದಲ್ಲಿ ರಾಜಾಜ್ಞೆಯ ಮೂಲಕ ದೇಶೀಯ ಬಾಲಕರಿಗೂ ಸೇರಿದಂತೆ ಸ್ಕೌಟಿಂಗ್ ಪ್ರಾರಂಭವಾದದ್ದು ಭಾರತದಲ್ಲಿ ಮೊದಲನೆಯಯದು- (ಅಂದಿನ ಬಾಯ್ ಸ್ಕೌಟ್ಸ್ ಆಫ್ ಮೈಸೂರ್ ಇಂದಿನ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ) ಸ್ಕೌಟ್ ಚಳವಳಿಯು ವಿಶ್ವದ 210 ರಾಷ್ಟ್ರಗಳಲ್ಲಿ ಹರಡಿದ್ದು, ಸುಮಾರು ನಾಲ್ಕು ಕೋಟಿಗೂ ಹೆಚ್ಚು ಸಮವಸ್ತ್ರಧಾರಿ ಯುವ ಸಮುದಾಯವನ್ನು ಹೊಂದಿರುವ ಅಂತರಾಷ್ಟ್ರೀಯ ಜಾಗತಿಕ ಯುವ ಸಂಘಟನೆಯಾಗಿದೆ.

ವಯೋಮಿತಿಗಳಿಗನುಗುಣವಾಗಿ ಮೂರು ವಿಭಾಗಗಳನ್ನು ಹೊಂದಿರುವ ಈ ಚಳವಳಿಯಲ್ಲಿ 60%ಕ್ಕೂ ಹೆಚ್ಚು ಭಾಗ ಸ್ಕೌಟ್ ವಿಭಾಗದಲ್ಲಿದ್ದಾರೆ.

ತನ್ನ ವಿಶ್ವಮಾನ್ಯ ಹಾಗೂ ಮೌಲ್ಯಾಧಾರಿತ ಮೂಲತತ್ವಗಳಿಂದ ಬೆಳೆಯುತ್ತಲೇ ಬಂದಿರುವ ಈ ಚಳವಳಿಯು, ಮತ್ತಷ್ಟು ವಿಸ್ತರಿಸಲು ಹಾಗೂ ತನ್ನ ಗುರಿಯನ್ನು ಸಾಧಿಸಲು ವಿಪುಲ ಅವಕಾಶಗಳಿವೆ. ಗ್ರಾಮಾಂತರ ವಿಭಾಗಗಳಲ್ಲಂತೂ ಸ್ಕೌಟ್-ಗೈಡ್ ಚಳವಳಿಯ ಅವಶ್ಯಕತೆ ಬಹಳವಾಗಿದೆ. ಹೆಚ್ಚು ಕನ್ನಡ ಪುಸ್ತಕಗಳು ಪ್ರಕಾಶಗೊಳ್ಳಬೇಕೆಂಬ ಉತ್ಕಟ ಅಪೇಕ್ಷೆಯೊಂದಿಗೆ, ಕಲಿಯುವವರಿಗೆ ಕೌಶಲಗಳಿಗೆ ಸಂಬಂಧಪಟ್ಟ ಕೈಪಿಡಿಗಳ ಅವಶ್ಯಕತೆ ಇದ್ದು, ಕಲಿಸುವವರಿಗೆ ವಿವರವಾದ ಮಾಹಿತಿಯುಳ್ಳ ಪುಸ್ತಕಗಳ ಅವಶ್ಯಕತೆಯನ್ನು ಮನಗಂಡು ಸ್ಕೌಟ್ ಕಾರ್ಯಕರ್ತರುಗಳಿಗೆ, ವಿಶೇಷವಾಗಿ ಸ್ಕೌಟ್ ಶಿಕ್ಷಕರುಗಳಿಗೆ "ಸ್ಕೌಟ್ ಮಾಸ್ತರುಗಳ ಕೈಪಿಡಿ"ಯನ್ನು 2007ರಲ್ಲಿ ಹೊರತರಲಾಯಿತು. ಇದು ಒಂದು ಮಹತ್ವದ ಮಾರ್ಗದರ್ಶಿ ಪ್ರಕಟಣೆಯಾಗಿದ್ದು ಕನ್ನಡ ಮಾಧ್ಯಮದಲ್ಲಿ ಬೋಧಿಸಲು ಸ್ಕೌಟ್ ಮಾಸ್ಟರ್‌ಗಳಿಗೆ ಹೆಚ್ಚು ಉಪಯುಕ್ತವಾಗಿರುತ್ತದೆ.

ಬೆಂಗಳೂರು ಶ್ರೀ ಚಾಮುಂಡಿ ಮುಕ್ತದಳದ ರೋವರ್ ಸ್ಕೌಟ್ - ನಾಯಕರು, ಮರಿಗಳ ವಿಭಾಗದ ಲೀಡರ್ ಟ್ರೈನರ್, ಉಳಿದೆರಡು ವಿಭಾಗಗಳ

ವೃಕ್ಷಮಣಿಧಾರಕರೂ ರಾಜ್ಯ ಸಂಸ್ಥೆಯ ಮಾಜಿ ಸ್ಥಾನಿಕ ಆಯುಕ್ತರೂ, ಅನುಭವೀ ಸ್ಕೌಟ್ ಮಾಸ್ಟರ್, ಈಗಾಗಲೇ 50ಕ್ಕೂ ಹೆಚ್ಚು ಸ್ಕೌಟ್ ಪುಸ್ತಕಗಳ ಮೂಲಕ ಪರಿಚಿತರೂ ಆಗಿರುವ ಶ್ರೀ ರಾ. ಚಂದ್ರಶೇಖರನ್‌ರವರು, ಪಚಮಡಿಯ ರಾಷ್ಟ್ರ ಪ್ರಶಿಕ್ಷಣ ಕೇಂದ್ರದ ಮಾಜಿ ಕ್ಯಾಂಪ್ ಚೀಫ್ ದಿ॥ ನೀಲಕಂಠಂ ಅವರ ಇಂಗ್ಲಿಷ್ ಪ್ರಕಟಣೆ "ಟ್ರೂಪ್ ಸ್ಕೌಟರ್ಸ್ ಹ್ಯಾಂಡ್ ಬುಕ್" ಅನ್ನು ಅನುವಾದಿಸಿ, ಪರಿಷ್ಕರಿಸಿ, ಅನುಭವಗಳನ್ನು ಅಳವಡಿಸಿ 2007ರಲ್ಲೇ ಕೊಟ್ಟಿರುತ್ತಾರೆ. ಇದೀಗ ಅದರ ಮೂರನೆಯ ಆವೃತ್ತಿ ಬಂದಿರುವುದು ಬಹಳ ಸಂತೋಷ ಸಂಗತಿ ಆಗಿದೆ. ಪ್ರಸ್ತುತ ಈ ಮುದ್ರಣಕ್ಕಾಗಿ ಇತ್ತೀಚಿನ ತಿದ್ದುಪಡಿಗಳನ್ನು ಅಳವಡಿಸಿ ತಯಾರಿಸಿರುವ ಶ್ರೀ ರಾ.ಚಂದ್ರಶೇಖರನ್ ಮತ್ತು ಸ್ಕೌಟ್ ವಿಭಾಗದ ಹಿರಿಯ ತರಬೇತುದಾರ ಶ್ರೀ ಎನ್.ಶ್ರೀನಿವಾಸನ್ ಇವರುಗಳಿಗೆ ಹೃತ್ಪೂರ್ವಕ ವಂದನೆಗಳು.

ಕೈಪಿಡಿ ಪ್ರಕಟಣೆಯಲ್ಲಿ ನೆರವಾದ ಎಲ್ಲರಿಗೂ ಪರಿಶೀಲನಾ ಸಮಿತಿಯ ಸದಸ್ಯರುಗಳಿಗೂ, ವಿಶೇಷವಾಗಿ ಪ್ರಕಟಣಾ ಸಮಿತಿಯ ಅಧ್ಯಕ್ಷರೂ, ರಾಜ್ಯದ ಹಿರಿಯ ಸಾಹಿತಿಗಳೂ ಆದ ಶ್ರೀ ಗೊ.ರು. ಚನ್ನಬಸಪ್ಪನವರಿಗೆ, ಮಾಜಿ ರಾಜ್ಯಮುಖ್ಯ ಆಯುಕ್ತ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪನವರಿಗೆ, ಕಾರ್ಯಕಾರೀ ಸಮಿತಿಯ ಸದಸ್ಯರುಗಳಿಗೆ, ಅಂದವಾಗಿ ಮುದ್ರಿಸಿಕೊಟ್ಟಿರುವ ಸತ್ಯಶ್ರೀ ಪ್ರಿಂಟರ್ಸ್ ಪ್ರೈ.ಲಿ.ನ ಮಾಲೀಕರಾದ ಶ್ರೀ ಎಲ್. ಲಿಂಗಪ್ಪನವರಿಗೆ ಮತ್ತು ಅವರ ಎಲ್ಲಾ ಸಿಬ್ಬಂದಿವರ್ಗಕ್ಕೆ ಸಂಸ್ಥೆಯ ಪರವಾಗಿ ನನ್ನ ಹೃತ್ಪೂರ್ವಕ ನಮನಗಳು.

ಬೆಂಗಳೂರು
30.11.2017

**ಪಿ.ಜಿ.ಆರ್ ಸಿಂಧ್ಯ**
ರಾಜ್ಯ ಮುಖ್ಯ ಆಯುಕ್ತ

# ಆಶಯ ನುಡಿ

'ಸ್ಕೌಟ್' ಎಂಬ ಇಂಗ್ಲಿಷ್ ಶಬ್ದಕ್ಕೆ ಅನ್ವೇಷಕ, ಒಳ್ಳೆಯ ವ್ಯಕ್ತಿ ಎಂಬ ಅರ್ಥಗಳೂ ಇವೆ. ವ್ಯಕ್ತಿ ಹೊಸದನ್ನು ಹುಡುಕುವ ಸಾಹಸಿಯಾಗಬೇಕು; ಸಮಾಜದಲ್ಲಿ ಸಭ್ಯನೆನಿಸಿಕೊಳ್ಳಬೇಕು. ಈ ಸಾಹಸದ ಪ್ರವೃತ್ತಿಯನ್ನು, ಸಭ್ಯ ನಡವಳಿಕೆಗಳನ್ನು ವ್ಯಕ್ತಿಯ ಎಳೆಯ ವಯಸ್ಸಿನಲ್ಲೇ ಮೈಗೂಡಿಸುವ ಒಂದು ಅನುಪಮ ಪ್ರಯೋಗಾಲಯವೇ ಸ್ಕೌಟ್ ಆಂದೋಲನ.

ಈ ಚಳವಳಿಯನ್ನು ಹುಟ್ಟು ಹಾಕಿದ ಶ್ರೇಷ್ಠ ವ್ಯಕ್ತಿ ಲಾರ್ಡ್ ಬೇಡನ್ ಪೊವೆಲ್. ಅವರಿಗೆ ಪ್ರತಿಯೊಬ್ಬ ತಂದೆ-ತಾಯಿಯೂ ಋಣಿಯಾಗಿರಬೇಕು. ತಮ್ಮ ಮಕ್ಕಳು ಲೋಕಕ್ಕೆ ಬೇಕಾದವರಾಗಬೇಕು ಎನ್ನುವುದನ್ನು ಯಾವ ತಂದೆ-ತಾಯಿ ಬಯಸುವುದಿಲ್ಲ.

ಅಂತಹ ತಂದೆ-ತಾಯಿಗಳ ಆಸಕ್ತಿ-ವಿಶ್ವಾಸಗಳ ಫಲದಿಂದಾಗಿಯೇ ಸ್ಕೌಟ್ ಚಳವಳಿ ಇಂದು ವಿಶ್ವದ ಅತಿದೊಡ್ಡ ಸಂಘಟನೆಯಾಗಿ ಬೆಳೆದಿರುವುದು. ಕರ್ನಾಟಕ ರಾಜ್ಯದಲ್ಲಿ ಈ ಚಳವಳಿಯು ದೇಶೀಯ ಬಾಲಕರಿಗೂ ಸೇರಿದಂತೆ 1917ರಲ್ಲಿ ಪ್ರಾರಂಭವಾಯಿತು. ಹಾಗಾಗಿ ರಾಜ್ಯದ ಶತಮಾನೋತ್ಸವವನ್ನು 2018ರಲ್ಲಿ ಸಂಭ್ರಮದಿಂದ ಆಚರಿಸಲಿದ್ದೇವೆ. ರಾಜ್ಯದ ಲಕ್ಷ ಲಕ್ಷ ಸಂಖ್ಯೆಯ ಕನ್ನಡ ಸ್ಕೌಟ್ ಮಕ್ಕಳಿಗೆ ಇದೊಂದು ಸಡಗರದ ಸಂದರ್ಭ.

ಸ್ಕೌಟ್ ಮತ್ತು ಗೈಡ್ ಚಳವಳಿಯಲ್ಲಿ ನಮ್ಮ ಕರ್ನಾಟಕ ರಾಜ್ಯಕ್ಕೆ ಒಂದು ಪ್ರತಿಷ್ಠಿತ ಸ್ಥಾನವಿದೆ. ಹಿಂದಿನ ಮೈಸೂರು ಅರಸರ ಕಾಲದಿಂದ ಇಂದಿನವರೆಗೂ ಸರ್ಕಾರದಿಂದ ಈ ಚಳವಳಿಗೆ ಒಳ್ಳೆಯ ಪೋಷಣೆ ದೊರಕುತ್ತ ಬಂದಿದೆ. ಇದು ಶಾಲಾ ಹಂತದ ಮಕ್ಕಳ ಚಳವಳಿಯಾದ ಕಾರಣ ಶಾಲಾ ಉಪಾಧ್ಯಾಯರ ಪಾತ್ರಕ್ಕೆ ಮಹತ್ವವಿದೆ. ಶಾಲಾ ಶಿಕ್ಷಕರು ತರಗತಿಯ ಶಿಕ್ಷಕರಷ್ಟೇ ಅಲ್ಲದೆ ಆದರ್ಶ ಸ್ಕೌಟ್ ಶಿಕ್ಷಕರೂ ಆಗಬೇಕು.

ಅಂತಹ ಸ್ಕೌಟ್ ಮಾಸ್ಟರುಗಳಿಗೆ ಅಗತ್ಯವಾದ ಮಾಹಿತಿ–ಮಾರ್ಗದರ್ಶನಗಳನ್ನು ನೀಡಲು ಕರ್ನಾಟಕ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ ಈ ಕೈಪಿಡಿಯನ್ನು ಹೊರ ತಂದಿದೆ. ಇದರಲ್ಲಿ ಸ್ಕೌಟ್ ಪರಿಕಲ್ಪನೆ, ತತ್ತ್ವಸಿದ್ಧಾಂತ, ತರಬೇತಿ, ಕಾರ್ಯ ಚಟುವಟಿಕೆಗಳು, ಸಂಘಟನೆ, ನಿರ್ವಹಣೆ – ಇತ್ಯಾದಿ ಪೂರ್ಣ ವಿವರಗಳಿವೆ.

ಈ ಕೈಪಿಡಿಯನ್ನು ಈ ಚಳವಳಿಗೇ ತಮ್ಮನ್ನು ಅರ್ಪಿಸಿಕೊಂಡಿರುವ ಶ್ರೀ ರಾ. ಚಂದ್ರಶೇಖರನ್ ಅವರು ಸಿದ್ಧಪಡಿಸಿದ್ದಾರೆ. ಕ್ಷೇತ್ರಾನುಭವಿಗಳಾದ ಶ್ರೀ ಎನ್. ಶ್ರೀನಿವಾಸನ್, ಶ್ರೀ ಯು. ಗೋಪಾಲಕೃಷ್ಣಭಟ್ ಮತ್ತು ಇತರ ಪರಿಶೀಲನಾ ಸಮಿತಿ ಸದಸ್ಯರು (2007ರಲ್ಲಿ) ಪರಿಶೀಲಿಸಿದ್ದಾರೆ.

ಇದರ ಮೊದಲ ಮುದ್ರಣವು ಅಂದಿನ ರಾಜ್ಯ ಮುಖ್ಯ ಆಯುಕ್ತ ಶ್ರೀ ಕೆ.ಬಿ.ಷಣ್ಮುಖಪ್ಪ ಅವರ ಉತ್ತೇಜನದೊಂದಿಗೆ 2007ರಲ್ಲಿ ಪ್ರಕಟವಾಯಿತು. ರಾಜ್ಯದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯನ್ನು ದೃಢವಾದ ನೆಲಗಟ್ಟಿನ ಮೇಲೆ ವಿಸ್ತರಿಸುವತ್ತ ತಮ್ಮದೇ ರೀತಿಯಲ್ಲಿ ಅಪಾರ ಕಳಕಳಿ ಹೊಂದಿರುವ ಇಂದಿನ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ಅವರು ತಮ್ಮ ಮುನ್ನುಡಿಯಲ್ಲಿ ಈ ಕೈಪಿಡಿಯ ಮಹತ್ವವನ್ನು ಕುರಿತು ಹೇಳಿದ್ದಾರೆ.

ಸ್ಕೌಟ್ ಮಾಸ್ಟರುಗಳು ಈ ಕೈಪಿಡಿಯ ಪ್ರಯೋಜನವನ್ನು ಪೂರ್ಣವಾಗಿ ಪಡೆದುಕೊಳ್ಳುವುದೇ ಶ್ರೀ ರಾ. ಚಂದ್ರಶೇಖರನ್ ಅವರಿಗೆ ಸಲ್ಲಿಸಬೇಕಾದ ಕೃತಜ್ಞತೆಯಾಗುತ್ತದೆ.

**ಗೊ.ರು. ಚನ್ನಬಸಪ್ಪ**
ಅಧ್ಯಕ್ಷ
ಪ್ರಕಟಣಾ ಸಮಿತಿ

# ಅನುವಾದಕನ ನುಡಿ

ನಾನು ಬಾಲಕನಾಗಿದ್ದ ತುಮಕೂರಿನ ಶ್ರೀ ಹನುಮಾನ್ ಸ್ಕೌಟ್ ಗ್ರೂಪ್ ನಲ್ಲಿ (ಇದು ನನ್ನ ತಂದೆಯವರು ಪ್ರಾರಂಭಿಸಿದ ಎರಡನೆಯ ಮುಕ್ತದಳ). "ಮಹಾರಾಜಾಸ್ ಸ್ಕೌಟ್" ಆಗಿ ತರಬೇತಿ ಪಡೆದೆ. ಮುಂದೆ ಅದೇ ದಳದಲ್ಲಿ ಕೆಲಕಾಲ ಸ್ಕೌಟ್ ಮಾಸ್ಟರ್ ಆಗಿದ್ದು ಸ್ಕೌಟ್ ವುಡ್‌ಬ್ಯಾಡ್ಜ್ ಸಹ ಪಡೆದೆ.

ನನ್ನನ್ನು ಸ್ಕೌಟಿಂಗ್ ಕ್ರೀಡೆಯಲ್ಲಿ ತೊಡಗಿಸಿಕೊಳ್ಳಲು ಸ್ಫೂರ್ತಿದಾಯಕ ರಾದ, ಸ್ಕೌಟಿಂಗ್‌ನ ವಿವಿಧ ಹಂತಗಳಲ್ಲಿನ ಸ್ವಾರಸ್ಯಮಯವಾದ, ಸಾಹಸಯಾನದಲ್ಲಿ ಮಾರ್ಗದರ್ಶಕರಾಗಿದ್ದ, ತಮ್ಮ ಇಡೀ ಜೀವನವನ್ನು 1918 ರಿಂದ 1982ರ ವರೆಗೆ 64 ವರ್ಷಕಾಲ ಸ್ಕೌಟಿಂಗ್‌ನ ಬೆಳವಣಿಗೆಗಾಗಿ ಅರ್ಪಿಸಿಕೊಂಡು ಕೃತಕೃತ್ಯರಾದ ಹಾಗೂ ಕರ್ನಾಟಕದ ಬಿ.ಪಿ ಮತ್ತು ಸ್ಕೌಟ್ ಮಾಸ್ಟರ್ ಎಂದರೆ 'ಎಂ.ಹೆಚ್.ಆರ್.' ಎಂದು ಪ್ರಖ್ಯಾತರಾಗಿದ್ದ ನನ್ನ ಪೂಜ್ಯ ತಂದೆ ದಿ॥ ಮ.ಹ. ರಾಮಚಂದ್ರರಾಯರ ಮಾರ್ಗದರ್ಶನದ ಜೊತೆಗೆ ನನ್ನನ್ನು ಕೈಹಿಡಿದು ನಡೆಸಿದವರಲ್ಲಿ ದಿವಂಗತರುಗಳಾದ ಎ.ವಿ. ಸುಬ್ರಹ್ಮಣ್ಯಂ, ಹೆಚ್.ಎಸ್. ವೆಂಕಟರಾಯಯ್ಯ, ಆರ್. ಜಿ. ಪದಕಿ, ಸಿ.ಎಸ್. ಸಾಂಬಶಿವನ್ ಇವರುಗಳು ಪ್ರಮುಖರು.

ಸಂಕೇತಕ್ರಮ, ಪ್ರಥಮಚಿಕಿತ್ಸೆ, ಶಿಬಿರ ಕೌಶಲಗಳು, ಬೇಹುಗಾರಿಕೆ, ವಾಹನ ನಿಯಂತ್ರಣ, ಗ್ರಾಮೋದ್ಧಾರ, ತೋಟಗಾರಿಕೆ ಮುಂತಾದ ಅನೇಕ ವಿಷಯಗಳನ್ನು ಅಭ್ಯಾಸ ಮಾಡಲು ದೊರೆತ ವಿಫುಲ ಅವಕಾಶಗಳು, ಅವುಗಳನ್ನು ಸ್ಪರ್ಧಾತ್ಮಕವಾಗಿ ಪ್ರದರ್ಶಿಸಲು ಭಾಗವಹಿಸುತ್ತಿದ್ದ ಸ್ಪರ್ಧೆಗಳು, ಮೇಳಗಳು, ಪರ್ವತಾರೋಹಣ, ಚಾರಣ, ಶಿಲಾರೋಹಣ ಮುಂತಾದ ಸಾಹಸ ಕ್ರೀಡೆಗಳಲ್ಲಿ ದೊರೆತ ಅನುಭವಗಳು, ಇವೆಲ್ಲವೂ ಜೀವನದ ಎಡರು ತೊಡರುಗಳನ್ನು ನಗುಮೊಗದಿಂದ ಎದುರಿಸಲು ಬೇಕಾದ ಸ್ಥೈರ್ಯ, ಸ್ಪೈರಣೆ, ಪರಹಿತಚಿಂತನೆ, ಮಿತವ್ಯಯತೆ, ಆರೋಗ್ಯಕರ ಅಭ್ಯಾಸಗಳು ಮುಂತಾದ ಗುಣಗಳನ್ನು ಜೀವನದಲ್ಲಿ ಅಳವಡಿಸಿಕೊಳ್ಳಲು ಸಾರ್ಥಕವೆನಿಸಿದವು.

ಸ್ಕೌಟ್ ಸಂಸ್ಥೆಯ ಪುರೋಭಿವೃದ್ಧಿಯ ಹಾದಿಯಲ್ಲಿ, ಕನ್ನಡ ಗ್ರಂಥಗಳ ಮೂಲಕ "ಕನ್ನಡಮ್ಮನ ಸೇವೆ" ಮಾಡಲು ಕೈಗೊಂಡಿರುವ ನನ್ನ ಪ್ರಯತ್ನದಲ್ಲಿ ಈ ಗ್ರಂಥವು ಎಂಟನೆಯದು. ಈ ಗ್ರಂಥಕ್ಕೆ ಮೂಲಾಧಾರವಾಗಿ, ಭಾರತ್ ಸ್ಕೌಟಿಂಗ್‌ನ ದಿಗ್ಗಜಗಳಲ್ಲೊಬ್ಬರಾಗಿದ್ದ ದಿ॥ ಟಿ.ವಿ. ನೀಲಕಂಠಂ ಅವರ "ಹ್ಯಾಂಡ್ ಬುಕ್ ಫಾರ್ ಟ್ರೂಪ್ ಸ್ಕೌಟರ್ಸ್"ನ್ನು ಆರಿಸಿಕೊಂಡು, ಅನುವಾದ ಮಾಡಿದ್ದೇನೆ. ಇದಲ್ಲದೆ ಸಂಸ್ಥಾಪಕ ಬಿ.ಪಿ.ರವರ 'ಬಾಲಕರಿಗಾಗಿ ಸ್ಕೌಟಿಂಗ್' ಮತ್ತು ನನ್ನ ಪೂಜ್ಯ ತಂದೆಯವರ "ಸ್ಕೌಟ್ ಆಟಗಳು" ಪುಸ್ತಕಗಳ ನೆರವೂ ಪಡೆದಿದ್ದೇನೆ. ಸಹೃದಯಿಗಳಾದ ನೀವು – ಸ್ಕೌಟ್ ಮಾಸ್ಟರುಗಳು ಇದರ ಉಪಯೋಗ ಪಡೆಯುವಿರೆಂದು ಆಶಿಸುತ್ತೇನೆ.

2006–07ರಷ್ಟು ಹಿಂದೆಯೇ ಈ ಪುಸ್ತಕದ ರಚನೆಗಾಗಿ ಒತ್ತಾಸೆಕೊಟ್ಟು, ಕಾರ್ಯೋನ್ಮುಖನಾಗಲು ಕಾರಣರಾದ ಸ್ಕೌಟರುಗಳೂ ಸೇರಿದಂತೆ ರಾಜ್ಯ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳಿಗೆ, ಪ್ರೋತ್ಸಾಹಿಸಿ ಬೆನ್ನುತಟ್ಟಿದ ಪ್ರಕಟಣಾ ಸಮಿತಿಯ ಅಧ್ಯಕ್ಷರಾದ ಶ್ರೀ ಗೊ.ರು. ಚನ್ನಬಸಪ್ಪನವರು ಮತ್ತು ಅಂದಿನ ಮುಖ್ಯ ರಾಜ್ಯ ಮುಖ್ಯ ಆಯುಕ್ತ ಶ್ರೀ ಕೊಂಡಜ್ಜಿ ಷಣ್ಮುಖಪ್ಪನವರಿಗೆ ಹಾಗೂ ಎಲ್ಲಕ್ಕಿಂತಲೂ ಹೆಚ್ಚಾಗಿ ಉತ್ತೇಜನ ನೀಡಿ ತುಂಬು ಮನಸ್ಸಿನಿಂದ ಮುನ್ನುಡಿ ನೀಡಿರುವ ಇಂದಿನ ರಾಜ್ಯ ಮುಖ್ಯ ಆಯುಕ್ತ ಶ್ರೀ ಪಿ.ಜಿ.ಆರ್. ಸಿಂಧ್ಯ ಅವರಿಗೆ ನಾನು ಚಿರಋಣಿ, ಅತ್ಯಲ್ಪ ಕಾಲದಲ್ಲಿ ಅಂದವಾಗಿ ಮುದ್ರಿಸಿ ಪುಸ್ತಕಕ್ಕೆ ಒಂದು ಹೊಸ ರೂಪ ಕೊಟ್ಟಿರುವ ಸತ್ಯಶ್ರೀ ಪ್ರಿಂಟರ್ಸ್‌ನ ಮಾಲೀಕರಾದ ಶ್ರೀ ಎಲ್.ಲಿಂಗಪ್ಪನವರಿಗೆ ಮತ್ತು ಅವರ ಸಿಬ್ಬಂದಿವರ್ಗಕ್ಕೆ ನನ್ನ ಧನ್ಯವಾದಗಳು.

ಮುದ್ರಣದ ಕರಡು ಪ್ರತಿಯನ್ನು ಓದಿ ಸಲಹೆ ನೀಡಿದ ಶ್ರೀ ಎನ್.ಶ್ರೀನಿವಾಸನ್ ಹಾಗೂ ಈ ಅಳಿಲು ಸೇವೆಯನ್ನು ಮೆಚ್ಚಿ, ಇದನ್ನು ಕೈಯಲ್ಲಿ ಹಿಡಿದು ಓದಿ ಉಪಯೋಗ ಪಡೆಯುತ್ತಿರುವ ನಿಮಗೂ ನನ್ನ ಧನ್ಯವಾದಗಳು.

ಮಲ್ಲೇಶ್ವರಂ, ಬೆಂಗಳೂರು–03

**ರಾ. ಚಂದ್ರಶೇಖರನ್**
ಅನುವಾದಕ–ಲೇಖಕ

## ವಿಷಯಾನುಕ್ರಮಣಿಕೆ

# ಸ್ಕೌಟ್ ಮಾಸ್ಟರು – ಒಂದು ವಿಚಾರಧಾರೆ

ಸ್ಕೌಟ್ ಸಂಸ್ಥೆಯಲ್ಲಿ ನಾಯಕತ್ವದ ಬಗ್ಗೆ ಹೇಳುವಾಗ "ಯಾವುದೇ ಪದವಿ ಆದರೂ, ಅದು ಸೇವೆ ಮಾಡಲು ಒಂದು ಅವಕಾಶವೇ ಹೊರತು, ವೈಯಕ್ತಿಕ ಹಾಗೂ ಸ್ವಪ್ರತಿಷ್ಠೆಯ ಉದ್ಧಾರಕ್ಕಲ್ಲ" ಎಂಬುದಾಗಿ ಹೇಳುತ್ತೇವೆ. ಸ್ಕೌಟ್ ಮಾಸ್ಟರ ಪದವಿಯೂ ಈ ಹೇಳಿಕೆಗೆ ಹೊರತಲ್ಲ.

ಸ್ಕೌಟ್ ಮಾಸ್ಟರು ಸ್ಕೌಟುಗಳಿಗೆ "ಮಿತ್ರನೂ, ದಾರ್ಶನಿಕನೂ, ಮಾರ್ಗದರ್ಶಕನೂ" ಆಗಿರುವನು ಎಂದು ಹೇಳುವುದುಂಟು. ಒಂದು ಮಾತಂತೂ ಸತ್ಯ. ಶಾಲಾ ಪೂರ್ವ ದೆಶೆಯಿಂದ, ಸ್ನಾತಕೋತ್ತರ ಅಧ್ಯಯನ ಪೂರೈಸುವವರೆಗೆ, ಒಬ್ಬ ವ್ಯಕ್ತಿಯ ಜೀವನದಲ್ಲಿ ಅದೆಷ್ಟೋ ಮಾಸ್ಟರುಗಳು (ಉಪಾಧ್ಯಾಯರುಗಳು) ಹಾದುಹೋಗುತ್ತಾರೆ. ಆದರೆ ಯಾವುದೇ ರೀತಿಯ ಪ್ರತಿಫಲವನ್ನೂ ಆಶಿಸದೆ, ನಿಸ್ವಾರ್ಥ ಮನೋಭಾವದಿಂದ, ಮಕ್ಕಳ ಸೇವೆ ಮಾಡುವ ಸ್ಕೌಟ್ ಮಾಸ್ಟರು ಒಬ್ಬ "ಏಕಮೇವಾದ್ವಿತೀಯ" ವ್ಯಕ್ತಿ. ಅವನಿಂದ ಶಿಕ್ಷಣ ಪಡೆದ ಸ್ಕೌಟುಗಳು, ಯಾರನ್ನು ಮರೆತರೂ, ತಮ್ಮ ಸ್ಕೌಟ್ ಮಾಸ್ಟರನ್ನು ಪದೇ ಪದೇ ನೆನೆಸುತ್ತಾರೆಂಬುದರಲ್ಲಿ ಸಂದೇಹವಿಲ್ಲ.

ಬಿ.ಪಿ. ಅವರ ಮಾತಿನಲ್ಲೇ ಹೇಳುವುದಾದರೆ "ಸ್ಕೌಟ್ ಮಾಸ್ಟರು ಶಾಲಾ ಉಪಾಧ್ಯಾಯನಲ್ಲ. ಆದೇಶ ನೀಡುವ ಅಧಿಕಾರಿಯೂ ಅಲ್ಲ. ಧರ್ಮ ಬೋಧಕನೂ ಅಲ್ಲ. ಶಿಕ್ಷಕನೂ ಅಲ್ಲ. ತನ್ನನ್ನು ತಾನು ಹಿರಿಯಣ್ಣನ ಸ್ಥಾನದಲ್ಲಿ ಊಹಿಸಿಕೊಳ್ಳುತ್ತಾನೆ. ಬಾಲಕನ ದೃಷ್ಟಿಯಲ್ಲಿ ವಿಷಯಗಳನ್ನು ಕಾಣುತ್ತಾನೆ. ಸೂಕ್ತವಾದ ಮಾರ್ಗದರ್ಶನ ನೀಡುತ್ತಾನೆ. ಬಾಲಕರನ್ನು ಉಲ್ಲಾಸಭರಿತರನ್ನಾಗಿ ಮಾಡಿ, ಸರಿಯಾದ ರೀತಿಯಲ್ಲಿ ನೇತೃತ್ವ ವಹಿಸುತ್ತಾನೆ. ಅವಶ್ಯಕತೆ ಬಿದ್ದಾಗ ಸ್ವಲ್ಪ ಕಠಿಣವಾಗಿ ವರ್ತಿಸುತ್ತಾನೆ. ಸಾಂಸಾರಿಕ ಸಂಪ್ರದಾಯಗಳನ್ನು ಅರ್ಥಮಾಡಿಕೊಂಡು, ಅವುಗಳನ್ನು ಉಳಿಸಲು ಪ್ರಯತ್ನಿಸುವ ಹಿರಿಯಣ್ಣನಂತಿರುತ್ತಾನೆ."

"ಬಾಲಕರ ದೃಷ್ಟಿಯಲ್ಲಿ 'ಆರಾಧ್ಯ' ವ್ಯಕ್ತಿಯಾದ ಸ್ಕೌಟ್ ಮಾಸ್ಟರು, ಬಾಲಕರ ವಿಕಾಸದಲ್ಲಿ ಶಕ್ತಿಯುತವಾದ ಪಾತ್ರವಹಿಸುತ್ತಾನೆ. "ಅಷ್ಟೇ ಜವಾಬ್ದಾರಿಯನ್ನು ಅವನು ನಿರ್ವಹಿಸಬೇಕಾಗುತ್ತದೆಂಬುದು, ಕಟು ಸತ್ಯ.

"ಸ್ಕೌಟಿಂಗ್‌ನ ಎಲ್ಲಾ ಮೂಲ ತತ್ವಗಳೂ ಋಜುಮಾರ್ಗವನ್ನೇ ಅವಲಂಬಿಸಿವೆ. ಆದ್ದರಿಂದ ಅವುಗಳ ಉದ್ದೇಶ ಸಾಧನೆಯಾಗುವಂತೆ, ಕಾರ್ಯರೂಪದಲ್ಲಿ ತರುವ ಗುರುತರ ಜವಾಬ್ದಾರಿಯು ಸ್ಕೌಟ್ ಮಾಸ್ಟರಿಗೆ ಸೇರಿದ್ದು.

"ಗಾಲ್ಫ್ ಆಟದಲ್ಲಿ ಅಥವಾ ಹುಲ್ಲು 'ಕತ್ತಿ ಹೊಡೆಯುವಾಗ' (Hacking grass) ಅಥವಾ ಹಾರು ಮೀನು ಹಿಡಿಯುವಾಗ, ಹೇಗೆ ಹಿಡಿಯ ಮೇಲಿನ ಒತ್ತಡವು ಉಪಯೋಗಕ್ಕೆ ಬರುವುದಿಲ್ಲವೋ ಹಾಗೆ, ಬಾಲಕರನ್ನು ಪಳಗಿಸುವಾಗ, ಅತಿಕಠಿಣತೆಯಾಗಲೀ, ಅತಿಮೃದುತ್ವವಾಗಲೀ ಪ್ರಯೋಜನವಿಲ್ಲ. 'ವಜ್ರಾದಪಿ ಕಠೋರಾಣಿ, ಮೃದೂನಿ ಕುಸುಮಾದಪಿ'ಯಂತಿರಬೇಕು ಸ್ಕೌಟ್ ಮಾಸ್ಟರನ ನಡವಳಿಕೆ.

ಸ್ಕೌಟ್ ಮಾಸ್ಟರಾಗಿ ಗೆಲುವು ಸಾಧಿಸಬೇಕಾದರೆ ಅವನು "ಬಾಲಮಾನವ" (Boy Man) ಆಗಿರಬೇಕು. ಎಂದರೆ:

i) ಅವನಲ್ಲಿ ಬಾಲಕರ ಮನೋಭಾವನೆ ತುಂಬಿರಬೇಕು. ಬಾಲಕರ ಮಟ್ಟದಲ್ಲಿ ಯೋಚಿಸಿ ಕೆಲಸ ಮಾಡುವಂತಿರಬೇಕು. ಇದು ಮೊದಲ ಹೆಜ್ಜೆ.

ii) ಬಾಲಕರ ವಯಸ್ಸಿಗನುಗುಣವಾದ ಅವಶ್ಯಕತೆಗಳು, ನಿರೀಕ್ಷೆಗಳು, ಮತ್ತು ಆಸೆ, ಆಕಾಂಕ್ಷೆಗಳಿಗೆ ಸ್ಪಂದಿಸುವಂತಿರಬೇಕು.

iii) ಬಾಲಕರನ್ನು ಗುಂಪಿನಲ್ಲೊಬ್ಬನಂತೆ ಪರಿಗಣಿಸದೆ, ಪ್ರತಿಯೊಬ್ಬನನ್ನೂ ವೈಯಕ್ತಿಕವಾಗಿ ವಿಚಾರ ಮಾಡಬೇಕು.

iv) ಆಗ ಉತ್ತಮ ಫಲಸಾಧನೆಗಾಗಿ, ಪ್ರತಿಯೊಬ್ಬರಲ್ಲಿಯೂ, ಒಂದು ರೀತಿಯ ಸಮಷ್ಟಿ ಭಾವನೆಯನ್ನುಂಟುಮಾಡಲು ಸಹಾಯಕವಾಗುತ್ತದೆ.

ಸ್ಕೌಟ್ ರೀತಿಯಲ್ಲಿ ಬಾಲಕನಿಗೆ ಶಿಕ್ಷಣ ನೀಡಲು ಸ್ಕೌಟ್ ಮಾಸ್ಟರೇ ಪ್ರಮುಖ ವ್ಯಕ್ತಿ. ಸ್ಕೌಟ್ ಮಾಸ್ಟರು ಶೀಲವಂತನಾಗಿರಬೇಕು. ಸಮಾಜದಲ್ಲಿ ಗೌರವಾನ್ವಿತ ವ್ಯಕ್ತಿ ಆಗಿರಬೇಕು. ತನ್ನ ಸನ್ನಡತೆಯ ಮೂಲಕ, ಇತರರಿಗೆ ಮಾದರಿಯ ವ್ಯಕ್ತಿಯಾಗಿ, ನೇತೃತ್ವ ವಹಿಸುವಂತಿರಬೇಕು.

ಎಲ್ಲಕ್ಕಿಂತಲೂ ಹೆಚ್ಚಾಗಿ ಅವನು ಮಕ್ಕಳಬಗ್ಗೆ ನಿಷ್ಕಪಟಿಯಾಗಿರಬೇಕು. ಪ್ರೀತಿಪರನಾಗಿರಬೇಕು. ಅವರ ಅವಶ್ಯಕತೆಗಳನ್ನರಿತು, ಆಶೋತ್ತರಗಳನ್ನು ಪೂರೈಸುವ ಬಗ್ಗೆ ಒಲವುಳ್ಳವನಾಗಿರಬೇಕು. ಸೃಜನಶೀಲ ವ್ಯಕ್ತಿಯಾಗಿರಬೇಕು. ತನ್ನ

ಕಲ್ಪನಾಶಕ್ತಿಯನ್ನು ಪ್ರಯೋಗಿಸಿ, ಬಾಲಕರಿಗೆ ಸ್ವಾರಸ್ಯಮಯವಾದ, ಸಾಹಸಮಯವಾದ, ಉಲ್ಲಾಸಭರಿತವಾದ, ಸಂತೋಷದಾಯಕವಾದ ಚಟುವಟಿಕೆಗಳನ್ನು ನೀಡುವಂತಿರಬೇಕು.

ಸಂಸ್ಥಾಪಕ ಬಿ.ಪಿ. ಅವರು ವಿಶ್ವದ ಮಕ್ಕಳಿಗೆ ಕೊಡುಗೆಯಾಗಿ ನೀಡಿರುವ "ಸ್ಕೌಟಿಂಗ್ ಯೋಜನೆ"ಯನ್ನು ಅವರು ಆಶಿಸಿರುವ ರೀತಿಯಲ್ಲಿ ಸಂಪೂರ್ಣವಾಗಿ ಅರ್ಥಮಾಡಿಕೊಂಡು, ಸೂಕ್ತತರಬೇತಿ ಪಡೆದು, ಸ್ಕೌಟಿಂಗ್ ವಿಧಾನಗಳನ್ನು ಕಾರ್ಯರೂಪಕ್ಕೆ ತರುವ ಅನುಭೋಗವುಳ್ಳವರಾಗಿರಬೇಕು.

ಮೂಲತಃ ಸ್ಕೌಟಿಂಗ್ ಇರುವುದೇ ಬಾಲಕರಿಗಾಗಿ. ಆದಕಾರಣ ಸ್ಕೌಟ್ ಮಾಸ್ಟರಿರುವುದೂ ಬಾಲಕರಿಗಾಗಿಯೇ ಎಂಬುದನ್ನು ಅರಿತವರಾಗಿರಬೇಕು.

**ಗಮನಿಸಿ:** ಸ್ಕೌಟ್ ಮಾಸ್ಟರು ಪದವು ಪುರುಷ ಸ್ಕೌಟ್ ಮಾಸ್ಟರು, ಮಹಿಳಾ ಸ್ಕೌಟ್ ಮಾಸ್ಟರು ಇಬ್ಬರಿಗೂ ಸಮಾನವಾಗಿ ಅನ್ವಯಿಸುತ್ತದೆ.



## ಅಧ್ಯಾಯ–1

# ಸ್ಕೌಟಿಂಗ್ ಎಂದರೇನು?

ಬಾಲಕರ ಹಾಗೂ ಯುವ ಪೀಳಿಗೆಯ ಹಿತದೃಷ್ಟಿಯಿಂದ ರೂಪಿತವಾದ ಮತ್ತು ಅವರು ನಾಡಿನ ಉತ್ತಮ ನಾಗರೀಕರಾಗಲು ನೀಡುವ ಶಿಕ್ಷಣವೇ ಸ್ಕೌಟಿಂಗ್. ಇದು ಸಚ್ಚಾರಿತ್ರ್ಯದ ಬೆಳೆವಣಿಗೆಗೆ ಪೂರಕವಾಗಿರುತ್ತದೆ. ಈ ಶಿಕ್ಷಣ ವಿಧಾನದಲ್ಲಿ ಬಾಲಕರು ಮತ್ತು ಯುವ ಜನರಿಗೆ, ಉತ್ತಮವಾದ, ಸರ್ವ ಸಮ್ಮತವಾದ, ಆಕರ್ಷಕವಾದ ಅನೇಕ ಹೊರಾಂಗಣ ಕಾರ್ಯಕ್ರಮಗಳಿರುತ್ತವೆ. ಇದು ಒಳ್ಳೆಯ ಆರೋಗ್ಯದಾಯಕ ಅಭ್ಯಾಸಗಳಿಗೆ ಉತ್ತೇಜನ ನೀಡುತ್ತದೆ. ದಿನನಿತ್ಯಜೀವನಕ್ಕೆ ಉಪಯುಕ್ತವಾದ ಕೌಶಲಗಳನ್ನು ಕಲಿಸುತ್ತದೆ. ಪ್ರತಿ ವ್ಯಕ್ತಿಯೂ ಸಮಾಜಕ್ಕೂ ತನ್ನ ಸಹಚರರಿಗೂ ಸೇವೆಸಲ್ಲಿಸಲೂ, ಜವಾಬ್ದಾರಿಯುತ ವರ್ತನೆ, ಪ್ರಾಮಾಣಿಕತೆ ಮೊದಲಾದ ಸದ್ಗುಣಗಳನ್ನು ರೂಢಿಸಿಕೊಳ್ಳಲೂ, ತಯಾರಿ ನೀಡುತ್ತದೆ. ಪ್ರತಿವ್ಯಕ್ತಿಯೂ ನಾಯಕತ್ವ, ಸಂಯಮ, ಸ್ವಾವಲಂಬನೆ ಮತ್ತು ತನ್ನದೇ ಆದ ಮಾರ್ಗಗಳನ್ನು ಅವಲಂಬಿಸಲೂ, ತಾನು ಮಾಡುವ ಕೆಲಸಕಾರ್ಯಗಳಲ್ಲಿ ಮುಂಚೂಣಿಯಲ್ಲಿರಲೂ ಬೇಕಾದ ಅವಕಾಶಗಳನ್ನೊದಗಿಸುತ್ತದೆ.

ಸ್ಕೌಟ್ ಸಂಸ್ಥೆಯ ಸಂಸ್ಥಾಪಕರಾದ ಲಾರ್ಡ್ ಬೇಡನ್ ಪೊವೆಲ್ ಆಫ್ ಗಿಲ್‌ವೆಲ್ ಅವರು, "ಬಾಲಕರ ನಾಯಕತ್ವದಲ್ಲಿ, ಬಾಲಕರಿಗಾಗಿ ರೂಪಿತವಾದ ಕ್ರೀಡೆಯೇ ಸ್ಕೌಟಿಂಗ್" ಎಂಬುದಾಗಿ, ತಮ್ಮ ಶ್ಲಾಘನೀಯವಾದ "ಎಯ್ಡ್ಸ್ ಟು ಸ್ಕೌಟ್ ಮಾಸ್ಟರ್‌ಷಿಪ್" ಎಂಬ ಪುಸ್ತಕದಲ್ಲಿ ತಿಳಿಸಿದ್ದಾರೆ. "ಇದರಲ್ಲಿ ಹಿರಿಯ ಸೋದರರು, ತಮ್ಮ ಕಿರಿಯ ಸೋದರರಿಗಾಗಿ, ಆರೋಗ್ಯಕರವಾದ ವಾತಾವರಣವನ್ನು ಸೃಷ್ಟಿಸುತ್ತಾರೆ. 'ಉತ್ತಮ ಪೌರರು' ಎಂದೆನ್ನಿಸಿಕೊಳ್ಳಲು ಬೇಕಾದ ಸಹಾಯಕವಾದ ಆರೋಗ್ಯಕರ ಚಟುವಟಿಕೆಗಳಲ್ಲಿ ಭಾಗವಹಿಸಲು ಉತ್ತೇಜನ ನೀಡುತ್ತಾರೆ" ಎಂದೂ ಸಹ ತಿಳಿಸಿದ್ದಾರೆ. ಮುಂದುವರೆದು, ಸ್ಕೌಟಿಂಗ್‌ನ ಶಕ್ತಿಯುತವಾದ ಆಕರ್ಷಣೆಗಳೆಂದರೆ:

i) ಪ್ರಕೃತಿ ಅಧ್ಯಯನ ಮತ್ತು ಅರಣ್ಯಕೌಶಲ

ii) ಪ್ರತಿಯೊಬ್ಬರೊಡನೆಯೂ, (ಒಟ್ಟಾರೆ ಗುಂಪಿನಲ್ಲಲ್ಲದೆ) ವೈಯಕ್ತಿಕವಾಗಿ ವ್ಯವಹರಿಸುವುದು ಮತ್ತು

iii) ಬೌದ್ಧಿಕ, ದೈಹಿಕ ಮತ್ತು ಆಧ್ಯಾತ್ಮಿಕ ಗುಣಮಟ್ಟವನ್ನು ಉತ್ತಮ ಪಡಿಸುವುದು ಎಂದೂ ಹೇಳಿದ್ದಾರೆ.

ಸ್ಕೌಟ್ ಶಿಕ್ಷಣವು ಬಾಲಕರು ಹಾಗೂ ಯುವ ಜನರ ವಿವಿಧ ವಯೋಮಿತಿಗಳ ಮಾನಸಿಕ ಅವಶ್ಯಕತೆಗಳನ್ನು ಪೂರೈಸುತ್ತದೆ. ಹಾಗಾಗಿ ಅದನ್ನು ನಾಲ್ಕು ವಿಭಾಗಗಳಾಗಿ ವಿಂಗಡಿಸಲಾಗಿದೆ.

| | | | | |
|---|---|---|---|---|
| 5+ | ಇಂದ 10 | ವರ್ಷಗಳವರೆಗೆ | – | ಮರಿಗಳು (ಕಬ್ಸ್) |
| 10+ | " 16 | " | – | ಸ್ಕೌಟುಗಳು |
| 16+ | " 25 | " | – | ರೋವರ್ ಸ್ಕೌಟುಗಳು |
| 25+ | " 35 | " | – | ಸೇವಾನಿರತ ರೋವರ್ ಸ್ಕೌಟುಗಳು, ಸೇವಾನಿರತ ಚಟುವಟಿಕೆಗಳಲ್ಲಿ ಕ್ರಿಯಾಶೀಲವಾಗಿ ಭಾಗವಹಿಸಬಹುದು |

(ಈ ಬಗ್ಗೆ ಇನ್ನೂ ಹೆಚ್ಚು ವಿವರಗಳಿಗೆ 'ಸ್ಕೌಟಿಂಗ್ ಪರಿಚಯ' ಪುಸ್ತಕವನ್ನು ಓದಿರಿ.)

10 + ಇಂದ 16 ವರ್ಷಗಳ ವರೆಗಿನ ಬಾಲಕರಿಗೆ ನೀಡುವ "ಸ್ಕೌಟ್ ಶಿಕ್ಷಣ" ವನ್ನು ಈ ಮುಂದೆ ವಿವರಿಸಲಾಗುತ್ತದೆ. ಈ ಶಿಕ್ಷಣವು ಸ್ಕೌಟ್ ನಿಯಮ ಮತ್ತು ಪ್ರತಿಜ್ಞೆಗಳ ಆಧಾರದ ಮೇಲೆ ರೂಪಿತವಾಗಿದೆ. ಮೂಲತಃ ಶಿಸ್ತಿನ ಜೀವನದ ಅಡಿಪಾಯವಾಗಿದೆ. ಆಕರ್ಷಕ, ಹೊರಾಂಗಣ ಚಟುವಟಿಕೆಗಳ ಮೂಲಕ ಶಿಕ್ಷಣ ನೀಡಲಾಗುತ್ತದೆ. ಈ ಶೈಕ್ಷಣಿಕ ಕಾರ್ಯಕ್ರಮದಲ್ಲಿ ಭಾಗವಹಿಸುವ ಬಾಲಕರಿಗೆ ಅದೊಂದು ಆಹ್ಲಾದಕರವೂ, ಸಂಪನ್ನವೂ, ಉಪಯುಕ್ತವೂ ಆದ ಅನುಭವವಾಗಿ ಪರಿಣಮಿಸುತ್ತದೆ.

16+ ಬಾಲಕರ (ಯುವಕರ) ಪರಿಸ್ಥಿತಿಯು ಇತರರಿಗಿಂತ ವಿಭಿನ್ನ ವಾಗಿರುತ್ತದೆ. ಅವರ ಮಾನಸಿಕ ಅವಶ್ಯಕತೆಗೆ ತಕ್ಕಂತೆ, ಅವರಿಗೆ ಹೆಚ್ಚು ತ್ರಾಸದಾಯಕವಾದ, ಜವಾಬ್ದಾರಿಯುತವಾದ ಕೆಲಸಗಳು, ಕಾರ್ಯಕ್ರಮಗಳಿದ್ದರೆ, ಅವರು ಹೆಚ್ಚು ಉಲ್ಲಾಸಭರಿತರಾಗಿ, ಸಂತೃಪ್ತರಾಗಿ ಕೆಲಸ ಮಾಡುವುದನ್ನು ಅನುಭವ ಪೂರ್ವಕವಾಗಿ ಕಂಡಿದ್ದೇವೆ. ಆ ಕಾರಣ ಆ ವಯಸ್ಸಿನ ಬಾಲಕರಿಗೆ ಸೂಕ್ತವಾಗಿ ಕಾರ್ಯಕ್ರಮಗಳನ್ನು ರೂಪಿಸಿಕೊಳ್ಳಬೇಕು.

ಮರಿಗಳು, ಸ್ಕೌಟುಗಳು, ರೋವರ್‌ಗಳಿಗೆ ನೀಡುವ ಶಿಕ್ಷಣದ ಗುರಿ ಮತ್ತು ಉದ್ದೇಶಗಳು ಮೂಲತಃ ಒಂದೇ – ಬಾಲಕರನ್ನು ಉತ್ತಮ ನಾಗರೀಕರನ್ನಾಗಿ ಮಾಡುವುದು ಮತ್ತು ಅವರು ಸಮಾಜದ ಗೌರವಾನ್ವಿತ ವ್ಯಕ್ತಿಗಳಾಗಿ ಬಾಳಲು ತಯಾರಿ ನೀಡುವುದು. ಮೇಲೆ ಹೇಳಿದ ನಾಲ್ಕೂ ಪಂಗಡಗಳ ಚಟುವಟಿಕೆಗಳಲ್ಲಿ ಸಚ್ಚಾರಿತ್ರ್ಯ ನಿರ್ಮಾಣ, ಆರೋಗ್ಯ ಸಂವರ್ಧನೆ, ಕರಕುಶಲಕಲೆಗಳಿಗೆ ಉತ್ತೇಜನ ಹಾಗೂ ಸೇವಾ ಮನೋಭಾವನೆಗೆ ಒತ್ತಾಸೆ ನೀಡುವುದನ್ನು ಕಾಣುತ್ತೇವೆ. ಬಾಲಕರು ಆರೋಗ್ಯ, ದೃಢಕಾಯರಾಗಿ, ಜಾಗೃತ ಮನಸ್ಸುಳ್ಳವರಾಗಿ, ನೈತಿಕ ಸಂಪನ್ನರಾಗಿ ವಿಕಾಸಹೊಂದಬೇಕೆಂಬುದೇ ಇದರ ಮುಖ್ಯ ಗುರಿ.

ಸ್ಕೌಟ್ ಸಂಸ್ಥೆಗೀಗ ಒಂದುನೂರಾ ಹತ್ತು ವರ್ಷಗಳು ತುಂಬಿದ ಸಂತಸ ಸಮಯ. ಇದು ಸಂಸ್ಥಾಪಕ ಲಾರ್ಡ್ ಬೇಡನ್ ಪೊವೆಲ್ ರವರು ವಿಶ್ವಕ್ಕೆ ನೀಡಿದ ಉನ್ನತ ಮೌಲ್ಯಗಳ, ಅಮೂಲ್ಯವಾದ ಕೊಡುಗೆಯಾಗಿದೆ. ಹಾಗಾಗಿ ಮಾನವಾಳಿಯು ಅವರನ್ನು ಚಿರಕಾಲ ನೆನೆಸುತ್ತದೆ. ಅಮೋಘವಾದ ಈ ಸ್ಕೌಟಿಂಗ್ ಕ್ರೀಡೆಯ ಮೂಲಕ. ನೀರಸವೂ, ಬೇಸರಪಡಿಸುವಂತಹುದೂ ಆಗಿದ್ದ ಬಾಲಕರ ಜೀವನದ ಹಾದಿಗೆ ಬೆಳಕು ಚೆಲ್ಲಿ, ಅವರ ಜೀವನವನ್ನು ಆಶಾಜನಕ, ಆಹ್ಲಾದಕರ, ಆನಂದಮಯವನ್ನಾಗಿ ಮಾರ್ಪಡಿಸಿದ್ದಾರೆ. ಅವರ ಜೀವನವು ಸಾಹಸಮಯವೂ, ಉಲ್ಲಾಸಭರಿತವೂ ಆಗುವಂತೆ ಮಾಡಿದ್ದಾರೆ.

ಶಾಲಾ ವಿದ್ಯಾಭ್ಯಾಸ ಕ್ರಮಕ್ಕೆ ಎಲ್ಲಾ ರೀತಿಯಲ್ಲಿಯೂ, ಸ್ಕೌಟಿಂಗ್ ಒಂದು ಪೂರಕವಾದ ಕಾರ್ಯಕ್ರಮವೇ ಸರಿ. 1817–18ರ ರಾಜಾಜ್ಞೆಯಲ್ಲಿ ಈ ಅಂಶವನ್ನು ಕಾಣುತ್ತೇವೆ. ಎಲ್ಲಾ ವಿದ್ಯಾವೇತ್ತರೂ ಅದರ ಉನ್ನತ ಮೌಲ್ಯಗಳನ್ನೂ, ಆದರ್ಶಗಳನ್ನೂ ಮೆಚ್ಚಿಕೊಂಡು, ಅದರ ಬೆಳವಣಿಗೆಗೆ ಉತ್ತೇಜನ ನೀಡುತ್ತಾ ಬಂದಿದ್ದಾರೆ. ಶಾಲಾ ವಿದ್ಯಾಭ್ಯಾಸ ಕ್ರಮಕ್ಕೆ ಸೇರಿದಂತೆ, ಅದಕ್ಕೆ ಪೂರಕವಾದ ಸ್ಕೌಟ್ ಶಿಕ್ಷಣವೂ ಬೆಸೆದುಕೊಂಡಾಗ, ಪ್ರತಿ ಬಾಲಕನೂ ನಾವು ಆಶಿಸುವಂತೆ ಉತ್ತಮ ಮಾನವನಾಗಿ, ಉತ್ತಮ ಪೌರನಾಗಿ ವಿಕಾಸಹೊಂದುತ್ತಾನೆ.

ನ್ಯೂಯಾರ್ಕ್‌ನ ಕೊಲಂಬಿಯಾ ವಿಶ್ವ ವಿದ್ಯಾಲಯದ ಡೀನ್ ಜೇಮ್ಸ್, ಇ. ರಸೆಲ್‌ರವರು ಅಭಿಪ್ರಾಯ ಪಟ್ಟಿರುವಂತೆ "ಸ್ಕೌಟ್ ಕಾರ್ಯಕ್ರಮವು, ಹಿರಿಯನ ಕೆಲಸವನ್ನು ಬಾಲಕನ ಅಳತೆಗೆ ಹೊಂದಿಸಿದಂತಾಗಿದೆ."ಮುಂದೆ ಉತ್ತಮ ಮಾನವನಾಗಲು ತರಬೇತಿ ಆದಕಾರಣ, ಬಾಲಕನಿಗೆ ಅದು ಆಕರ್ಷಕವಾಗಿದೆ. ಹಿರಿಯನು ಮಾಡಲಾಗದ ಯಾವ ಕೆಲಸವನ್ನೂ, ಬಾಲಕನು ಮಾಡಬೇಕೆಂದು ಆಶಿಸುವುದಿಲ್ಲವಾದ ಕಾರಣ, ಅದು ಬಾಲಕನಿಗೆ ಮತ್ತಷ್ಟು ಆಪ್ಯಾಯಮಾನವಾಗಿದೆ.

ಶಾಲಾ ಶಿಕ್ಷಣಕ್ಕೆ ಅತ್ಯಂತ ಪೂರಕವಾದ, ಉಪಯುಕ್ತವಾದ ಶಿಕ್ಷಣವು ಸ್ಕೌಟಿಂಗ್ ನಲ್ಲಿದೆ. ಅದರಿಂದ ಬಾಲಕನನ್ನು ಹಂತ ಹಂತವಾಗಿ ಅವನ ಪ್ರಸ್ತುತಮಟ್ಟದಿಂದ ಮುಂದೆ ಅವನಲ್ಲಿ ಆಶಿಸುವ ಉನ್ನತ ಮಟ್ಟಕ್ಕೆ ಏರಿಸಲಾಗುತ್ತದೆ. ಬಾಲಕನು ನಾವು ಆಶಿಸುವ ರೀತಿಯಲ್ಲಿ ಉತ್ತಮ ಮಾನವನೂ, ಉತ್ತಮ ಪೌರನೂ ಆಗಲು ಒತ್ತಾಸೆ ನೀಡುತ್ತದೆ.

ಸ್ಕೌಟಿಂಗ್‌ನ ಪಠ್ಯಕ್ರಮವಲ್ಲದೆ, ಅತ್ಯಾಕರ್ಷಣೀಯ ಅಂಶವೆಂದರೆ ಅದರ ವಿಧಾನಗಳು. ಅವುಗಳಲ್ಲಿ ಎರಡು ಮುಖ್ಯ ಅಂಶಗಳು ಎದ್ದು ಕಾಣುತ್ತವೆ. 1) ಹವ್ಯಾಸಗಳು ರೂಪುಗೊಳ್ಳುತ್ತವೆ. 2) ಸ್ಕೌಟಿಂಗ್‌ನಿಂದ ಬಾಲಕರು ಸದಾಚಾರ ಸಂಪನ್ನರಾಗಿ, ಸಂಯಮಿಗಳಾಗಿ, ಸ್ವಾವಲಂಬಿಗಳಾಗಿ, ಸನ್ಮಾರ್ಗಪ್ರವರ್ತಕರಾಗಿ, ಸತ್ಕಾರ್ಯಗಳನ್ನು ಮಾಡುತ್ತಾ, ಎಲ್ಲರೊಡನೆ ಹೊಂದಾಣಿಕೆಯುಳ್ಳವರಾಗಿ ವಿಕಾಸಹೊಂದುತ್ತಾರೆ.

ಬಾಲಕರು ಮುನ್ನುಗ್ಗಿ ಜವಾಬ್ದಾರಿಯುತ ಕೆಲಸಗಳನ್ನು ಮಾಡಲು ಬೇಕಾದ ಸ್ಥೈರ್ಯ, ಕೆಚ್ಚು ಮುಂತಾದ ಗುಣಗಳನ್ನು ಅಭಿವೃದ್ಧಿಗೊಳಿಸಿ, ಪ್ರಜಾಪ್ರಭುತ್ವ ರೀತಿಯ ಆಡಳಿತ ವಿಧಾನದಲ್ಲಿ ವಿಕಾಸಹೊಂದಲು ಸ್ಕೌಟಿಂಗ್ ಅವಕಾಶ ಮಾಡಿಕೊಡುತ್ತದೆ. ಬಾಲಕರು ಒಟ್ಟಾಗಿದ್ದುಕೊಂಡು, ತಂಡಸ್ಫೂರ್ತಿಯನ್ನು ಅಭಿವೃದ್ಧಿಪಡಿಸಿಕೊಂಡು ಕೆಲಸಮಾಡಲು ಕಲಿಯುತ್ತಾರೆ. ನಾವು ಈ ಅಂಶವನ್ನು ಸ್ಕೌಟ್‌ದಳಗಳಲ್ಲಿ ವಿಶೇಷವಾಗಿ ಪಟಾಲಂಗಳಲ್ಲಿ ಕಾಣುತ್ತೇವೆ.



ಅಧ್ಯಾಯ–2

# ಗುರಿ–ನೀತಿ–ವಿಧಾನಗಳು–ಮೂಲತತ್ತ್ವಗಳು

ಸ್ಕೌಟಿಂಗ್‌ನ ಗುರಿ ಬಾಲಕರನ್ನು ಉತ್ತಮ ಪೌರರನ್ನಾಗಿ ರೂಪಿಸುವುದು. ಇದನ್ನು ನಾಲ್ಕು ವಿಧಗಳಲ್ಲಿ ಸಾಧಿಸಲಾಗುತ್ತದೆ.

i) ಬಾಲಕರಲ್ಲಿ ಸಚ್ಚಾರಿತ್ರ್ಯವನ್ನು ಮೂಡಿಸಿ ಅಭಿವೃದ್ಧಿಪಡಿಸುವುದು.

ii) ಸದೃಢವಾದ ಆರೋಗ್ಯಕರ ಅಭ್ಯಾಸಗಳಿಗೆ ಉತ್ತೇಜನ ನೀಡುವುದು.

iii) ಕರಕುಶಲ ಕಲೆ ಮತ್ತು ಉಪಯುಕ್ತ ಕೌಶಲಗಳಲ್ಲಿ ಶಿಕ್ಷಣ ನೀಡುವುದು.

iv) ಸೇವಾ ಮನೋಭಾವನೆಯನ್ನು ಸೂಕ್ತ ರೀತಿಯಲ್ಲಿ ಬೆಳೆಸಿಕೊಂಡು, ಉತ್ತಮ ರೀತಿಯ ಸೇವೆ ಮಾಡಲು ಪ್ರೇರಣೆ ನೀಡುವುದು.

ಬೇಡನ್ ಪೊವೆಲ್‌ರವರು ತಮ್ಮ ಮೊದಲ ಪುಸ್ತಕವಾದ "ಎಯ್‌ಡ್ಸ್ ಟು ಸ್ಕೌಟ್ ಮಾಸ್ಟರ್‌ಷಿಪ್" ಎಂಬ ಪುಸ್ತಕದಲ್ಲಿ ಹೀಗೆ ಬರೆಯುತ್ತಾರೆ:

"ಸ್ಕೌಟ್ ಶಿಕ್ಷಣದ ಗುರಿಯಾದರೂ ಬಾಲಕರನ್ನು ನಮ್ಮ ಭಾವೀ ಪೌರರನ್ನಾಗಿಸುವುದು ಮತ್ತು ಅವರ ಪೌರತ್ವದ ಗುಣ ಮಟ್ಟವು ಉತ್ತಮವಾಗಿರಲು ಅವರ ಸಚ್ಚಾರಿತ್ರ್ಯ ಮತ್ತು ಆರೋಗ್ಯದ ಕಡೆ ವಿಶೇಷ ಗಮನ ಹರಿಸುವುದು. ಸ್ವಾರ್ಥವನ್ನು ಬಿಟ್ಟು, ಸೇವೆ ಮಾಡುವಂತೆ ಪ್ರಚೋದಿಸುವುದು, ಪ್ರತಿ ಬಾಲಕನೂ ತನ್ನ ಸಹಮಾನವರಿಗೆ ಸಮರ್ಥ ರೀತಿಯಲ್ಲಿ ಸೇವೆಗೈಯುವ ಗುರಿಯನ್ನಿಟ್ಟುಕೊಂಡು, ನೈತಿಕವಾಗಿಯೂ, ದೈಹಿಕವಾಗಿಯೂ ಬೇಕಾದ ಸಾಮರ್ಥ್ಯವನ್ನು ಪಡೆಯುವುದು. ಪೌರತ್ವವೆಂದರೆ ಸಮಾಜದ ವಿಷಯದಲ್ಲಿ ಕ್ರಿಯಾಶೀಲವಾದ ನಿಷ್ಠೆ" ಎಂಬುದಾಗಿ ಅವರು ಅಭಿಪ್ರಾಯ ಪಡುತ್ತಾರೆ.

ಒಟ್ಟಿನಲ್ಲಿ ಹೇಳುವುದಾದರೆ, ಬಾಲಕರಲ್ಲಿ ಸ್ವಾರ್ಥಭಾವನೆಯು ಸಹಜವಾದುದು. ಆದರೆ ಅದನ್ನು ತೊಡೆಯುವಂತೆ ಮಾಡುವುದು ನಮ್ಮ ಕರ್ತವ್ಯ. ಬಾಲಕರು ದೈಹಿಕವಾಗಿಯೂ, ಮಾನಸಿಕವಾಗಿಯೂ, ಸೂಕ್ತರೀತಿಯಲ್ಲಿ ವಿಕಾಸಹೊಂದಿ, ಸಹಮಾನವರಿಗೆ ಸಮರ್ಥ ರೀತಿಯಲ್ಲಿ ಸೇವೆಸಲ್ಲಿಸುವಂತಾಗ

ಬೇಕೆಂಬುದು ನಮ್ಮ ಆಶಯವಾಗಿದೆ. ಈ ಮೂಲಕ ಬಾಲಕರಲ್ಲಿ ಪೌರತ್ವಶೀಲತೆ ಮತ್ತು ಸೇವಾ ಮನೋಭಾವನೆಯನ್ನು ವೃದ್ಧಿಪಡಿಸುವ ಕಾರ್ಯದಲ್ಲಿ ನಿರತರಾಗಿದ್ದೇವೆ. ಬಾಲಕರನ್ನು ಕ್ರಿಯಾಶೀಲ ಪೌರರನ್ನಾಗಿ ತಯಾರಿಸುವುದು ಮತ್ತು ಸೂಕ್ತ ರೀತಿಯಲ್ಲಿ ಸೇವಾ ಮನೋಭಾವನೆಯನ್ನು ರೂಢಿಸಿಕೊಳ್ಳುವಂತೆ ಮಾಡುವುದು ನಮ್ಮ ಅಂತಿಮ ಗುರಿಯಾಗಿದೆ. ಬಾಲಕರ ಸಚ್ಚಾರಿತ್ರ್ಯ ನಿರ್ಮಾಣ ಮತ್ತು ದೃಢವಾದ ಆರೋಗ್ಯಕರ ಅಭ್ಯಾಸಗಳನ್ನು ರೂಢಿಸಿಕೊಳ್ಳಲೂ, ಉಪಯುಕ್ತ ಕೌಶಲಗಳು ಮತ್ತು ಕರಕುಶಲ ಕಲೆಗಳನ್ನು ಕಲಿಯಲೂ, ಶಿಕ್ಷಣ ನೀಡುವುದು ನಮ್ಮ ಪ್ರಾರಂಭಿಕ ಗುರಿಯಾಗಿದೆ.

1. i. **ಸಚ್ಚಾರಿತ್ರ್ಯ :** ಇದನ್ನು ನಾವು ಪೆಟ್ರೋಲ್ ಪದ್ಧತಿ, ಸ್ಕೌಟ್ ನಿಯಮ, ಸ್ಕೌಟ್ ಕಲೆ, ಅರಣ್ಯ ಕೌಶಲ ಇವುಗಳ ಮೂಲಕ ಕಲಿಸುತ್ತೇವೆ. ಅಲ್ಲದೆ ತಂಡದ ಆಟಗಳು, ಶಿಬಿರ ಕಲೆಯಲ್ಲಿ ಬರುವ ವ್ಯಾವಹಾರಿಕ ಜಾಣತನ ಮತ್ತು ಪೆಟ್ರೋಲ್ ನಾಯಕನಾಗಿ ಜವಾಬ್ದಾರಿತನ ಇವುಗಳ ಮೂಲಕವೂ ಕಲಿಸುತ್ತೇವೆ.

   ii. **ಹೊರಾಂಗಣ ಜೀವನ :** ಪ್ರಕೃತಿಯಲ್ಲಿ ಸೃಷ್ಟಿಕರ್ತನ ಕೈವಾಡವಿರುವುದನ್ನು ಕಾಣುವುದು, ನಿಸರ್ಗ ಸೌಂದರ್ಯವನ್ನು ಸವಿಯುವುದು, ಸಕಲ ಜೀವರಾಶಿಯನ್ನೂ (ಪ್ರಾಣಿವರ್ಗ, ಸಸ್ಯವರ್ಗ) ಪ್ರೀತಿಸುವುದು, ಇವುಗಳನ್ನು ಕಲಿಯಲು ಸದವಕಾಶವಾಗಿದ್ದು, ಸಚ್ಚಾರಿತ್ರ್ಯ ನಿರ್ಮಾಣಕ್ಕೆ ಪೂರಕವಾಗಿರುತ್ತದೆ.

2. **ಆರೋಗ್ಯ ಮತ್ತು ಸದೃಢತೆ :** ಆಟಗಳು; ಕ್ರಮವರಿತ ವ್ಯಾಯಾಮ ಮತ್ತು ಆಹಾರ; ವೈಯಕ್ತಿಕ ಆರೋಗ್ಯ ಇವುಗಳ ಬಗ್ಗೆ ತಿಳುವಳಿಕೆ ಮತ್ತು ಅಭ್ಯಾಸಗಳ ಮೂಲಕ ಕಲಿಸಲಾಗುತ್ತದೆ.

3. **ಕರಕುಶಲ ಕಲೆ ಮತ್ತು ಕೌಶಲ :** ಒಳಾಂಗಣ ಚಟುವಟಿಕೆಗಳ ಮೂಲಕ; ಮಾರ್ಗಕಲ್ಪನೆ; ಸೇತುವೆ ನಿರ್ಮಾಣ; ಶಿಬಿರ ಪೀಠೋಪಕರಣಗಳು; ಕಲಾಭಿರುಚಿಯ ಅಭಿವ್ಯಕ್ತತೆ ಮುಂತಾದ ಕಾರ್ಯಕ್ರಮಗಳ ಮೂಲಕ ಕಲಿಸಲಾಗುತ್ತದೆ. ಈ ಕಲಿಕೆಯಿಂದ ಮಾಡುವ ಕೆಲಸವನ್ನು ಸಮರ್ಥ ರೀತಿಯಲ್ಲಿ ನಿರ್ವಹಿಸಲು ಸಾಧ್ಯವಾಗುತ್ತದೆ.

4. **ಪರಹಿತ ಸೇವೆ :** ಸೇವಾ ಮನೋಭಾವನೆಯನ್ನು ಅಭಿವೃದ್ಧಿಪಡಿಸಿಕೊಳ್ಳಲು ಧಾರ್ಮಿಕ ಜೀವನ ಮತ್ತು "ದಿನಕ್ಕೊಂದುಪಕಾರ" ಇವುಗಳನ್ನು ರೂಢಿಸಿಕೊಳ್ಳಬೇಕಾಗುತ್ತದೆ. ಅದೆಷ್ಟೇ ಸಣ್ಣದಾದರೂ, ಒಂದು ಉಪಕಾರದಿಂದ

ಹಿಡಿದು ಸಮಾಜ ಸೇವೆಯ ವರೆಗೆ, ಪ್ರಾಣಿಸಂರಕ್ಷಣೆ, ಅಪಘಾತಗಳನ್ನೆದುರಿಸುವುದು ಮುಂತಾದುವುಗಳು ಪರಹಿತ ಸೇವೆಯೆನಿಸುತ್ತವೆ.

**ನೆಲಗಟ್ಟು :** ಸ್ಕೌಟ್ ಸಂಸ್ಥೆಯು, ಮೂಲಾಧಾರವೆನಿಸಿದ ಹತ್ತು ಅಂಶಗಳ ಮೇಲೆ ನೆಲೆಗೊಂಡಿದೆ.

i) **ದೇವರಲ್ಲಿ ನಂಬಿಕೆ**

ii) **ಸ್ಕೌಟ್ ನಿಯಮ ಮತ್ತು ಪ್ರತಿಜ್ಞೆಗಳ ಪರಿಪಾಲನೆ**

iii) ಹೊರಾಂಗಣ ಚಟುವಟಿಕೆಗಳು

**iv) ಐಚ್ಛಿಕ ಸದಸ್ಯತ್ವ**

v) ಪೆಟ್ರೋಲ್ ಪದ್ಧತಿ

vi) ದೇಶ ಪ್ರೇಮ

**viii) ವಿಶ್ವ ಭ್ರಾತೃತ್ವ**

viii) ರಾಜಕೀಯ ಪ್ರಭಾವದಿಂದ ದೂರವಿರುವುದು

ix) ಮಾಡುವ ಮೂಲಕ ಕಲಿಕೆ

x) ಪರಹಿತ ಸೇವೆ

ದೇವರಲ್ಲಿ ನಂಬಿಕೆಯು ಬಹುಮುಖ್ಯ ಅಂಶ. ನಾಸ್ತಿಕರಿಗೆ ಸಂಸ್ಥೆಯಲ್ಲಿ ಅವಕಾಶವಿಲ್ಲ. ದೇವರಿಗೆ ಕರ್ತವ್ಯವು ಸ್ಕೌಟುಗಳ ಮೂಲತತ್ತ್ವಗಳಲ್ಲಿ ಮೊದಲನೆಯದು. ಸೃಷ್ಟಿಕರ್ತನಾದ ದೇವರು ಪ್ರೇಮಮಯನೆಂಬುದನ್ನು ಸ್ಕೌಟುಗಳು ಅರಿತುಕೊಂಡು ತಮ್ಮ ಜೀವನವನ್ನು ಪ್ರೇಮಮಯವಾಗಿಸಿಕೊಳ್ಳಬೇಕು.

ಸ್ಕೌಟ್‌ನಿಯಮ, ಪ್ರತಿಜ್ಞೆಗಳು ಸಹ ಪ್ರಮುಖ ಅಂಶಗಳು. ಸ್ಕೌಟ್ ನಿಯಮವು ಉತ್ತಮ ನಡವಳಿಕೆಯ ಒಂದು ನಿಯಮ ಸಂಹಿತೆ. ಅದಕ್ಕೂ ಹೆಚ್ಚಾಗಿ ಸ್ಕೌಟಾದವನು ಹೇಗೆ ನಡೆದುಕೊಳ್ಳಬೇಕು, ಎಂಬುದರ ವಿವರಣೆ, ಸ್ಕೌಟ್ ಪ್ರತಿಜ್ಞೆಯು, ಸ್ಕೌಟ್‌ನ ನಿತ್ಯಜೀವನದ ಹಾದಿಯಲ್ಲಿ ಬೆಳಕು ಚೆಲ್ಲುವ "ದಾರಿದೀಪ". ಇವುಗಳು ಅವನು ಮಾಡಬಹುದಾದ ಹಾಗೂ ಮಾಡಬಾರದ ವಿಷಯಗಳ ಬಗ್ಗೆ ತಿಳಿಸುತ್ತದೆ.

ಸ್ಕೌಟ್ ಪ್ರತಿಜ್ಞೆಯ ಮೂರು ಭಾಗಗಳು **ದೇವರಿಗೆ ನಮ್ಮ ಕರ್ತವ್ಯವನ್ನೂ, ದೇಶಕ್ಕೆ ಕರ್ತವ್ಯ**ದ ಮೂಲಕ **ಪರಹಿತ ಚಿಂತನೆಯನ್ನೂ,** ಸ್ಕೌಟ್ ನಿಯಮ ಪಾಲನೆಯ ಮೂಲಕ ಈ ಎರಡೂ ಕಾರ್ಯಗಳನ್ನು ಕ್ರಿಯಾಶೀಲವಾಗಿ ನೆರವೇರಿಸಲು ನಾವು

ದೈಹಿಕವಾಗಿ, ಮಾನಸಿಕವಾಗಿ ಸಜ್ಜಾಗಬೇಕು. ಆ ದಿಕ್ಕಿನಲ್ಲಿ ಸ್ವಾಭಿವೃದ್ಧಿಯನ್ನು, ಸದಾಕಾಲ ನೆನಪಿಗೆ ತರುತ್ತದೆ.

ಇದನ್ನು ಭಾರತೀಯ ಪರಂಪರೆಯ ಭಾಷೆಯಲ್ಲಿ ಹೇಳುವುದಾದರೆ 'ದೇವಋಣ', 'ಋಷಿಋಣ' ಮತ್ತು 'ಪಿತೃಋಣ'ಗಳಿಗೆ ಹೋಲಿಸಬಹುದು.

ಸ್ಕೌಟ್ ನಿಯಮ ಮತ್ತು ಪ್ರತಿಜ್ಞೆಗಳು, ಸ್ಕೌಟ್‌ಗಳು ತಮ್ಮ ದಿನ ನಿತ್ಯ ಜೀವನದಲ್ಲಿ ಅಳವಡಿಸಿಕೊಳ್ಳಬೇಕಾದ ಅಂಶಗಳನ್ನು ತಿಳಿಸುವುದಲ್ಲದೆ, ಅವರು ಮಾಡುವ ಕೆಲಸಗಳ ಬೇಕು ಬೇಡಗಳನ್ನೂ ತಿಳಿಸುತ್ತದೆ.

ಸ್ಕೌಟಿಂಗ್‌ನ ಬಹುತೇಕ ಕಾರ್ಯಕ್ರಮಗಳು ಹೊರಾಂಗಣದಲ್ಲಿಯೇ ನಡೆಯಬೇಕು. ಹೊರಾಂಗಣ ಜೀವನ ಮತ್ತು ಕಾರ್ಯಕ್ರಮಗಳ ಮೂಲಕ ಬಾಲಕರು ಸೃಷ್ಟಿಕರ್ತನ ಇರವು ಮತ್ತು ಅರಿವನ್ನು ಮೂಡಿಸಿಕೊಳ್ಳಲು ಸಹಾಯವಾಗುತ್ತದೆ. ಪ್ರಕೃತಿ ವೈಚಿತ್ರ್ಯಗಳನ್ನು ಅಭ್ಯಾಸ ಮಾಡಲು ಸಹಾಯವಾಗುತ್ತದೆ. ಹೊರಾಂಗಣ ಜೀವನದಿಂದ ದೊರಕುವ ಆರೋಗ್ಯಭಾಗ್ಯ, ಮನೋಲ್ಲಾಸ, ಭಾವ ವೈಶಾಲ್ಯತೆ, ಸಮೈಕ್ಯತೆ ಮುಂತಾದ ಅಂಶಗಳು ನಮ್ಮ ಜೀವನವನ್ನು ಸಂಪನ್ನಗೊಳಿಸುತ್ತವೆ.

ಸ್ವಇಚ್ಛೆಯಿಂದ ಸದಸ್ಯರಾಗುವುದು ಸ್ಕೌಟಿಂಗ್‌ನ ವಿಶೇಷತೆ, ಯಾವುದೇ ರೀತಿಯ ಒತ್ತಡಗಳಿಗೆ ಮಣಿಯದೆ, ಯಾವುದೇ ರೀತಿಯ ಸ್ವಲಾಭವನ್ನೂ ಆಶಿಸದೆ, ಸ್ಕೌಟಿಂಗ್ ಅನ್ನು ಸೇರುವ ಬಾಲಕರು, ಸ್ವತಂತ್ರ ಭಾವನೆಗಳಿಂದ ವಿಕಾಸ ಹೊಂದುತ್ತಾರೆ.

ಇನ್ನು ಪೆಟ್ರೋಲ್ ಪದ್ಧತಿಯ ಅನುಷ್ಠಾನದಿಂದ ಬಾಲಕರು ಜವಾಬ್ದಾರಿಯುತ ಕಾರ್ಯನಿರ್ವಹಣೆ, ಯೋಚಿಸಿ ಕೆಲಸ ಮಾಡುವುದು, ತಂಡ ಸ್ಫೂರ್ತಿ (Team Spirit) ಪ್ರಾತಿನಿಧಿಕ ತತ್ತ್ವಗಳ (Democratic Principles) ಆಚರಣೆ, ಅನುಷ್ಠಾನ ಇವುಗಳನ್ನು ಕ್ರಿಯಾಶೀಲವಾಗಿ ಕಲಿತು, ಉತ್ತಮ ಗುರಿಯನ್ನು ಸಾಧಿಸಲು ತಯಾರಾಗುತ್ತಾರೆ. ಇದರಿಂದ ಅವರು ವಿಶ್ವಾಸಾರ್ಹರಾಗಿ ವಿಕಾಸಹೊಂದುತ್ತಾರೆ.



ಅಧ್ಯಾಯ–3

# ಸಂಸ್ಥೆಯ ಮೂರು ಭಾಗಗಳು

ಬಾಲಕರ ವಯೋಮಿತಿಗನುಗುಣವಾದ, ಮಾನಸಿಕ ಮತ್ತು ದೈಹಿಕ ಅವಶ್ಯಕತೆಗಳನ್ನನುಸರಿಸಿದ, ಸ್ಕೌಟ್ ಸಂಸ್ಥೆಯ ಶಿಕ್ಷಣವು ಮೂರು ವಿಭಾಗಗಳಲ್ಲಿ ಕೆಲಸ ಮಾಡುತ್ತದೆ – ಮರಿಗಳು, ಸ್ಕೌಟ್‌ಗಳು, ರೋವರ್‌ಗಳು.

**ಮರಿಗಳ (ಕಬ್ಸ್) ವಿಭಾಗ :**

ಈ ವಿಭಾಗದಲ್ಲಿ 5 + ನಿಂದ 9 ವರ್ಷಗಳು ಕಳೆದು 10 ವರ್ಷಗಳು ತುಂಬದೆ ಇರುವ ವರೆಗಿನ ಬಾಲಕರಿಗೆ ಶಿಕ್ಷಣ ನೀಡಲಾಗುತ್ತದೆ. ಕನಿಷ್ಠ 12 ರಿಂದ ಗರಿಷ್ಠ 24 ರವರೆಗೆ ಬಾಲಕರಿರಬಹುದಾದ ಮರಿಗಳ ಘಟಕವನ್ನು 'ಮರಿಗಳ ಹಿಂಡು' (Cub Pack) ಎಂದು ಹೇಳಲಾಗುತ್ತದೆ. ಆರು, ಆರು ಮರಿಗಳಿರುವಂತೆ ಹಿಂಡನ್ನು ವಿಭಾಗಿಸಿ ಷಟ್ಕಗಳನ್ನು ರಚಿಸಲಾಗುತ್ತದೆ. ಷಟ್ಕದಲ್ಲೊಬ್ಬ ಮರಿಯು ನೇತೃತ್ವ ವಹಿಸಿ ಕೊಂಡು ಆರಾಳಿಯೆನಿಸಿಕೊಳ್ಳುತ್ತಾನೆ. ವಯಸ್ಕರೊಬ್ಬರು ಹಿಂಡಿನ ಜವಾಬ್ದಾರಿ ನಾಯಕತ್ವವನ್ನು ವಹಿಸಿಕೊಳ್ಳುತ್ತಾರೆ. ಅವರೇ ಕಬ್ ಮಾಸ್ಟರು. ಕಬ್ ಮಾಸ್ಟರಿಗೆ ಸಹಾಯಕರಾಗಿ ಒಬ್ಬಿಬ್ಬರು ಸಹಾಯಕ ಕಬ್ ಮಾಸ್ಟರುಗಳಿರಬಹುದು. ಕಬ್ ಮಾಸ್ಟರುಗಳನ್ನೂ, ಸಹಾಯಕ ಕಬ್ ಮಾಸ್ಟರುಗಳನ್ನೂ ಸೇರಿಸಿ ಪ್ಯಾಕ್ ಸ್ಕೌಟರ್ಸ್ ಎಂದು ಕರೆಯುತ್ತಾರೆ.

ಆಟಗಳು ಮತ್ತು ಅಭ್ಯಾಸಗಳ ಮೂಲಕವೇ ಮರಿಗಳ ಶಿಕ್ಷಣವು ನಡೆಯುತ್ತದೆ. ಕಬ್ ಮಾಸ್ಟರು ವಾತ್ಸಲ್ಯಭರಿತ ತಾಯಿಯಂತೆ, ತಂದೆಯಂತೆ ಉಲ್ಲಾಸಭರಿತ ಆಟಗಾರರಂತೆ ಮರಿಗಳೊಡನೆ ಬೆರೆಯುತ್ತಾರೆ. ಹಿಂಡು ಒಂದು ಸುಖೀ ಕುಟುಂಬದೋಪಾದಿಯಲ್ಲಿ ಕೆಲಸ ಮಾಡುತ್ತದೆ. ಆ ರೀತಿಯಲ್ಲೇ ನಡೆದುಕೊಳ್ಳುತ್ತದೆ. ಆ ಭಾವನೆಯ ಮೂಲಕವೇ ಪ್ರತಿ ಚಟುವಟಿಕೆಯೂ ನಡೆಯುತ್ತದೆ.

**ಸ್ಕೌಟ್ ವಿಭಾಗ:**

10+ನಿಂದ 17ರ ವರೆಗಿನ ಬಾಲಕರಿಗೆ ಈ ವಿಭಾಗದಲ್ಲಿ ಶಿಕ್ಷಣ ಪಡೆಯಲು ಅವಕಾಶವಿರುತ್ತದೆ. 6–8 ಸ್ಕೌಟುಗಳಿರುವಂತೆ ಸಣ್ಣ ಸಣ್ಣ ಗುಂಪುಗಳನ್ನಾಗಿ–

ಪೆಟ್ರೋಲ್/ಪಟಾಲಂ ಆಗಿ ವಿಂಗಡಿಸಿ ಶಿಕ್ಷಣ ನೀಡಲಾಗುತ್ತದೆ. 2,3 ಅಥವಾ 4 ಪಟಾಲಂಗಳಿರುವ ಘಟಕವನ್ನು ಸ್ಕೌಟ್ ದಳವೆಂದು (Scout Troop) ಕರೆಯಲಾಗುತ್ತದೆ. ಒಂದು ಸ್ಕೌಟ್‌ದಳದಲ್ಲಿ ಸಾಮಾನ್ಯವಾಗಿ 32 ಸದಸ್ಯರಿರುತ್ತಾರೆ. (12 ಕನಿಷ್ಠ 32 ಗರಿಷ್ಠ) ಸ್ಕೌಟ್ ದಳದ ನಾಯಕರೇ ಸ್ಕೌಟ್ ಮಾಸ್ಟರು. ಪ್ರತಿ ಪಟಾಲಂಗೂ ಒಬ್ಬ ನಾಯಕನಿರುತ್ತಾನೆ. ಅವನೇ ಪೆಟ್ರೋಲ್ ಲೀಡರು. ಪೆಟ್ರೋಲ್‌ನ ಆಗುಹೋಗುಗಳಿಗೂ, ಅಭಿವೃದ್ಧಿಗೂ ಅವನು ಜವಾಬ್ದಾರನಾಗಿರುತ್ತಾನೆ. ಸ್ಕೌಟ್ ಮಾಸ್ಟರು ಬಾಲಕರ ಆಸೆ, ಆಕಾಂಕ್ಷೆಗಳನ್ನೂ, ಅವಶ್ಯಕತೆಗಳನ್ನೂ ತಿಳಿದಿರುವ ಹಿರಿಯಣ್ಣನಂತಿರುತ್ತಾರೆ. ಬಾಲಕರ ಇಂಗಿತವನ್ನರಿತು, ತದನುಗುಣವಾಗಿ ದಳದ ಕಾರ್ಯಕ್ರಮಗಳನ್ನು ರೂಪಿಸಿಕೊಂಡು ದಳವನ್ನು ನಡೆಸುವ ಜವಾಬ್ದಾರಿ ಸ್ಕೌಟ್ ಮಾಸ್ಟರದ್ದು.

ಸ್ಕೌಟ್ ಮಾಸ್ಟರಿಗೆ ಸಹಾಯಕರಾಗಿ ಒಬ್ಬಿಬ್ಬರು ಸಹಾಯಕ ಸ್ಕೌಟ್ ಮಾಸ್ಟರುಗಳಿರಬಹುದು/ಇರುತ್ತಾರೆ.

11–14 ವಯಸ್ಸಿನ ಬಾಲಕರ ವಿಷಯದಲ್ಲಿ ಅನುಸರಿಸಿದ ವಿಧಾನಗಳಲ್ಲದೆ, 15 + ಬಾಲಕರ ವಿಷಯದಲ್ಲಿ ಅವುಗಳಿಂದ ಪ್ರತ್ಯೇಕವಾದ ರೀತಿ, ನೀತಿಗಳನ್ನನುಸರಿಸಿ ಶಿಕ್ಷಣ ನೀಡಬೇಕಾಗುತ್ತದೆ ಮತ್ತು ಮುಂದುವರೆಸಬೇಕಾಗುತ್ತದೆ. 15 ವಯಸ್ಸು ಮೀರಿದ ಬಾಲಕರು ಹೆಚ್ಚು ಜವಾಬ್ದಾರಿ ಹೊರಲು ಸಿದ್ಧವಾಗಿರುತ್ತಾರೆ. ಕಷ್ಟಕರವಾದರೂ ಸರಿಯೆ, ಹೆಚ್ಚುವರಿ ಕೆಲಸಗಳನ್ನು ಮಾಡಲು ತವಕಿಸುತ್ತಾರೆ. ಸಾಮಾನ್ಯವಾಗಿ ಇಂತಹ ಸ್ಕೌಟುಗಳನ್ನು ಪ್ರತ್ಯೇಕಿಸಿ, ಒಂದು ಹಿರಿಯ ಸ್ಕೌಟುಗಳ ಪಟಾಲಂ ರಚಿಸಬಹುದು.

**ರೋವರ್ ವಿಭಾಗ :**

16 ವರ್ಷ ವಯಸ್ಸಿನ ಬಾಲಕರನ್ನು ರೋವರ್‌ಗಳಾಗಿ ಸೇರಿಸಿಕೊಳ್ಳಬಹುದು ಮತ್ತು ಅವರಿಗೆ ರೋವರಿಂಗ್ ಶಿಕ್ಷಣ ನೀಡಬಹುದು. ರೋವರ್‌ಗಳ ಗುಂಪನ್ನು ರೋವರ್ ತಂಡ (Rover Crew) ಎನ್ನುತ್ತಾರೆ. ಬಾಲಕರಿಗೆ 15 ವರ್ಷ ಕಳೆದಿದ್ದು, ಕಾಲೇಜು ಅಥವಾ ವಿಶ್ವ ವಿದ್ಯಾಲಯದ ಮೆಟ್ಟಿಲು ಹತ್ತಿದ್ದರಾಯಿತು, ಅವನನ್ನು ರೋವರ್, ಉಮೇದುವಾರನನ್ನಾಗಿ ಸೇರಿಸಿಕೊಳ್ಳಬಹುದು. ತಂಡಕ್ಕೆ ಮಾರ್ಗದರ್ಶನ ನೀಡುವ ನಾಯಕನಿಗೆ 'ರೋವರ್ ಲೀಡರ್' ಎಂದು ಕರೆಯುತ್ತಾರೆ. ಸ್ಕೌಟ್ ದಳದಲ್ಲಿದ್ದಂತೆ ರೋವರ್ ತಂಡದ ಪಟಾಲಂಗಳು ಶಾಶ್ವತ ವ್ಯವಸ್ಥೆಯಲ್ಲ. ಅವಶ್ಯಕತೆಗೆ ತಕ್ಕಂತೆ ಅವು ಬದಲಾಗುತ್ತವೆ. ಇವುಗಳನ್ನು ತಾತ್ಕಾಲಿಕ/ಸಾಂದರ್ಭಿಕ ಪಟಾಲಂ ಗಳೆನ್ನಬಹುದು. ವರ್ಷಾರಂಭದಲ್ಲಿ ತಂಡದ ಸದಸ್ಯತ್ವಕ್ಕನುಸಾರವಾಗಿ,

ಸಾಮಾನ್ಯವಾಗಿ 4-6 ರೋವರ್ ಗಳಿಗೊಬ್ಬರಂತೆ, ತಂಡದ ಹಿರಿಯ, ಅನುಭವೀ ಸದಸ್ಯರುಗಳ ಪೈಕಿ ರೋವರ್ ಸಂಗಾತಿ (ರೋವರ್ ಮೇಟ್)ಗಳನ್ನು ಚುನಾಯಿಸಲಾಗುತ್ತದೆ. ರೋವರ್ ಸಂಗಾತಿಗಳು, ಪೆಟ್ರೋಲ್ ಲೀಡರುಗಳೇನೋ ಸರಿ; ಆದರೆ ಅವರಿಗೆ ಪೆಟ್ರೋಲ್ ಲೀಡರ್ ರೀತಿಯ ನಿರ್ದಿಷ್ಟ ಜವಾಬ್ದಾರಿ ಇರುವುದಿಲ್ಲ. ಕೆಲಸ ಕಾರ್ಯಗಳು, ಯೋಜನೆಗಳಿಗೆ ಬೇಕಾದ ಹಾಗೆ ಜವಾಬ್ದಾರಿ ನಿರ್ವಹಿಸಬೇಕಾಗುತ್ತದೆ. ರೋವರ್‌ಗಳು, ರೋವರ್ ಸಂಗಾತಿಗಳೊಡನೆ, ಸ್ವಇಚ್ಛೆಯ ಮೇಲೆ ಜೊತೆಗೂಡುತ್ತಾರೆ. ಹೀಗೆ ಕೈಗೆತ್ತಿಕೊಂಡ ಕಾರ್ಯಯೋಜನೆ ಪೂರೈಸುವವರೆಗೆ ಆ ಪೆಟ್ರೋಲು ಅಸ್ತಿತ್ವದಲ್ಲಿರುತ್ತದೆ. ಕೆಲಸವು ಮುಗಿದ ಮೇಲೆ ಅದು ವಿಸರ್ಜಿತವಾಗುತ್ತದೆ. ಮತ್ತೆ ಹೊಸ ಯೋಜನೆ ಹೊಸ ಪೆಟ್ರೋಲು. ರೋವರ್ ಲೀಡರು ತನ್ನ ಹಿರಿತನದ ಮಾರ್ಗದರ್ಶನವನ್ನು ನೀಡುತ್ತಾ ಗೆಳೆಯನಾಗಿ, ದಾರ್ಶನಿಕನಾಗಿ, ಮಾರ್ಗದರ್ಶಕನಾಗಿ ತಂಡವನ್ನು ಮುನ್ನಡೆಸುತ್ತಾನೆ.

ರೋವರ್ ಲೀಡರುಗಳಿಗೆ ಸಹಾಯಕರಾಗಿ ಒಬ್ಬಿಬ್ಬರು ಸಹಾಯಕ ರೋವರ್ ಲೀಡರುಗಳಿರಬಹುದು.

**ಸ್ಕೌಟರು :**

ಸ್ಕೌಟ್ ವಿಭಾಗದಲ್ಲಿ ಸನ್ನದು ಪಡೆದು, ನಾಯಕತ್ವವನ್ನು ವಹಿಸಲು ನೇಮಕಾತಿ ಪಡೆದಿರುವ ವ್ಯಕ್ತಿಯನ್ನು ಸ್ಕೌಟರ್ ಎನ್ನಲಾಗುತ್ತದೆ. ಮರಿಗಳ ಹಿಂಡಾಗಲೀ, ಸ್ಕೌಟ್ ದಳವಾಗಲೀ, ರೋವರ್ ತಂಡವಾಗಲೀ, ಕಾರ್ಯದಕ್ಷತೆ ಇರುವ ಹಿರಿಯರ ಮಾರ್ಗದರ್ಶನ ಬೇಕಾಗುತ್ತದೆ. ಮರಿಗಳ ಹಿಂಡಿಗೆ ಕಬ್ ಮಾಸ್ಟರೂ, ಸ್ಕೌಟ್ ದಳಕ್ಕೆ ಸ್ಕೌಟ್ ಮಾಸ್ಟರೂ, ರೋವರ್ ತಂಡಕ್ಕೆ ರೋವರ್ ಲೀಡರೂ ನಾಯಕರುಗಳು. ಇವರುಗಳಿಗೆ ದಿನನಿತ್ಯದ ಕೆಲಸ ಕಾರ್ಯಗಳಲ್ಲಿ ಸಹಾಯಕರಾಗಿ ಸಹಾಯಕ ಕಬ್ ಮಾಸ್ಟರೂ, ಸಹಾಯಕ ಸ್ಕೌಟ್ ಮಾಸ್ಟರೂ, ಸಹಾಯಕ ರೋವರ್ ಲೀಡರೂ ಇರುತ್ತಾರೆ. ಅಂತಹ ಸಹಾಯಕ ನಾಯಕರುಗಳನ್ನು, ಹಿಂಡು/ದಳ/ತಂಡದ ಪ್ರಾರಂಭದ ಹಂತದಲ್ಲಿಯೇ ನೇಮಕ ಮಾಡುವುದು ಸೂಕ್ತವಾಗುತ್ತದೆ. ಆ ರೀತಿ ಮಾಡುವುದರಿಂದ ಹಿಂಡು/ದಳ/ತಂಡದ ದಕ್ಷತೆಯೂ ಹೆಚ್ಚುತ್ತದೆ.

**ಕಬ್ ಮಾಸ್ಟರು, ಸಹಾಯಕ ಕಬ್ ಮಾಸ್ಟರು, ಸ್ಕೌಟ್ ಮಾಸ್ಟರು, ಸಹಾಯಕ ಸ್ಕೌಟ್ ಮಾಸ್ಟರು, ರೋವರ್ ಲೀಡರು, ಸಹಾಯಕ ರೋವರ್ ಲೀಡರು** ಎಲ್ಲರೂ ಒಟ್ಟಿನಲ್ಲಿ ಗ್ರೂಪ್ ಸ್ಕೌಟರುಗಳೆಂದು ಪರಿಗಣಿಸಲ್ಪಡುತ್ತಾರೆ. ಗ್ರೂಪ್ ಲೀಡರೂ ಸಹ ಒಬ್ಬ ಗ್ರೂಪ್ ಸ್ಕೌಟರ್ ಎನಿಸಿಕೊಳ್ಳುತ್ತಾರೆ.

## ಮಂಡಲ (ಗ್ರೂಪ್) :

ಮರಿಗಳ ಹಿಂಡು, ಸ್ಕೌಟ್ ದಳ ಮತ್ತು ರೋವರ್ ತಂಡ – ಈ ಮೂರೂ ಘಟಕಗಳು ಸೇರಿ 'ಸ್ಕೌಟ್ ಮಂಡಲ' ಎನಿಸಿಕೊಳ್ಳುತ್ತದೆ. ಈ ಮೂರೂ ಘಟಕಗಳಿರುವ ಮಂಡಲವು ಪೂರ್ಣ ಮಂಡಲವೆನಿಸಿಕೊಳ್ಳುತ್ತದೆ. ಹಾಗಲ್ಲದೆ ಈ ಮೂರರಲ್ಲಿ ಒಂದೋ, ಎರಡೋ ವಿಭಾಗಗಳು ಇಲ್ಲದಿದ್ದರೂ, ಒಂದೇ ವಿಭಾಗದ ಎರಡು, ಮೂರು ಘಟಕಗಳಿದ್ದರೂ ಅದು ಅಪೂರ್ಣ ಮಂಡಲವೆನಿಸುತ್ತದೆ.

ಒಂದು ಪೂರ್ಣ ಮಂಡಲದಲ್ಲಿ, ಆರೋಹಣ ವಿಧಿಯೊಡನೆ, ಮರಿಯು ಸ್ಕೌಟ್ ಆಗಲೂ, ಸ್ಕೌಟು ರೋವರ್ ಆಗಲೂ ಘಟಕದ ಬದಲಾವಣೆ ಇಲ್ಲದೆ ಅವಕಾಶವಿರುತ್ತದೆ. ಆಕಾರಣ ಮಂಡಲಗಳನ್ನು ಪ್ರಾರಂಭ ಮಾಡುವಾಗಲೇ ಪೂರ್ಣವಾಗಿ ಪ್ರಾರಂಭಿಸಬೇಕು. ಹಾಗಾಗದಿದ್ದರೆ, ಆದಷ್ಟೂ ಜಾಗ್ರತೆ ಪೂರ್ಣ ಮಂಡಲವನ್ನಾಗಿ ಪರಿವರ್ತಿಸಬೇಕು. ಶಾಲಾ ದಳಗಳಲ್ಲಿ ಸಾಮಾನ್ಯವಾಗಿ ಇದು ಸಾಧ್ಯವಾಗುವುದಿಲ್ಲ. ಮೊಹಲ್ಲಾ, ಬಡಾವಣೆ, ನಗರ ಅಥವಾ ಗ್ರಾಮ ಹೀಗೆ ಪ್ರಾದೇಶಿಕವಾಗಿ ಇದು ಸಾಧ್ಯವಾಗುತ್ತದೆ. ಶಾಲೆಗಳು, ಸಂಸ್ಥೆಗಳು (ಉದಾ : YMCA, PTC, YMC ಇತ್ಯಾದಿ) ಜವಾಬ್ದಾರಿ ವಹಿಸಿಕೊಂಡು, ಅವುಗಳ ಮೂಲಕ ನಡೆಸುವ ಹಿಂಡು/ದಳ/ತಂಡ/ಮಂಡಲಗಳನ್ನು ಪ್ರಾಯೋಜಿತ ಘಟಕ/ಮಂಡಲಗಳೆಂದೂ, ಪ್ರಾದೇಶಕ ಆಧಾರದ ಮೇಲೆ ತಾವಾಗಿ ನಡೆಸಿಕೊಂಡು ಹೋಗುವ ಘಟಕ ಅಥವಾ ಮಂಡಲಗಳನ್ನು ಸ್ವತಂತ್ರ ಅಥವಾ ಮುಕ್ತ ಘಟಕ/ಮಂಡಲಗಳೆಂದೂ ಕರೆಯಲಾಗುವುದು.

## ಗ್ರೂಪ್ ಲೀಡರು :

ಮಂಡಲದ ಪೂರ್ಣ ಆಗುಹೋಗುಗಳ ಜವಾಬ್ದಾರಿ ವಹಿಸಿಕೊಂಡು ಅದನ್ನು ವ್ಯವಸ್ಥಿತವಾಗಿ ನಡೆಸಿಕೊಂಡು ಹೋಗುವ ಉದ್ದೇಶದಿಂದ ನೇಮಿಸಲ್ಪಡುವ ವ್ಯಕ್ತಿಯನ್ನು 'ಗ್ರೂಪ್ ಲೀಡರ್' ಎಂದು ಕರೆಯಲಾಗುವುದು. ಸಾಮಾನ್ಯವಾಗಿ ಅವರು ಮಂಡಲದ ಆಡಳಿತ ಜವಾಬ್ದಾರಿಯನ್ನು ಮಾತ್ರ ವಹಿಸಿಕೊಳ್ಳುತ್ತಾರೆ. ಯಾವುದೇ ವಿಭಾಗದ ಘಟಕವನ್ನು ನಡೆಸುವ ಜವಾಬ್ದಾರಿಯನ್ನು ಅವರಿಗೆ ವಹಿಸಬಾರದು. ಅವರು ಒಟ್ಟಾರೆ ಗುಂಪಿನ ಕುಶಲತೆ, ಆರ್ಥಿಕ ಬಲ, ಆಡಳಿತ ಮತ್ತಿತರ ಅಂಶಗಳ ಬಗ್ಗೆ ಮಾತ್ರ ಆಸ್ಥೆ ವಹಿಸುವಂತಿರಬೇಕು. ಮೂರೂ ವಿಭಾಗಗಳ ಕೆಲಸಕಾರ್ಯಗಳ ಸಮನ್ವಯ ಮಾಡುವಂತಿರಬೇಕು. ಪ್ರತಿ ವಿಭಾಗವೂ ತನ್ನದೆಷ್ಟೋ ಅಷ್ಟು ಕೆಲಸಕಾರ್ಯಗಳನ್ನು ಸಮರ್ಥವಾಗಿ ನಿರ್ವಹಿಸುವಂತೆಯೂ, ತಿಳಿದೋ,

ತಿಳಿಯದೆಯೋ ಇತರ ವಿಭಾಗಗಳ ಬಗ್ಗೆ ತಲೆಹಾಕದಂತೆಯೂ, ಎಚ್ಚರಿಕೆಯಿಂದ ನೋಡಿಕೊಳ್ಳಬೇಕು.

ಪೂರ್ಣ ಮಂಡಲವಾಗಿರಲಿ, ಅಪೂರ್ಣ ಮಂಡಲವಾಗಿರಲಿ, ಮೇಲ್ಕಂಡ ಕೆಲಸಗಳ ಸಮರ್ಥ ನಿರ್ವಹಣೆಗಾಗಿ, ಗ್ರೂಪ್ ಲೀಡರನ್ನು ಅವಶ್ಯಕವಾಗಿ ನೇಮಿಸಬೇಕು. ಪ್ರತ್ಯೇಕವಾಗಿ ಗ್ರೂಪ್ ಲೀಡರನ್ನು ನೇಮಿಸಲಾಗದಿದ್ದರೆ, ಆ ಮಂಡಲದ ಸ್ಕೌಟರುಗಳ ಪೈಕಿ, ಒಬ್ಬ ಹಿರಿಯ ಸ್ಕೌಟರನನ್ನು, ತಾತ್ಕಾಲಿಕವಾಗಿ, ಆ ಜವಾಬ್ದಾರಿಯನ್ನು ನಿರ್ವಹಿಸಲು ಹೇಳಬಹುದು.

ಗ್ರೂಪ್ ಲೀಡರ್ ಸಹ ಒಬ್ಬ ಗ್ರೂಪ್ ಸ್ಕೌಟರ್ ಆಗಿರುತ್ತಾರೆ. ಅದೇ ರೀತಿ ಮಂಡಲದ ವಿಭಾಗೀಯ ಘಟಕಗಳ ಸ್ಕೌಟರುಗಳೂ ಗ್ರೂಪ್ ಸ್ಕೌಟರುಗಳೇ. ಗ್ರೂಪ್ ಸ್ಕೌಟರುಗಳು ಎಂದಾಗ, ಜಿಲ್ಲಾ ಮಟ್ಟದ ಸ್ಕೌಟರುಗಳಾದ ಜಿಲ್ಲಾ ಮುಖ್ಯ ಆಯುಕ್ತರಾದಿಯಾಗಿ ಎಲ್ಲಾ ಆಯುಕ್ತರುಗಳು, ಜಿಲ್ಲಾ, ವಿಭಾಗೀಯ ಸ್ಕೌಟರುಗಳು ಇವರುಗಳಿಂದ, ಅವರು ಬೇರೆ ಎಂಬುದನ್ನು ಸೂಚಿಸುತ್ತದೆ.



ಅಧ್ಯಾಯ-4

# ಜಿಲ್ಲಾ ಮುಖ್ಯ ಆಯುಕ್ತರು, ಜಿಲ್ಲಾ ಆಯುಕ್ತರು (ಸ್ಕೌಟ್ಸ್)

ವಿಕೇಂದ್ರೀಕರಣ ತತ್ತ್ವಗಳನ್ನು ಸ್ಕೌಟ್ ಸಂಸ್ಥೆಯ ಸಂಘಟನೆಯಲ್ಲಿ ಅನುಸರಿಸಲಾಗಿದೆ. ರಾಷ್ಟ್ರ ಕಛೇರಿಯವರು, ರಾಜ್ಯದ ಕಾರ್ಯಾಲಯಕ್ಕೆ ಜವಾಬ್ದಾರಿ, ನಿರ್ವಹಣೆಯನ್ನು ಬಿಟ್ಟಿರುತ್ತಾರೆ. ರಾಜ್ಯ ಕಾರ್ಯಾಲಯವು ಜಿಲ್ಲಾ ಮುಖ್ಯ ಆಯುಕ್ತರಿಗೆ ಜಿಲ್ಲೆಯ ಜವಾಬ್ದಾರಿಗಳನ್ನು ನಿರ್ವಹಿಸಲು ಬಿಟ್ಟಿರುತ್ತಾರೆ. ಪ್ರತಿ ಜಿಲ್ಲೆಯಲ್ಲಿಯೂ ಜಿಲ್ಲಾ ಮುಖ್ಯ ಆಯುಕ್ತರಿಗೆ ಸಹಾಯಕರಾಗಿ ಇಬ್ಬರು ಜಿಲ್ಲಾ ಆಯುಕ್ತರುಗಳಿರುತ್ತಾರೆ. ಸ್ಕೌಟ್ ಶಾಖೆಗೊಬ್ಬರು, ಗೈಡ್ ಶಾಖೆಗೊಬ್ಬರು. ಇವರುಗಳಿಗೆ ಸಹಾಯಕರಾಗಿ ಜಿಲ್ಲಾ ಸಂಘಟನಾ ಆಯುಕ್ತರುಗಳೂ, ಪ್ರತಿ 15-20 ಘಟಕಗಳಿಗೊಬ್ಬರಂತೆ ಸಹಾಯಕ ಜಿಲ್ಲಾ ಆಯುಕ್ತರುಗಳೂ, ಸ್ಥಾನಿಕ ಆಯುಕ್ತರುಗಳೂ ತರಬೇತಿ ವಿಭಾಗದಲ್ಲಿ ಜಿಲ್ಲಾ ತರಬೇತಿ ಆಯುಕ್ತರುಗಳೂ, ಸಲಹೆಗಾರರೂ, ಬೋಧಕರೂ, ಪರೀಕ್ಷಕರುಗಳೂ ಇರುತ್ತಾರೆ. ಘಟಕಗಳು (ಹಿಂಡುಗಳು, ದಳಗಳು, ತಂಡಗಳು-ಮಂಡಲಗಳು) ಜಿಲ್ಲಾ ಆಯುಕ್ತರೊಡನೆ ನೇರ ಸಂಪರ್ಕ ಹೊಂದಿರುತ್ತವೆ.

ರಾಷ್ಟ್ರೀಯ ಕಾರ್ಯಾಲಯವೋ ದೂರದ ಕೂಗು. ಅನೇಕ ಸಂದರ್ಭಗಳಲ್ಲಿ ರಾಜ್ಯ ಕಾರ್ಯಾಲಯವೂ ಅಷ್ಟೇ. ಹಾಗಾಗಿ ದಳಕ್ಕೂ ರಾಜ್ಯ ಸಂಸ್ಥೆಗೂ ಮಧ್ಯೆ ಜಿಲ್ಲಾ ಮುಖ್ಯ ಆಯುಕ್ತರು, ಜಿಲ್ಲಾ ಆಯುಕ್ತರುಗಳು ನೇರವಾದ ಮತ್ತು ಹತ್ತಿರವಾದ ಸಂಪರ್ಕ ಸೇತುವಾಗಿರುತ್ತಾರೆ. ಇವರುಗಳು ದಿನನಿತ್ಯದ ಆಗುಹೋಗುಗಳಿಗೆ ವ್ಯವಹರಿಸಬಹುದಾದ ಸಂಸ್ಥೆಯ ಸ್ಥಳೀಯ ಪ್ರತಿನಿಧಿಗಳು. ಘಟಕವು ನೋಂದಣಿ ಪಡೆಯುವುದು ಅವರ ಮೂಲಕ, ಸ್ಕೌಟರುಗಳ ಸನ್ನದು (ಅಧಿಕಾರ ಪತ್ರ) ಪಡೆಯುವುದು, ಅವರ ಮೂಲಕ, ಸ್ಕೌಟರುಗಳ ಸಮಾವೇಶಗಳ ಯಶಸ್ಸಿಗೆ ಸ್ಫೂರ್ತಿ ಚೈತನ್ಯಗಳನ್ನು ನೀಡುವವರು ಅವರೇ. ಸ್ಕೌಟ್ ಮೇಳಗಳಿಗಂತೂ ಅವರಿರಲೇಬೇಕು. ದಳದ ಸಾಧಾರಣ ಕಾರ್ಯಕ್ರಮಗಳಿಗಂತೂ, ಅವರಿಗೆ ಸದಾಕಾಲ "ಸುಸ್ವಾಗತ" ಕಾದಿರುತ್ತದೆ. ಅವರು ದಳದ ಸಭೆಗಳಿಗೆ ಭೇಟಿ ನೀಡಿದರಂತೂ, ಎಲ್ಲರೊಡನಾಡಿ, ಕೊನೆಯಲ್ಲಿ ಮರೆಯಲಾಗದ ಒಂದು ಕಥೆಯನ್ನೋ ಅಥವಾ ಸ್ಫೂರ್ತಿದಾಯಕವಾದ ಉದಂತವನ್ನೋ ಅಥವಾ ಅನುಕರಣೀಯವಾದ ಅನುಭವವನ್ನೋ ಹೇಳಿಯಾರು.

ಅವರು ಎಂದೆಂದೂ ಯುವ ಜನರ ಆತ್ಮೀಯ ಗೆಳೆಯರಾಗಿ, ಸಾಧ್ಯವಾದಷ್ಟು ಸಹಾಯಕರಾಗಿರುತ್ತಾರೆ. ಘಟಕದ ವಾರ್ಷಿಕ ಶಿಬಿರಕ್ಕೆ ತಯಾರಿ ನಡೆಸುತ್ತಿರುವಾಗ ಈ ಹಿರಿಯಣ್ಣ ಭುಜಕ್ಕೆ ಭುಜ ಕೊಟ್ಟು, ಅದರ ಯಶಸ್ಸಿಗೆ ಕಾರಣರಾಗುತ್ತಾರೆ.

ಶಿಬಿರ ಹೂಡಲು, ಪ್ರಶಸ್ತವಾದ ಸ್ಥಳವನ್ನೊದಗಿಸಲು ಅವರು ಸಹಾಯ ಮಾಡಬಹುದು. ಉಚಿತ ಸಾರಿಗೆ ವ್ಯವಸ್ಥೆ ಮಾಡಬಹುದು ಇತ್ಯಾದಿ. ಏನೇ ಆಗಲಿ ಆಸಕ್ತಿ ವಹಿಸಿ ಸಹಾಯ ಮಾಡುತ್ತಾರೆ. ದಳವು ಶಿಬಿರ ಹೂಡಿದಾಗ ಭೇಟಿನೀಡಿ, ಶಿಬಿರವಾಸಿಗಳೊಡನೆ ನೋವು ನಲಿವುಗಳನ್ನು ಹಂಚಿಕೊಂಡು, ದಿನ ಕಳೆದಂತೆ ಶಿಬಿರಾಗ್ನಿಯಲ್ಲೂ ಭಾಗವಹಿಸಿ, ತಮ್ಮ ಉಪಯುಕ್ತತೆಯನ್ನು ಸಾಬೀತು ಪಡಿಸುತ್ತಾರೆ.

ಜಿಲ್ಲಾ ಆಯುಕ್ತರ ಮತ್ತು ದಳದ ಬಾಂಧವ್ಯವು ಸನ್ನಿಹಿತವಾದಷ್ಟೂ ಸ್ಕೌಟಿಂಗ್‌ನ ಗುಣಮಟ್ಟವು ಹೆಚ್ಚಿ, ಪರಸ್ಪರ ಸೌಹಾರ್ದತೆ ಮತ್ತು ವಿಶ್ವಾಸವು ದ್ವಿಗುಣಗೊಳ್ಳುತ್ತದೆ. ದಳಗಳ ಮತ್ತು ಆಯುಕ್ತರ ನಡುವಣ ಬಾಂಧವ್ಯವು, ಸಂಸ್ಥೆಯ ಏಳಿಗೆಯ ದೃಷ್ಟಿಯಿಂದ ಅತ್ಯವಸರವಾದುದಾಗಿದೆ. ಜಿಲ್ಲಾ ಆಯುಕ್ತರು ದಳದ ಸಮಸ್ಯೆಗಳನ್ನೂ, ಕಷ್ಟಗಳನ್ನೂ ಅರ್ಥಮಾಡಿಕೊಂಡು, ಸೂಕ್ತ ರೀತಿಯ ಪರಿಹಾರವನ್ನು ಸೂಚಿಸಲು ಸಹಾಯ ವಾಗುತ್ತದೆ.

ವರ್ಷಕ್ಕೊಮ್ಮೆಯಾದರೂ, ಅವರು ದಳಕ್ಕೂ, ದಳದ ಶಿಬಿರಕ್ಕೂ ಭೇಟಿ ನೀಡಬೇಕೆಂದು ಆಶಿಸಲಾಗಿದೆ. ಸ್ಕೌಟರುಗಳಿಗೆ, ಸ್ಕೌಟಿಂಗ್ ಸಂಬಂಧವಾದ ತಮ್ಮ ಸಮಸ್ಯೆಗಳನ್ನು ಚರ್ಚಿಸಿ ಪರಿಹಾರ ಕಂಡುಕೊಳ್ಳಲು ಅವರು ಸುಲಭವಾಗಿ ದೊರಕುವಂತಿರಬೇಕು. ತರಬೇತಿ ಶಿಬಿರಗಳನ್ನು ಏರ್ಪಡಿಸಿದಾಗ, ಯಾವ ಸ್ಕೌಟರನ್ನು ಯಾವ ಶಿಬಿರಕ್ಕೆ ಕಳುಹಿಸಬೇಕು, ತಮ್ಮ ವ್ಯಾಪ್ತಿಯಲ್ಲಿ ಬರುವ ಸ್ಕೌಟ್‌ದಳಗಳಿಗೆ ಯಾವ ರೀತಿಯಲ್ಲಿ ಸಹಾಯ ಮಾಡಬಹುದು ಎಂಬ ಬಗ್ಗೆ ಅರಿತವರಾಗಿರಬೇಕು.

ಒಂದು ವೇಳೆ ಜಿಲ್ಲಾ ಆಯುಕ್ತರು ತಾವೇ ಸ್ವತಃ ಈ ರೀತಿಗಳಲ್ಲಿ ಸಹಾಯ ಮಾಡಲು ಕಾಲಾವಕಾಶ ಮಾಡಿಕೊಳ್ಳಲಾಗದ ಪಕ್ಷದಲ್ಲಿ, ಸಹಾಯಕ ಆಯುಕ್ತರು, ಜಿಲ್ಲಾ ಸಂಘಟನಾ ಆಯುಕ್ತರು ಮತ್ತು ಜಿಲ್ಲಾ ತರಬೇತಿ ಆಯುಕ್ತರುಗಳ ಮೂಲಕ ಈ ಜವಾಬ್ದಾರಿಯನ್ನು ನಿರ್ವಹಿಸಬಹುದು.



ಅಧ್ಯಾಯ–5

# ಸ್ಕೌಟ್ ಮಾಸ್ಟರು ಮತ್ತು ಅವರ ಸನ್ನದು

ಬಾಲಕರಿಗೆ ಶಿಕ್ಷಣ ನೀಡುವ ಕಾರ್ಯದಲ್ಲಿ ಸ್ಕೌಟ್ ಮಾಸ್ಟರು ಪ್ರಮುಖ ವ್ಯಕ್ತಿ. ಸಂಸ್ಥಾಪಕರಾದ ಬಿ.ಪಿ. ಅವರೇನೋ ವಿಶ್ವಾಸಾರ್ಹವಾದ ಯೋಜನೆಯನ್ನು ತಯಾರಿಸಿಕೊಟ್ಟಿದ್ದಾರೆ. ಅವರು ಆಶಿಸುವ ರೀತಿಯಲ್ಲಿ ಈ ಯೋಜನೆಯನ್ನು ಕಾರ್ಯಗತ ಮಾಡಿದ್ದಾದರೆ ಉತ್ತಮ ಫಲವು ದೊರಕುವುದರಲ್ಲಿ ಸಂದೇಹವಿಲ್ಲ. ಈ ಯೋಜನೆಯನ್ನು ಕಾರ್ಯಗತ ಮಾಡುವ ವ್ಯಕ್ತಿಯೇ ಸ್ಕೌಟ್ ಮಾಸ್ಟರು. ಸ್ಕೌಟಿಂಗ್ ಯಶಸ್ಸು ಸಾಧಿಸಬೇಕಾದರೆ ಯೋಗ್ಯ ವ್ಯಕ್ತಿಗಳು ಮುಂದೆಬಂದು ನಾಯಕತ್ವ ವಹಿಸಿಕೊಳ್ಳಬೇಕು.

ಸ್ಕೌಟ್ ಮಾಸ್ಟರರ ಜವಾಬ್ದಾರಿಯನ್ನು ಉತ್ತಮ ರೀತಿಯಲ್ಲಿ ನಿರ್ವಹಿಸಬಲ್ಲ ಯೋಗ್ಯವ್ಯಕ್ತಿಗಳನ್ನು ಆರಿಸುವ ಹೊಣೆಯು ಗ್ರೂಪ್ ಸಮಿತಿಯ ಮೇಲಿರುತ್ತದೆ.

ಶಾಲೆಗಳ ದಳಗಳನ್ನು ನಡೆಸಲು ಶಾಲೆಗಳ ಮುಖ್ಯೋಪಾಧ್ಯಾಯರು ಜಾಮೀನಾಗುವುದರಿಂದ, ಯೋಗ್ಯವ್ಯಕ್ತಿಯನ್ನು ಆರಿಸುವ ಜವಾಬ್ದಾರಿಯು ಅವರ ಮೇಲೆ ಬೀಳುತ್ತದೆ.

ಸ್ಕೌಟ್ ಮಾಸ್ಟರು ಮತ್ತು ಸಹಾಯಕ ಸ್ಕೌಟ್ ಮಾಸ್ಟರುಗಳ ಅರ್ಹತೆಯ ಬಗ್ಗೆ ಈ ಕೆಳಕಂಡಂತೆ ನಿಯಮಗಳಿವೆ.

ಸ್ಕೌಟ್ ಮಾಸ್ಟರು ಸಚ್ಚಾರಿತ್ರ್ಯವುಳ್ಳ ವ್ಯಕ್ತಿ ಆಗಿರಬೇಕು.
ಅವರು ಸಮಾಜದಲ್ಲಿ ಗುರುತಿಸಲ್ಪಡುವಂತಹವರಾಗಿರಬೇಕು
ಅವರು ಅನುಕರಣೀಯರಾದಂತಹ ನಾಯಕರಾಗಿರಬೇಕು.

ಈ ಕಾರಣಗಳಿಂದ ಅವರು ಎಂತಹವರು ಎಂಬುದು ಮುಖ್ಯ ವಿಷಯ ವಾಗುತ್ತದೆ.

ಎರಡನೆಯದಾಗಿ ಅವರಲ್ಲಿ ಬಾಲಕರ ಬಗ್ಗೆ ಸದುದ್ದೇಶಪೂರಿತವಾದ ವಾತ್ಸಲ್ಯವು ಇರಬೇಕು. ಅವರು ಬಾಲಕರನ್ನೂ, ಬಾಲಕರ ಅವಶ್ಯಕತೆ, ಆಕಾಂಕ್ಷೆಗಳನ್ನೂ

ಅರ್ಥಮಾಡಿಕೊಂಡು, ಸೂಕ್ತ ರೀತಿಯಲ್ಲಿ ಸ್ಪಂದಿಸುವಂತಿರಬೇಕು. ಬೇರೆ ರೀತಿಯಲ್ಲಿ ಹೇಳುವುದಾದರೆ ಅವರು ಬಾಲ ಮಾನವರಾಗಿರಬೇಕು.

ಅವರು ತಮ್ಮ ಕಲ್ಪನಾ ಶಕ್ತಿಯನ್ನು ಸಾಕಷ್ಟು ಉಪಯೋಗಿಸಿಕೊಂಡು, ಬಾಲಕರಿಗೆ ಸಾಹಸಮಯವಾದ, ವಿನೋದಯುತವಾದ ಹಾಗೂ ಸಂತೋಷ ದಾಯಕವಾದ ಕಾರ್ಯಕ್ರಮಗಳನ್ನು ನೀಡುವಂತಿರಬೇಕು.

ಕೊನೆಯದಾಗಿ ಅವರಿಗೆ, ಸಂಸ್ಥಾಪಕರು ಹೇಳಿರುವ ರೀತಿಯಲ್ಲಿ ಸ್ಕೌಟಿಂಗ್ ಯೋಜನೆಯನ್ನು ಮನನ ಮಾಡಿಕೊಳ್ಳುವ ಮತ್ತು ಅದರ ವಿಧಾನಗಳನ್ನು ಲಾಭದಾಯಕವಾಗಿ ಕಾರ್ಯಗತ ಮಾಡುವ ಶಕ್ತಿಯುಕ್ತಿಗಳು ತಿಳಿದಿರಬೇಕು.

ಶಾಲೆಗಳಲ್ಲಿ ದಳಗಳನ್ನು ನಡೆಸುವ ಜವಾಬ್ದಾರಿಯು, ಸಹಜವಾಗಿ ಶಿಕ್ಷಕ ಸಿಬ್ಬಂದಿಯುಲ್ಲೊಬ್ಬರ ಮೇಲೆ ಬೀಳುತ್ತದೆ. ಮೇಲಿನ ಅವಶ್ಯಕತೆಗಳನ್ನು ಪೂರೈಸುವಂತಹ ಶಿಕ್ಷಕರೊಬ್ಬರನ್ನು ಮುಖ್ಯೋಪಾಧ್ಯಾಯರು ಆರಿಸಬೇಕು. ಆ ರೀತಿ ಆರಿಸಲ್ಪಟ್ಟ ವ್ಯಕ್ತಿಯು ಮುಖ್ಯೋಪಾಧ್ಯಾಯರ ಒತ್ತಡಕ್ಕೆ ಮಣಿಯದೆ, ತಾನಾಗಿ ಸ್ವಯಂಪ್ರೇರಿತನಾಗಿ ಸ್ಕೌಟಿಂಗ್‌ಗೆ ಬರುವುದು ಅತಿಮುಖ್ಯವಾದುದು. ಹಾಗೆ ಬಂದರೆ ಮಾತ್ರ, ಅವರು ತಮ್ಮ ಕೆಲಸವನ್ನು ಆಸಕ್ತಿಯುತವಾಗಿ, ಅರ್ಪಣಾ ಮನೋಭಾವದಿಂದ ನಿರ್ವಹಿಸಲು ಸಾಧ್ಯವಾಗುತ್ತದೆ.

ಸ್ಕೌಟ್ ಮಾಸ್ಟರು ಏಕಾಂಗಿಯಾಗಿ ಕೆಲಸವನ್ನು ನಿರ್ವಹಿಸುವಂತಾಗಬಾರದು. ಅವರಿಗೆ ಒಬ್ಬರೋ, ಇಬ್ಬರೋ ಸಹಾಯಕರಿರಬೇಕು. ಸ್ಕೌಟ್ ಮಾಸ್ಟರಿಗಿರಬೇಕಾದ ಎಲ್ಲಾ ಅರ್ಹತೆಗಳೂ ಈ ಸಹಾಯಕ ಸ್ಕೌಟ್ ಮಾಸ್ಟರುಗಳಿಗೆ ಇರಬೇಕು.

ರಾಜ್ಯ ಕಾರ್ಯಾಲಯದಿಂದ ಅಧಿಕೃತವಾಗಿ ಸನ್ನದು ಪಡೆದುಕೊಂಡೇ, ಸ್ಕೌಟ್ ಮಾಸ್ಟರುಗಳು ಮತ್ತು ಸಹಾಯಕ ಸ್ಕೌಟ್ ಮಾಸ್ಟರುಗಳು ತಮ್ಮ ಕಾರ್ಯ ನಿರ್ವಹಿಸಬೇಕು. ಅಂತಹ ಸನ್ನದು ರಾಜ್ಯ ಪ್ರಧಾನ ಆಯುಕ್ತರು ಮತ್ತು ರಾಜ್ಯ ಆಯುಕ್ತರು (ಸ್ಕೌಟ್ಸ್) ಇವರುಗಳ ಸಹಿಯನ್ನು ಹೊಂದಿರುತ್ತದೆ.

**ಸನ್ನದು (ಅಧಿಕಾರ ಪತ್ರ)**

ಜಿಲ್ಲಾ ಮುಖ್ಯ ಆಯುಕ್ತರು ಮತ್ತು ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಇವರುಗಳ ಶಿಫಾರಸ್ಸಿನ ಮೇಲೆ ಸನ್ನದನ್ನು ನೀಡಲಾಗುತ್ತದೆ. ಶಿಫಾರಸ್ಸು ಮಾಡುವ ಮುನ್ನ ಈ ಆಯುಕ್ತರುಗಳು ಅಂತಹ ಸ್ಕೌಟರುಗಳು ಕನಿಷ್ಠ 4 ತಿಂಗಳ ಕಾಲ ಸಾಕ್ಷ್ಯಾತ್ಮಕ ಸೇವೆ

ಸಲ್ಲಿಸಿರುವುದನ್ನು ಗಮನಿಸಬೇಕು. ಈ ಅವಧಿಯಲ್ಲಿ, ಆ ಸ್ಕೌಟರು, ಈ ಕೆಲಸವು ತನಗೆ ಒಗ್ಗುತ್ತದೆಯೇ ಎಂಬ ಬಗ್ಗೆ ತನಗೆ ತಾನು ಅರ್ಥಮಾಡಿಕೊಳ್ಳಲೂ, ಆಶಿತ ರೀತಿಯಲ್ಲಿ ತಾನು ಕೆಲಸ ನಿರ್ವಹಿಸಲು ಶಕ್ತನೇ ಎಂಬುದನ್ನು ತಿಳಿಯಲೂ ಸಹಾಯವಾಗುತ್ತದೆ. ಜಿಲ್ಲಾ ಆಯುಕ್ತರೂ ಸಹ ಅವನ ಕೆಲಸವನ್ನೂ, ದಳವನ್ನು ನಡೆಸುವ ರೀತಿಯನ್ನೂ ಗಮನಿಸಲು ಸಹಾಯ ಆಗುತ್ತದೆ. ಸ್ಕೌಟರನ ಕೆಲಸವು ಮನಸ್ಸಿಗೊಪ್ಪುವಂತೆ ಕಂಡುಬಂದಲ್ಲಿ ಮಾತ್ರ ಅವರು, ಅವನಿಗೆ ಸನ್ನದನ್ನು ನೀಡಲು ಶಿಫಾರಸ್ಸು ಮಾಡಬಹುದು, ಮಾಡುತ್ತಾರೆ.

ಶಾಲಾ ದಳಗಳಲ್ಲಿ, ಮುಖ್ಯೋಪಾಧ್ಯಾಯರೂ ಸಹ, ಸ್ಕೌಟ್ ಮಾಸ್ಟರರು ಮತ್ತು ಸಹಾಯಕ ಸ್ಕೌಟ್ ಮಾಸ್ಟರರುಗಳ ಕೆಲಸವನ್ನು ಗಮನಿಸಿ, ತಮ್ಮದೇ ಆದ ನಿಲುವನ್ನು ತಳೆಯಲು ಬರುತ್ತದೆ.

ಈ ವಿಷಯಗಳಲ್ಲಿ ಬಾಲಕನ ಏಳಿಗೆಯನ್ನು ಮುಖ್ಯವಾಗಿ ಪರಿಗಣಿಸಬೇಕು. ಸ್ಕೌಟಿಂಗ್ ಇರುವುದೇ ಬಾಲಕರಿಗಾಗಿ ಆದ್ದರಿಂದ ಸ್ಕೌಟ್ ಮಾಸ್ಟರುಗಳಿರಬೇಕಾದುದು ಬಾಲಕರಿಗಾಗಿಯೇ

ಶಾಲಾ ಸ್ಕೌಟ್ ಮಾಸ್ಟರುಗಳ ವಿಷಯದಲ್ಲಿ ಹೇಳಿದ ಅಂಶಗಳು, ಮುಕ್ತದಳಗಳ ಸ್ಕೌಟರುಗಳಿಗೂ ಅನ್ವಯಿಸುತ್ತದೆ. ಗುಂಪಿನ ಸಮಿತಿಯು ಈ ಬಗ್ಗೆ ಎಚ್ಚರಿಕೆ ವಹಿಸಿ, ಸ್ಕೌಟ್ ಮಾಸ್ಟರರ ಆಯ್ಕೆ ಮಾಡಿಕೊಳ್ಳಬೇಕು. ಮುಕ್ತದಳಗಳ ಸ್ಕೌಟ್ ಮಾಸ್ಟರುಗಳ ಜವಾಬ್ದಾರಿಯು, ಶಾಲಾ ದಳಗಳ ಸ್ಕೌಟ್ ಮಾಸ್ಟರುಗಳಿಗಿಂತಲೂ ಸ್ವಲ್ಪ ಭಿನ್ನವೂ ಗುರುತರವಾದುದೂ ಆಗಿರುತ್ತದೆ. ಸನ್ನದು ನೀಡಿಕೆಯ ಪೂರ್ವದ ಸಾಕ್ಷ್ಯಾತ್ಮಕ ಸೇವೆಯು, ಮುಕ್ತದಳಗಳ ಸ್ಕೌಟ್ ಮಾಸ್ಟರುಗಳಿಗೂ ಅನ್ವಯಿಸುತ್ತದೆ.

ಸ್ಕೌಟ್ ಮಾಸ್ಟರಿಗೆ ಅನ್ವಯಿಸುವ ಎಲ್ಲಾ ಅಂಶಗಳೂ, ಸಹಾಯಕ ಸ್ಕೌಟ್ ಮಾಸ್ಟರಿಗೂ ಅನ್ವಯವಾಗುತ್ತದೆ.

**ಸ್ಕೌಟ್ಸ್ ಮಾಸ್ಟರು ಮತ್ತು ಸಹಾಯಕ ಸ್ಕೌಟ್ ಮಾಸ್ಟರರ ಅರ್ಹತೆಗಳು:**

1) i. ಸ್ಕೌಟ್ ಮಾಸ್ಟರಾಗಿ ನೇಮಕವಾಗಬೇಕಾದರೆ ಕನಿಷ್ಠ 21 ವರ್ಷ ವಯಸ್ಸಾಗಿರಬೇಕು

ii. ಸಹಾಯಕ ಸ್ಕೌಟ್ ಮಾಸ್ಟರಾಗಿ ನೇಮಕವಾಗಬೇಕಾದರೆ ಕನಿಷ್ಠ 18 ವರ್ಷ ವಯಸ್ಸಾಗಿರಬೇಕು

2) ಇಂಟರ್ ಮೀಡಿಯೇಟ್ (10+2) ಅಥವಾ ತತ್ಸಮ ಪರೀಕ್ಷೆಯಲ್ಲಿ ತೇರ್ಗಡೆ ಆದ ಬಗ್ಗೆ ಪ್ರಮಾಣ ಪತ್ರ ಬೇಕು.

**ಸೂಚನೆ:**ವಿಶೇಷ ಪರಿಸ್ಥಿತಿಗಳಲ್ಲಿ ಜಿಲ್ಲಾ ಆಯುಕ್ತರುಗಳ (ಸಹಾಯಕ, ಜಿಲ್ಲಾ, ಜಿಲ್ಲಾ ಮುಖ್ಯ) ಶಿಫಾರಸ್ಸಿನ ಮೇಲೆ, ರಾಜ್ಯ ಮುಖ್ಯ ಆಯುಕ್ತರು ಈ ವಿದ್ಯಾರ್ಹತೆಯ ಬಗ್ಗೆ ರಿಯಾಯಿತಿ ತೋರಿಸಬಹುದು.

3) ಅವರು ಸಚ್ಚಾರಿತ್ರ್ಯವುಳ್ಳವರಾಗಿರಬೇಕು. ನಡೆವಳಿಕೆ ಮತ್ತು ಹಿನ್ನೆಲೆಗಳು ಒಳ್ಳೆಯದಿರಬೇಕು.

4) ಸ್ಕೌಟ್ ಸಂಸ್ಥೆಯ ಬಗ್ಗೆ ಅದರ ವಿಧಾನಗಳ ಬಗ್ಗೆ ಅವರಿಗೆ ತಿಳಿದಿರಬೇಕು, ಸಂಸ್ಥೆಯ ಧಾರ್ಮಿಕ ಮತ್ತು ನೈತಿಕ ನೀತಿಯನ್ನು ವಿಶೇಷವಾಗಿ ತಿಳಿದುಕೊಂಡು ಆದನ್ನು ಒಪ್ಪಿಕೊಳ್ಳುವವರಾಗಬೇಕು ಮತ್ತು ಎ.ಪಿ.ಆರ್.ಓ. ಬಗ್ಗೆ ತಿಳಿದವರಾಗಿದ್ದು ತಮ್ಮ ಕೆಲಸಕಾರ್ಯಗಳಲ್ಲಿ ಅದನ್ನು ಉಪಯೋಗಿಸುವಂತಿರಬೇಕು.

5) ಬಾಲಕರಿಗೆ ತರಬೇತಿ ನೀಡುವ ಬಗ್ಗೆ ವಿಶೇಷ ಆಸಕ್ತಿಯುಳ್ಳವರಾಗಿರಬೇಕು.

6) ರಾಷ್ಟ್ರೀಯ ಕಾರ್ಯಾಲಯವು ಪ್ರಸ್ತುತಪಡಿಸಿರುವ ನಿಗದಿತ ಅವಧಿಯ ಶಿಕ್ಷಣವನ್ನು ತೃಪ್ತಿಕರವಾಗಿ ಮುಗಿಸಿರಬೇಕು.

## ಸ್ಕೌಟ್ಸ್ ಮಾಸ್ಟರು ಮತ್ತು ಸಹಾಯಕ ಸ್ಕೌಟ್ ಮಾಸ್ಟರುಗಳಿಗೆ ಸಮವಸ್ತ್ರ :

ಸ್ಕೌಟ್ ಮಾಸ್ಟರುಗಳು, ಸಹಾಯಕ ಸ್ಕೌಟ್ ಮಾಸ್ಟರುಗಳು ಈ ಕೆಳಕಾಣಿಸಿರುವ ರೀತಿಯಲ್ಲಿ ಸಮವಸ್ತ್ರ ಧರಿಸುತ್ತಾರೆ.

i) **ಷರ್ಟು:** ಉಕ್ಕುಬೂದುಬಣ್ಣದ್ದು. ಪ್ಯಾಚ್ ಪಾಕೇಟ್‌ಗಳಿರಬೇಕು. ಭುಜಕರ್ಣಗಳಿರಬೇಕು, ಜರ್ಸಿಯನ್ನು ಉಪಯೋಗಿಸುವಾಗ ಅದು ಒಂದೇ ಬಣ್ಣದ್ದಾಗಿರಬೇಕು. ಅರ್ಧ ತೋಳಿರಬೇಕು. ಉದ್ದನೆಯ ತೋಳಿನದಾದರೆ ಅದನ್ನು ಸಾಮಾನ್ಯವಾಗಿ ಮೊಣಕೈ ಮೇಲಿನವರೆಗೂ ಮಡಿಸಿರಬೇಕು; ಚಳಿಗಾಲದಲ್ಲಿ ಮಾತ್ರ ಇಳಿಬಿಡಬಹುದು.

ii) **ಟ್ರೌಜರ್ಸ್ ಅಥವಾ ಷಾರ್ಟ್ಸ್** : ಸಾಗರ ನೀಲಿಬಣ್ಣದ್ದು.

iii) **ತಲೆಯುಡಿಗೆ:** ಕಡು ನೀಲಿಬಣ್ಣದ ಬೆರ್ರೆ, ಅದರಲ್ಲಿ ರಾಷ್ಟ್ರ ಕಛೇರಿಯಿಂದ ಒದಗಿಸಲ್ಪಟ್ಟ ಅಧಿಕೃತ ಲೋಹ ಪದಕವಿರಬೇಕು. ಸಿಖ್ಖರು ಕಡುನೀಲಿ ರುಮಾಲನ್ನು ಅವರ ರೀತಿ ಧರಿಸಿರಬೇಕು. ಅಧಿಕೃತ ಲೋಹದ ಪದಕವು

ಅದರ ಮೇಲಿರಬೇಕು. [ಸಮಾರಂಭಗಳ ವೇಳೆ ಶಿರೋಧಾರಣೆ ಕಡ್ಡಾಯವಾದುದು]

iv) **ಬೆಲ್ಟ್ :** ಬೂದು ನೈಲೆಕ್ಸ್ ಬೆಲ್ಟ್ ಆಗಿರಬೇಕು. ಭಾರತ ಸ್ಕೌಟ್ಸ್ ಮತ್ತು ಗೈಡ್ಸ್‌ನ ರಾಷ್ಟ್ರ ಕಾರ್ಯಾಲಯವು ಒದಗಿಸಿದ ಅಧಿಕೃತ ಬಕಲ್ (ಚಿಲಕಟ್ಟು) ಇರಬೇಕು.

v) **ಸ್ಕಾರ್ಫ್ :** ಗುಂಪಿನ ಬಣ್ಣದ, ವಿನ್ಯಾಸದ, ಸ್ಥಳೀಯ ಸಂಸ್ಥೆ ಅಥವಾ ಜಿಲ್ಲಾ ಸಂಸ್ಥೆಯವರಿಂದ ಒಪ್ಪಿಗೆ ಪಡೆದ, ಪಕ್ಕಗಳು ಕನಿಷ್ಠ 70ಸೆಂ.ಮೀ.–ಗರಿಷ್ಠ 90 ಸೆಂ.ಮೀ. ಇರುವ ಮುಮ್ಮೂಲೆ ಪಟ್ಟಿ. ಇದನ್ನು ಕುತ್ತಿಗೆಯ ಸುತ್ತಲೂ, ಕಾಲರ್ ಮತ್ತು ಭುಜಕರ್ಣಗಳ ಮೇಲೆ ಬರುವಂತೆ ಧರಿಸಬೇಕು. ಹಳದಿ, ಹಸಿರು ಮತ್ತು ನೇರಳೆ ಬಣ್ಣದ ಸ್ಕಾರ್ಫ್ ಧರಿಸಬಾರದು. ಗುಂಪಿನ ವೋಗಲ್ ಅಥವಾ [ಗಿಲ್‌ವೆಲ್ ವೋಗಲ್ ಬಿಟ್ಟು] ಬೇರೆ ಯಾವುದಾದರೂ ಉಪಯೋಗಿಸಬಹುದು.

vi) **ಭುಜ ಪದಕಗಳು :** 6–8 ಸೆಂ.ಮೀ. ಉದ್ದ ಮತ್ತು 1.5 ಸೆಂ.ಮೀ. ಅಗಲವಿರುವ, ಬಿಳಿಯ ಹಿನ್ನೆಲೆಯಲ್ಲಿ ಕೆಂಪುಅಕ್ಷರಗಲ್ಲಿ ಗುಂಪಿನ ಕ್ರಮಸಂಖ್ಯೆ (ಐಚ್ಛಿಕ). ಹೆಸರು ಅಥವಾ ಜಿಲ್ಲೆ ಯಾ ರಾಜ್ಯದ ಹೆಸರಿರುವ ತುದಿಗಳಲ್ಲಿ ಸ್ವಲ್ಪ ಬಾಗಿರುವ ಪಟ್ಟಿಯನ್ನು (ಭುಜಪದಕಗಳನ್ನು) ಎರಡೂ ತೋಳುಗಳ ಮೇಲೆ, ಭುಜದ ಹೊಲಿಗೆಯ ಕೆಳಗೆ ಬರುವಂತೆ ಧರಿಸಬೇಕು.

**ಸೂ.:** ಸಾಗರ ಸ್ಕೌಟ್ಸ್ ಅಥವಾ ವಾಯು ಸ್ಕೌಟ್ಸ್ ದಳಗಳಲ್ಲಿ 'ಸೀ ಸ್ಕೌಟ್' ಅಥವಾ 'ಏರ್ ಸ್ಕೌಟ್' ಪದಕಗಳನ್ನು ಭುಜಪಟ್ಟಿಯಲ್ಲಿ ಸೇರಿಸಬಾರದು. ಬದಲಿಗೆ, ರಾಷ್ಟ್ರ ಕಾರ್ಯಾಲಯವು ಒದಗಿಸುವ, ಆ ಪದಗಳುಳ್ಳ, ಬಿಳಿಯ ಹಿನ್ನೆಲೆಯಲ್ಲಿ ಕೆಂಪು ಅಕ್ಷರಗಳುಳ್ಳ ಪಟ್ಟಿಗಳನ್ನು ಎರಡೂ ಕಡೆ ಭುಜಕರ್ಣಗಳ ಮೇಲೆ ಧರಿಸಬೇಕು.

vii) **ಸದಸ್ಯತ್ವ ಪದಕ :** ಹಸಿರು ಹಿನ್ನೆಲೆಯಲ್ಲಿ, ಹಳದಿ ಬಣ್ಣದ ಟ್ರೆಫಾಯಿಲ್ ಅಡಕವಾಗಿರುವ ಸ್ಕೌಟ್ ಚಿಹ್ನೆ– ತ್ರಿದಳ ಕಮಲದಲ್ಲಿ ಮಧ್ಯೆ ಅಶೋಕಚಕ್ರವಿರುವ ಬಟ್ಟೆಯ ಪದಕವನ್ನು ಷರ್ಟ್‌ನ ಎಡಜೇಬಿನ ಪಟ್ಟಿಯ ಮಧ್ಯದಲ್ಲಿ ಧರಿಸಬೇಕು.

viii) **ವಿಶ್ವ ಸ್ಕೌಟ್ ಪದಕ :** ವಿಶ್ವ ಸ್ಕೌಟ್ ಪದಕವನ್ನು ಬಲಜೇಬಿನ ಪಟ್ಟಿಯ ಮಧ್ಯಭಾಗದಲ್ಲಿ ಧರಿಸಬೇಕು.

ix) **ಶ್ರೇಣಿ ಪದಕ:** ಸ್ಕೌಟ್ ಮಾಸ್ಟರರು ತಮ್ಮ ಸ್ಥಾನವನ್ನು ಸೂಚಿಸುವ ಹಸಿರು ಹಿನ್ನೆಲೆ ಮತ್ತು ಹಸಿರು ಅಂಚಿರುವ, ತ್ರಿದಳ ಕಮಲದಲ್ಲಿ ಟ್ರೆಫಾಯಿಲ್ ಅಳವಡಿಸಿರುವ ಮಧ್ಯೆ ಅಶೋಕ ಚಕ್ರವುಳ್ಳ ಭಾರತ ಸ್ಕೌಟ್ ಮತ್ತು ಗೈಡ್ಸ್ ಲಾಂಛನವನ್ನು ಹಳದಿಯ ಬಣ್ಣದಲ್ಲುಳ್ಳ ವೃತ್ತಾಕಾರದ ಬಟ್ಟೆ ಪದಕವನ್ನು ಧರಿಸುತ್ತಾರೆ. ಸಹಾಯಕ ಸ್ಕೌಟ್ ಮಾಸ್ಟರರು ಅದೇ ರೀತಿಯ ಬಟ್ಟೆ ಪದಕವನ್ನು (ಆದರೆ ಅಂಚು ಹಸುರಿನ ಬದಲು ಕೆಂಪು ಇರುತ್ತದೆ) ಧರಿಸುತ್ತಾರೆ. ಈ ಪದಕವನ್ನು ಎಡ ಜೇಬಿನ ಮೇಲು ಮುಚ್ಚಳದ ಹೊಲಿಗೆಯ ಮೇಲೆ 4ಸೆಂ.ಮೀ ಅಂತರದಲ್ಲಿ ಬರುವಂತೆ ಧರಿಸಬೇಕು.

x) **ನಾಮಪಟ್ಟಿ** : ರಾಷ್ಟ್ರ ಕಾರ್ಯಾಲಯವು ವಿನ್ಯಾಸಗೊಳಿಸಿ ಸರಬರಾಜು ಮಾಡುವ 11×2ಸೆಂ.ಮೀ. ಅಳತೆಯ ಬಲಗಡೆ ರಾಷ್ಟ್ರಧ್ವಜ (3×2ಸೆಂ.ಮೀ.) ಉಳ್ಳ "The Bharat Scouts and Guides" ಎಂಬ ಹೆಸರುಳ್ಳ ನಾಮಪಟ್ಟಿಯನ್ನು ಬಲಜೇಬಿನ ಮೇಲೆ ಧರಿಸಬೇಕು.

xi) **ಹೆಸರಿನ ಫಲಕ:** 8 ಸೆ.ಮೀ. ×2 ಸೆ.ಮೀ. ಅಳತೆಯ ಬಿಳಿಯ ಬಣ್ಣದ ಪ್ಲಾಸ್ಟಿಕ್ ಫಲಕದ ಮೇಲೆ ಕಪ್ಪು ಅಕ್ಷರಗಳಲ್ಲಿ ನಾಯಕನ ಹೆಸರುಳ್ಳ ಫಲಕವನ್ನು ಬಲಜೇಬಿನ ಮೇಲೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ನಾಮಪಟ್ಟಿಯ ಕೆಳಗೆ ಧರಿಸಬೇಕು.

xii) **ಸಾಕ್ಸ್ ಅಥವಾ ಸ್ಟಾಕಿಂಗ್ಸ್** : ಕರಿಯ ಬಣ್ಣದ ಸಾಕ್ಸ್ ಧರಿಸಬಹುದು. ಕಪ್ಪುಬಣ್ಣದ ಸ್ಟಾಕಿಂಗ್ಸ್ ಧರಿಸಿದಾಗ ಗಾರ್ಟರ್ ಟ್ಯಾಬ್ಸ್‌ನ ಹಸುರು ಚುಂಗು 1.5 ಸೆಂ.ಮೀ. ಹೊರಗೆ ಕಾಣುವಂತೆ, ಮೊಣಕಾಲು ಕೆಳಗೆ ಸ್ಟಾಕಿಂಗ್ಸ್‌ನ ಮೇಲ್ಭಾಗವನ್ನು ಕೆಳಕ್ಕೆ ಮಡಿಸಬೇಕು. ಷಾರ್ಟ್ಸ್ ಧರಿಸಿದಾಗ ಮಾತ್ರ ಸ್ಟಾಕಿಂಗ್ಸ್ ಧರಿಸಬೇಕು.

xiii) **ಪಾದರಕ್ಷೆ** : ಕರಿಯ ಷೂಸ್ (ಚರ್ಮ ಅಥವಾ ಕ್ಯಾನ್‌ವಾಸ್) ಲೇಸ್ ಇರುವಂತೆ ಧರಿಸಬೇಕು.

xiv) **ಓವರ್‌ಕೋಟ್, ಮ್ಯಾಕಿಂಟೋಷ್ ಅಥವಾ ಜಾಕೆಟ್**: ಸಾಗರ ನೀಲಿಬಣ್ಣದ ಓವರ್ ಕೋಟ್, ಅದೇ ಬಣ್ಣದ ಬ್ಲೇಜರ್, ಅದೇಬಣ್ಣದ ವಿಂಡ್ ಷೀಟರ್ ಅಥವಾ ಅದೇ ಬಣ್ಣದ ಜರ್ಸಿಯನ್ನು ಚಳಿಗಾಲದಲ್ಲಿ ಮಾತ್ರ ಧರಿಸಬಹುದು.

xv) **ಲೋಹಪದಕ**: ಸಾಧಾರಣ ಉಡುಪಿನಲ್ಲಿ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಲೋಹಪದಕವನ್ನು ಧರಿಸಬಹುದು.

xvi) **ಲ್ಯಾನ್ ಯಾರ್ಡ್ :** (ಶೀಟಿದಾರ) ಬೂದುಬಣ್ಣದ ಲ್ಯಾನ್ ಯಾರ್ಡ್‌ನ್ನು ಕೊರಳ ಸುತ್ತಲೂ ತಂದು ದಾರದ ಕೊನೆಯಲ್ಲಿರುವ ಶೀಟಿಯನ್ನು ಷರ್ಟ್‌ನ ಎಡಜೇಬಿನೊಳಗೆ ಇಳೀಬಿಡಬೇಕು.

xviii) **ಹೆಗಲು ಚೀಲ :** ಹೆಗಲು ಚೀಲ (ಹ್ಯಾವರ್ ಸ್ಯಾಕ್) ಮತ್ತು ಬೆನ್ನುಚೀಲ (ರುಕ್ ಸ್ಯಾಕ್) ಹೊರಾಂಗಣ ಸಂಚಾರ ಕಾರ್ಯಕ್ರಮಗಳ ವೇಳೆಯಲ್ಲಿ ಉಪಯೋಗಿಸಬಹುದು.

**ಸಾಂದರ್ಭಿಕ ಉಡುಪು**

1) **ಕಾರ್ಯವಾಸಿ ಸಮವಸ್ತ್ರ / ಹೊರಾಂಗಣ ಕಾರ್ಯಕ್ರಮದ ಸಮವಸ್ತ್ರ :** ಇದು ಐಚ್ಛಿಕ. ಕಡುನೀಲಿ ಜೀನ್ಸ್, ಟ್ರೌಜರ್ಸ್ ಅಥವಾ ಷಾರ್ಟ್ಸ್. ಇದರ ಮೇಲೆ ಸಾಗರ ನೀಲಿಬಣ್ಣದ ಕಾಲರ್ ಇರುವ ಟೀಷರ್ಟ್. ಅದರ ಜೇಬಿನ ಮೇಲೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಲಾಂಛನವನ್ನು ಮೇಲಚ್ಚು ಮಾಡಿರಬೇಕು. ತಲೆಗೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಲಾಂಛನವನ್ನು ಮಧ್ಯದಲ್ಲಿ ಅಚ್ಚೊತ್ತಿರುವ, ಕಡುನೀಲಿ ಬಣ್ಣದ 'ಪಿ' ಕ್ಯಾಪ್ ಧರಿಸಬೇಕು. ಕಾಲಿಗೆ ಕಪ್ಪು ಸ್ಪೋರ್ಟ್ಸ್ ಷೂಸ್ ಧರಿಸಬೇಕು. ಈ ರೀತಿಯ ಸಮವಸ್ತ್ರವನ್ನು ಹೊರಾಂಗಣ ಕಾರ್ಯಕ್ರಮಗಳ ವೇಳೆ ಧರಿಸಬಹುದು.

2) ರಾಷ್ಟ್ರ ಕಾರ್ಯಾಲಯವು ರೂಪಿಸಿರುವ, ಬೆಲ್ಟಿಗೆ ಹೊಂದಿಕೊಂಡಿರುವ ಕೈಚೀಲ (ಪೌಚ್)ಅನ್ನು ಬೆಲ್ಟಿನ ಮೇಲೆ ಧರಿಸಬಹುದು.

3) ವಿಶ್ವಸೋದರತೆಯ ವೋಗಲ್, ಸಮಾನಬಣ್ಣದ ಚರ್ಮ ಅಥವಾ ಬೆತ್ತದ್ದನ್ನು ಧರಿಸಬಹುದು.

4) ಮಹಿಳಾ ಸ್ಕೌಟ್ ಮಾಸ್ಟರುಗಳ ಸಾಂದರ್ಭಿಕ ಉಡುಪು ಸ್ಕೌಟ್/ ಸಹಾಯಕ ಸ್ಕೌಟ್ ಮಾಸ್ಟರುಗಳಂತೆಯೇ. ಆದರೆ ಸ್ಕಾರ್ಫ್, ವೋಗಲ್ ಮತ್ತು ಬೆಲ್ಟ್ ಧರಿಸುವ ಬಗ್ಗೆ ರಿಯಾಯಿತಿ ನೀಡಬಹುದು.

**5.ಅ) ಮಹಿಳಾ ಸ್ಕೌಟ್ ಮಾಸ್ಟರು ಮತ್ತು ಸಹಾಯಕ ಮಹಿಳಾ ಸ್ಕೌಟ್‌ಮಾಸ್ಟರುಗಳಿಗೆ ಸಮವಸ್ತ್ರ :**

ಮಹಿಳಾ ಸ್ಕೌಟ್ ಮಾಸ್ಟರು ಮತ್ತು ಸಹಾಯಕ ಮಹಿಳಾ ಸ್ಕೌಟ್ ಮಾಸ್ಟರುಗಳು, ಮಹಿಳಾ ಕಬ್ ಮಾಸ್ಟರು ಮತ್ತು ಸಹಾಯಕ ಕಬ್ ಮಾಸ್ಟರುಗಳಿಗೆ ಸೂಚಿಸಿರುವಂತೆಯೇ, ಈ ಕೆಳಕಾಣಿಸಿರುವ ವ್ಯತ್ಯಾಸಗಳೊಂದಿಗೆ, ಸಮವಸ್ತ್ರವನ್ನು ಧರಿಸುತ್ತಾರೆ.

**ಶ್ರೇಣಿ ಪದಕ :** ಸ್ಕೌಟ್ ಮಾಸ್ಟರು ಮತ್ತು ಸಹಾಯಕ ಸ್ಕೌಟ್ ಮಾಸ್ಟರರಿಗೆ ಸೂಚಿಸಿರುವಂತೆ.

**ಕಂಠವಸ್ತ್ರ :**.ಸ್ಕೌಟ್ ಮಾಸ್ಟರು ಮತ್ತು ಸಹಾಯಕ ಸ್ಕೌಟ್ ಮಾಸ್ಟರರಿಗೆ ಸೂಚಿಸಿರುವಂತೆ.

**ಭುಜಪದಕ :** ಸ್ಕೌಟ್ ಮಾಸ್ಟರು ಮತ್ತು ಸಹಾಯಕ ಸ್ಕೌಟ್ ಮಾಸ್ಟರರಿಗೆ ಸೂಚಿಸಿರುವಂತೆ.

ಆ) ವಾಯು ಸ್ಕೌಟ್ ಮಾಸ್ಟರು ಮತ್ತು ಸಹಾಯಕ ವಾಯು ಸ್ಕೌಟ್‌ಮಾಸ್ಟರುಗಳಿಗೆ ಸಮವಸ್ತ್ರ :

ಎಲ್ಲಾ ವಾಯು ಸ್ಕೌಟ್ ಮಾಸ್ಟರು ಮತ್ತು ಸಹಾಯಕ ಸ್ಕೌಟ್ ಮಾಸ್ಟರುಗಳು, ಸ್ಕೌಟ್ ಮಾಸ್ಟರು ಮತ್ತು ಸಹಾಯಕ್ ಸ್ಕೌಟ್ ಮಾಸ್ಟರ್‌ಗಳಂತೆಯೇ ಸಮವಸ್ತ್ರ ಧರಿಸುತ್ತಾರೆ. ಜೊತೆಗೆ ಬಲಜೇಬಿನ ಮೇಲೆ 4 ಸೆಂ.ಮೀ. ಅಂತರದಲ್ಲಿ ವಾಯುಸ್ಕೌಟ್ ಪದಕ ಧರಿಸುತ್ತಾರೆ.

**ಇ) ಸಾಗರ ಸ್ಕೌಟ್ ಮಾಸ್ಟರು ಮತ್ತು ಸಹಾಯಕ ಸಾಗರ ಸ್ಕೌಟ್‌ಮಾಸ್ಟರುಗಳಿಗೆ ಸಮವಸ್ತ್ರ :**

ಸಾಗರ ಸ್ಕೌಟ್ ಮಾಸ್ಟರು ಮತ್ತು ಸಹಾಯಕ ಸಾಗರ ಸ್ಕೌಟ್ ಮಾಸ್ಟರುಗಳು, ಸ್ಕೌಟ್ ಮಾಸ್ಟರು ಮತ್ತು ಸಹಾಯಕ್ ಸ್ಕೌಟ್ ಮಾಸ್ಟರ್‌ಗಳಂತೆಯೇ ಸಮವಸ್ತ್ರ ಧರಿಸುತ್ತಾರೆ. ಜೊತೆಗೆ ಬಲಜೇಬಿನ ಮೇಲೆ 4 ಸೆಂ.ಮೀ. ಅಂತರದಲ್ಲಿ ಸಾಗರ ಸ್ಕೌಟ್ ಪದಕ ಧರಿಸುತ್ತಾರೆ.



# ಅಧ್ಯಾಯ–6

# ಗುಂಪಿನ* ಆಡಳಿತ

"ಸ್ಕೌಟಿಂಗ್ ಒಂದು ಸಂಸ್ಥೆ ಮಾತ್ರವಲ್ಲ. ಆಂದೋಳನ"ವೂ ಸಹ ಎಂದು ಬಿ.ಪಿ. ರವರು ಹೇಳಿದ್ದಾರೆ. ಆಡಳಿತಾನುಕೂಲಕ್ಕಾಗಿಯಾದರೂ, ಅಲ್ಪಸ್ವಲ್ಪ ರೀತಿಯ ವ್ಯವಸ್ಥೆ ಇರಬೇಕಲ್ಲವೇ?‍

ಸ್ಕೌಟಿಂಗ್ ಗುಂಪು ಪದ್ಧತಿಯನ್ನು ಅನುಸರಿಸುತ್ತದೆ. ಮರಿಗಳ ಹಿಂಡು, ಸ್ಕೌಟ್‌ದಳ, ರೋವರ್ ತಂಡ ಒಟ್ಟಾಗಿ ಕೆಲಸ ಮಾಡಬೇಕು. ಆಕಾರಣ ಆಯಾಯಾ ಬಾಲಕ ಯುವಕರಿಗೆ, ಸೂಕ್ತರೀತಿಯಲ್ಲಿ ಶಿಕ್ಷಣ ದೊರಕಬೇಕು. ಒಂದು ಗುಂಪಿನಲ್ಲಿ ಮರಿಗಳ ಹಿಂಡು ಮರಿಗಳ ಕಾರ್ಯಕ್ರಮ, ಅದರ ವಿಧಿ ವಿಧಾನಗಳಿಗನುಸಾರವಾಗಿ ಕೆಲಸ ಮಾಡಬೇಕು. ಅದೇ ರೀತಿ ಸ್ಕೌಟ್ ದಳವು ತನ್ನದೇ ವಿಧಿ, ವಿಧಾನಗಳಿಗನು ಗುಣವಾಗಿ ಕಾರ್ಯಕ್ರಮಗಳನ್ನು ನಡೆಸಬೇಕು. ರೋವರ್ ತಂಡವಾದರೂ ರೋವರಿಂಗ್‌ನ ವಿಧಿ, ವಿಧಾನ, ಕಾರ್ಯಕ್ರಮ ಗಳನ್ನನುಸರಿಸಿ ಕೆಲಸ ಮಾಡಬೇಕು.

ಗುಂಪು ಪದ್ಧತಿಯು ಯಶಸ್ವಿ ಆಗಬೇಕಾದರೆ:

i) ಗುಂಪಿನ ಸ್ಕೌಟರ್‌ಗಳಲ್ಲಿ ಪರಸ್ಪರ ಹೊಂದಾಣಿಕೆ ಇರಬೇಕು.

ii) ಅವರಲ್ಲಿ ನಿಷ್ಠೆಯಿರಬೇಕು.

ಗುಂಪಿನಲ್ಲಿನ ಸ್ಕೌಟರುಗಳು ಒಂದೇ ಕುಟುಂಬದ ಸದಸ್ಯರಂತೆ ವರ್ತಿಸಬೇಕು. ಒಗ್ಗೂಡಿ ಕೆಲಸ ಮಾಡಬೇಕು. ಗುಂಪನ್ನು ಒಂದು ಕೌಟುಂಬಿಕ ವ್ಯವಸ್ಥೆಯೆಂದೇ ಹೇಳಬೇಕು. ಗ್ರೂಪ್ ಲೀಡರು ಗುಂಪಿನ ಮೂರೂ ವಿಭಾಗಗಳ ಕೆಲಸಗಳನ್ನು ಸಮನ್ವಯಗೊಳಿಸುತ್ತಾರೆ. ಪ್ರತಿ ವಿಭಾಗದ ಸ್ಕೌಟರುಗಳೂ ಅವರವರ ಆಲೋಚನಾ ಮಾರ್ಗಗಳನ್ನನುಸರಿಸಿ, ಕೆಲಸ ಕಾರ್ಯಗಳನ್ನು ನಿರ್ವಹಿಸಲು, ಸಂಪೂರ್ಣ ಸ್ವಾತಂತ್ರ್ಯ ಹಾಗೂ ಅವಕಾಶಗಳನ್ನು ಕಲ್ಪಿಸುತ್ತಾರೆ. ವಿಭಾಗೀಯ ಸ್ಕೌಟರುಗಳಾದರೋ, ಗ್ರೂಪ್ ಲೀಡರ್‌ನ ಸ್ಥಾನಕ್ಕೆ ಯುಕ್ತರೀತಿಯ ಗೌರವ ನೀಡಿ,

---

* ಗುಂಪು ಮತ್ತು ಮಂಡಲ ಪರ್ಯಾಯ ಪದಗಳು

ಗುಂಪಿನ ಎಲ್ಲಾ ವಿಷಯಗಳಲ್ಲಿ ಅವರ ಸಹಾಯ, ಸಹಕಾರಗಳನ್ನು ತೆಗೆದುಕೊಳ್ಳುತ್ತಾರೆ. ತಮ್ಮ ವಿಭಾಗದ ಆಗುಹೋಗುಗಳ ಬಗ್ಗೆ ಆಗಾಗ್ಗೆ ತಿಳಿಸುತ್ತಿರುತ್ತಾರೆ.

ಗ್ರೂಪ್ ಲೀಡರು ಕುಟುಂಬದ ಯಜಮಾನನಿದ್ದಹಾಗೆ, ವಿಭಾಗೀಯ ಸ್ಕೌಟರುಗಳು ದೀಕ್ಷಾಸಮಾರಂಭ, ಆರೋಹಣ ಸಮಾರಂಭ, ಶಿಬಿರಗಳು, ಪರ್ಯಟನೆಗಳು, ಪೋಷಕರ ಸಭೆಗಳು ಮುಂತಾದ ಎಲ್ಲಾ ಪ್ರಮುಖ ವಿಷಯಗಳನ್ನೂ ಅವರಿಗೆ ತಿಳಿಸುತ್ತಾ, ಆ ಸಮಾರಂಭ, ಸಂಘಟನೆಗಳಲ್ಲಿ ಅವರಿಗೆ ಮುಖ್ಯಸ್ಥಾನ ನೀಡುತ್ತಾ ಬರುತ್ತಾರೆ. ಸಮಸ್ಯೆಗಳು ಎದುರಾದಾಗ ಅವರೊಡನೆ ಚರ್ಚಿಸಿ, ಅವರ ಅಭಿಪ್ರಾಯದ ಬಳಿಕವೇ ತೀರ್ಮಾನವನ್ನು ತೆಗೆದುಕೊಂಡು, ಕಾರ್ಯಾಚರಣೆಗೆ ಇಳಿಯುತ್ತಾರೆ.

ಗ್ರೂಪ್ ಲೀಡರ್ ಆದವರು, ಸ್ಥಳೀಯ ಹಾಗೂ ಜಿಲ್ಲಾ ಸಂಸ್ಥೆಗಳಲ್ಲಿ ಗುಂಪನ್ನು ಪ್ರತಿನಿಧಿಸಿ ಮಾತನಾಡುವ ವ್ಯಕ್ತಿಗಳಾಗಿರುತ್ತಾರೆ, ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಆಯುಕ್ತರು ಮತ್ತಿತರ ಪದಾಧಿಕಾರಿಗಳೊಡನೆ ಸಂಪರ್ಕವನ್ನಿಟ್ಟುಕೊಂಡಿರುತ್ತಾರೆ. ಬಾಲಕರಿಗೆ ದೊರಕುವ ಶಿಕ್ಷಣದ ಬಗ್ಗೆ ಅವರಿಗೆ ನೇರ ಸಂಪರ್ಕವಿಲ್ಲದಿದ್ದರೂ, ಸಂಸ್ಥೆಯ ವಿಧಿ, ವಿಧಾನಗಳ ಪ್ರಕಾರವೇ ಶಿಕ್ಷಣವನ್ನು ನೀಡಬೇಕಾದ ಬಗ್ಗೆ ಜವಾಬ್ದಾರಿ ಇರುತ್ತದೆ.

**ಸಂಸ್ಥೆಯ ವಿಧಿ-ವಿಧಾನಗಳು ಹೀಗಿವೆ:**

i) **ಮರಿಗಳ ಹಿಂಡಿನಲ್ಲಿ :** ಮರಿಗಳ ನಿಯಮ; ಪದಕ ಪದ್ಧತಿ, ಕಾಡಿನ ವಾತಾವರಣ; ಇವುಗಳ ಬಗ್ಗೆ ನಿಷ್ಠೆಯನ್ನು ಹೊಂದಿರುವುದು, ಬಾಲಕರು ಮುಂದೆ ಉತ್ತಮ ಸ್ಕೌಟುಗಳಾಗಲು, ತಯಾರಿ ನೀಡುವುದು ಹಿಂಡಿನ ಮುಖ್ಯ ಉದ್ದೇಶವೆಂಬ ಅಂಶವನ್ನು ಗಣನೆಯಲ್ಲಿಟ್ಟುಕೊಳ್ಳುವುದು.

ii) **ಸ್ಕೌಟ್ ದಳದಲ್ಲಿ :** ಪದಕ ಪದ್ಧತಿಯನ್ನು ಪ್ರಗತಿಪರವಾಗಿ ಬಳಸಿಕೊಳ್ಳುವ ಬಗ್ಗೆ ನಿಷ್ಠರಾಗಿರುವುದು. "ಗೌರವಾನ್ವಿತ ನ್ಯಾಯ ಸಭೆ"ಯ ಸಂಪೂರ್ಣ ಬಳಕೆ.

iii) **ರೋವರ್ ತಂಡದಲ್ಲಿ :** ರೋವರಿಂಗ್ ಸ್ಕೌಟ್ ಸಂಸ್ಥೆಯ 3ನೇಯ ಹಂತದ ಶೈಕ್ಷಣಿಕ ವಿಭಾಗ ಎಂಬ ಬಗ್ಗೆ ಸಮ್ಮತಿ. ಶೈಕ್ಷಣಿಕ ಯೋಜನೆಯ ಭಾವನಾತ್ಮಕ ಬಳಕೆ. ಸಂಸ್ಥೆಯ ಒಳಗೆ (ಬೋಧಕರಾಗಿ, ಸ್ಕೌಟರುಗಳಾಗಿ) ಮತ್ತು ಸಾರ್ವಜನಿಕರಿಗೆ ಸೇವೆ ಸಲ್ಲಿಸುವ ಬಗ್ಗೆ ಒತ್ತಾಸೆ ನೀಡುವುದು.

ಗ್ರೂಪ್ ಲೀಡರಾದವರು ಯಾವುದೇ ವಿಭಾಗವನ್ನು ನಡೆಸುವ ಜವಾಬ್ದಾರಿಯನ್ನು ಹೊರದೇ ಇರುವುದು ಹೆಚ್ಚು ಸೂಕ್ತ. ಹಾಗೆ ಜವಾಬ್ದಾರಿ ಹೊರುವುದಾದರೆ, ತಮ್ಮ ಸ್ಥಾನಕ್ಕೆ ಸಂಪೂರ್ಣ ನ್ಯಾಯ ದೊರಕಿಸಲಾಗುವುದಿಲ್ಲ.

**ಗುಂಪಿನ ವ್ಯವಹಾರಗಳನ್ನು ನೋಡಿಕೊಳ್ಳಲು ಗುಂಪಿನ ಪರಿಷತ್ತು ಮತ್ತು ಗುಂಪಿನ ಸಮಿತಿ ಇವುಗಳು ಇರುತ್ತವೆ.**

ಗುಂಪಿನ ಸಮಿತಿಯಲ್ಲಿ, ಗುಂಪಿನ ಎಲ್ಲಾ ಸನ್ನದು ಪಡೆದ ಸ್ಕೌಟರುಗಳು ಇರುತ್ತಾರೆ. ಗ್ರೂಪ್ ಲೀಡರು ಅದರ ಅಧ್ಯಕ್ಷರಾಗಿರುತ್ತಾರೆ.

ಗುಂಪಿನ ಪರಿಷತ್ತಿನಲ್ಲಿ ಹೆಚ್ಚುವರಿ ಸಾಮಾನ್ಯ ಜನರಿರುತ್ತಾರೆ. ದಳದ ಬಾಲಕರ (ಮರಿಗಳು, ಸ್ಕೌಟುಗಳು, ರೋವರ್‌ಗಳು) ತಾಯ್ತಂದೆಯರು ಕೆಲವರು, ಮಾಜಿ ಸದಸ್ಯರು (ಉದಾ:– ಮಾಜಿ ಸ್ಕೌಟುಗಳು ಗುಂಪಿನ ಬಗ್ಗೆ ಅಭಿಮಾನದಿಂದ ಸಹಾಯ ಮಾಡಲೂ, ತಮ್ಮ ಪ್ರಭಾವ ಬೀರಿ ಸಹಾಯ ಒದಗಿಸಲೂ ಮುಂದೆ ಬರುವವರು) ಸಹ ಇರುತ್ತಾರೆ. ಗ್ರೂಪ್ ಲೀಡರನ್ನು ಬಿಟ್ಟು ಇತರ ಸ್ಕೌಟರುಗಳು ಗುಂಪು ಪರಿಷತ್‌ನಲ್ಲಿ ಇರಬಾರದು. ಸದಸ್ಯರ ಪೈಕಿ (ಗ್ರೂಪ್ ಲೀಡರನ್ನು ಬಿಟ್ಟು) ಒಬ್ಬರನ್ನು ಅಧ್ಯಕ್ಷರನ್ನಾಗಿ ಆಯ್ಕೆ ಮಾಡಿಕೊಳ್ಳಬಹುದು. ಗ್ರೂಪ್ ಲೀಡರನ ಇಷ್ಟಾನುಸಾರವಾಗಿ ಈ ಪರಿಷತ್ತನ್ನು ಊರ್ಜಿತಗೊಳಿಸಬಹುದು ಅಥವಾ ರದ್ದುಪಡಿಸಬಹುದು. ಹಾಗೇನಾದರೂ ರದ್ದುಪಡಿಸುವುದಾದರೆ ಸ್ಥಳೀಯ ಸಂಸ್ಥೆಯ ಅನುಮೋದನೆ ಪಡೆಯಬೇಕು. ಶಾಲಾಗುಂಪುಗಳಲ್ಲಿ ಶಾಲಾ ಮುಖ್ಯೋಪಾಧ್ಯಾಯರು ಪರಿಷತ್ತಿನ ಅಧ್ಯಕ್ಷರಾಗಬಹುದು. ಸ್ಥೂಲವಾಗಿ ಹೇಳುವುದಾದರೆ, ಗುಂಪಿನ ಸಮಿತಿಯು ಬಾಲಕರ ಶಿಕ್ಷಣದ ಬಗ್ಗೆ ಆಸಕ್ತಿವಹಿಸುತ್ತದೆ. ಗುಂಪಿನ ಪರಿಷತ್ತು ಇತರ ವ್ಯವಹಾರಗಳ ಬಗ್ಗೆ (ಆರ್ಥಿಕ, ಆಡಳಿತ, ಪತ್ರವ್ಯವಹಾರ, ಆಸ್ತಿಪಾಸ್ತಿ ಇತ್ಯಾದಿ) ಗಮನ ಕೊಡುತ್ತದೆ.

**ಗುಂಪಿನ ಸಮಿತಿ**

i) ಗುಂಪಿನ ಎಲ್ಲಾ ವಿಭಾಗಗಳ, ಶೈಕ್ಷಣಿಕ ವಿಧಾನಗಳನ್ನು ಸಮನ್ವಯ ಗೊಳಿಸುತ್ತದೆ. ಇದರಿಂದ ಸ್ವಾಭಾವಿಕವಾಗಿಯೂ, ತಾರ್ಕಿಕವಾಗಿಯೂ, ಪ್ರತಿ ವಿಭಾಗದ ವಿಧಾನಗಳು, ಮುಂದಿನ ವಿಭಾಗಕ್ಕೆ ಪೂರಕವಾಗಿರುವಂತೆ ಕಾಯ್ದುಕೊಂಡಂತೆ ಆಗುತ್ತದೆ.

ii) ಎಲ್ಲಾ ಆಟಗಳನ್ನು, ಕಾರ್ಯಕ್ರಮಗಳನ್ನು ಸಮನ್ವಯಗೊಳಿಸುತ್ತದೆ. ಇದರಿಂದ ಅಂತರ ವಿಭಾಗಗಲ್ಲಿ, ಅವು ಪುನರಾವರ್ತನೆ ಆಗದಂತೆ, ಅತಿಕ್ರಮಿಸದಂತೆ ಕಾಯ್ದುಕೊಂಡಂತಾಗುತ್ತದೆ.

iii) ಒಟ್ಟಾರೆ ಗುಂಪಿನ ಹಿತದೃಷ್ಟಿಯಿಂದ, ಎಲ್ಲಾ ಚಟುವಟಿಕೆಗಳಲ್ಲಿಯೂ, ಗುಣಮಟ್ಟವನ್ನು ಕಾಯ್ದುಕೊಳ್ಳುತ್ತದೆ.

iv) ಬಾಲಕರಿಗೆ ಸಂಬಂಧಿಸಿದಂತೆ, ಸಾಮಾನು ಸರಂಜಾಮುಗಳಿಗೆ ಸಂಬಂಧಿಸಿ ದಂತೆ, ಅವಶ್ಯಕ ಸಹಾಯಗಳಿಗಾಗಿ, ಇನ್ನೂ ಮುಂತಾದ ಸಮಸ್ಯಾ ಪರಿಹಾರಗಳನ್ನು ಚರ್ಚಿಸಿ ಸೂಕ್ತಕ್ರಮ ಕೈಗೊಳ್ಳುತ್ತದೆ.

v) ವಿಧಿ ವಿಹಿತವಾದ ಉತ್ಸವ, ಸಮಾರಂಭಗಳನ್ನು ಒಂದುಗೂಡಿ (ಜಂಟಿಯಾಗಿ) ಸಂಘಟಿಸುತ್ತದೆ.

vi) ಪ್ರತಿವಿಭಾಗದ ಆಯವ್ಯಯ ಅಂದಾಜುಪಟ್ಟಿಯನ್ನು ತಯಾರಿಸುತ್ತದೆ. ಇತರ ಆರ್ಥಿಕ ವಿಷಯಗಳನ್ನು ಚರ್ಚಿಸುತ್ತದೆ. ಇದರಿಂದ ಗ್ರೂಪ್ ಲೀಡರು ಇವುಗಳನ್ನು ಗುಂಪಿನ ಪರಿಷತ್ತು ಸಭೆಯಲ್ಲಿ ಮಂಡಿಸಲು ಅನುಕೂಲ ವಾಗುತ್ತದೆ.

vii) ಗುಂಪಿಗೆ ಸೇರಿದ ಸ್ಥಿರ, ಚರ, ಆಸ್ತಿಗಳ ಉಪಯೋಗವನ್ನು ಸಮನ್ವಯ ಗೊಳಿಸುತ್ತದೆ.

viii) ಸ್ಕೌಟರುಗಳ ಅನುಭವವನ್ನು ಪರಸ್ಪರ ಹಂಚಿಕೊಳ್ಳುವ ಮಾಧ್ಯಮ ವಾಗುವುದೇ ಅಲ್ಲದೆ, ಅವರುಗಳಲ್ಲಿ ಸಮೈಕ್ಯತಾ ಭಾವನೆಯನ್ನುಂಟು ಮಾಡುತ್ತದೆ.

## ಗುಂಪಿನ ಪರಿಷತ್ತು

i) ಗುಂಪಿನ ಪರಿಷತ್ತು, ಗುಂಪಿನ ಅವಶ್ಯಕತೆಗಳಿಗೆ ನೆರವಾಗುತ್ತದೆ. ಉದಾ: ಗುಂಪನ್ನು ನಡೆಸುವ ಸ್ಥಳ, ಆರ್ಥಿಕ ಸವಲತ್ತು ಇತ್ಯಾದಿ.

ii) ಗುಂಪಿನ ಸ್ಥಿರ ಚರಾಸ್ತಿಗಳು, ಹಣಕಾಸಿನ ವ್ಯವಹಾರವನ್ನು ನೋಡಿ ಕೊಳ್ಳುತ್ತದೆ. ಇದರಿಂದ ಸ್ಕೌಟರುಗಳು ತಮ್ಮ ಎಲ್ಲಾ ಶಕ್ತಿಯನ್ನೂ ಬಾಲಕರ ಶಿಕ್ಷಣಕ್ಕಾಗಿಯೇ ಮೀಸಲಿಡಬಹುದು.

iii) ಶಿಬಿರ ಯೋಗ್ಯ ಸ್ಥಳವನ್ನು ಪತ್ತೆಮಾಡುವುದು; ಶಿಕ್ಷಣಕ್ಕೆ ಬೇಕಾದ ಸಾಮಗ್ರಿಗಳನ್ನು ಒದಗಿಸುವುದು; ಸ್ಥಳೀಯ ಸಂಸ್ಥೆಗಳು, ಸರ್ಕಾರಿ ಕಾರ್ಯಾಲಯಗಳು, ಸೇವಾ ಸಂಘಗಳು ಇವೇ ಮುಂತಾದವುಗಳೊಡನೆ ವ್ಯವಹರಿಸಿ, ಸ್ಕೌಟಿಂಗ್‌ನ ಉದ್ದೇಶ ಸಾಧನೆಗಾಗಿ ಸ್ಕೌಟರುಗಳಿಗೆ ನೆರವಾಗುವುದು.

iv) ಸ್ಕೌಟರುಗಳು, ಬೋಧಕರುಗಳು ಇವರುಗಳ ಅವಶ್ಯಕತೆಗೆ ತಕ್ಕಂತೆ ಸಾಧನ, ಸಾಮಗ್ರಿಗಳನ್ನೊದಗಿಸಿ, ಗುಂಪಿನಲ್ಲಿ ನೀಡಲಾಗುವ ಶಿಕ್ಷಣವು ತಪ್ಪದೆ ಮುಂದುವರೆಯಲು ನೆರವಾಗುವುದು.

v) ಬಾಲಕರ ಶಿಕ್ಷಣದ ವಿಷಯದಲ್ಲಿ ಜಿಲ್ಲಾ ಆಯುಕ್ತರಿಗೆ ನೇರ ಜವಾಬ್ದಾರಿ ಇರುವುದಿಲ್ಲ. ಆದರೆ ಗುಂಪು ನೆಮ್ಮದಿಯಿಂದ ಕೆಲಸ ಮಾಡಿಕೊಂಡು ಹೋಗುವ ಬಗ್ಗೆ ಜವಾಬ್ದಾರಿ ಇರುತ್ತದೆ.

## ಗುಂಪಿನ ನೊಂದಣಿ

ಸ್ಕೌಟ್ ಗುಂಪುಗಳು ಸ್ಥಳೀಯ/ಜಿಲ್ಲಾ ಸಂಸ್ಥೆಗಳಲ್ಲಿ ಹಾಗೂ ಜಿಲ್ಲಾ ಮುಖ್ಯ ಆಯುಕ್ತರು ಮತ್ತು ಜಿಲ್ಲಾ ಆಯುಕ್ತರ ಶಿಫಾರಸ್ಸಿನ ಮೇರೆಗೆ ರಾಜ್ಯ ಸಂಸ್ಥೆ (ಕಾರ್ಯಾಲಯ)ಯಲ್ಲಿ ನೋಂದಣಿ ಪಡೆಯುತ್ತದೆ.

ಸ್ಥಳೀಯ ಸಂಸ್ಥೆಗಳು ಮತ್ತು ಜಿಲ್ಲಾ ಆಯುಕ್ತರುಗಳು, ಗುಂಪನ್ನು ನಡೆಸಲು ತರಬೇತಿ ಪಡೆದ ಯೋಗ್ಯ ಸ್ಕೌಟರುಗಳಿರುವುದಾಗಿಯೂ, ಅವರು ಅನುಮೋದಿತ ರೀತಿಯಲ್ಲಿ ಗುಂಪನ್ನು ನಡೆಸುವುದಾಗಿಯೂ; ಅವರುಗಳು ಎ.ಪಿ.ಆರ್.ಓ. ನಿಯಮಾವಳಿ ಪುಸ್ತಕಗಳ ಒಕ್ಕಣೆಯನ್ನು ಒಪ್ಪಿಕೊಂಡು, ನಿಯಮಗಳ ಪ್ರಕಾರ, ಆದಷ್ಟೂ ಜಾಗ್ರತೆ, ಗುಂಪು ಪರಿಷತ್ತನ್ನು ರಚಿಸಲಿರುವುದಾಗಿಯೂ, ತಮಗೆ ತಾವು ಗಮನಿಸಿಕೊಂಡು, ಗುಂಪು ನೋಂದಣಿ ಹೊಂದುವ ಬಗ್ಗೆ ತೃಪ್ತಿಕರವೆಂದು ಕಂಡುಬಂದ ಮೇಲೆಯೇ ಶಿಫಾರಸ್ಸು ಮಾಡಬೇಕು.

ಸ್ಥಳೀಯ ಸಂಸ್ಥೆ/ಜಿಲ್ಲಾ ಸಂಸ್ಥೆ ಮತ್ತು ಜಿಲ್ಲಾ ಆಯುಕ್ತರು, ರಾಜ್ಯ ಕಾರ್ಯಾಲಯದಿಂದ ನೋಂದಣಿ ಫಾರಂಗಳನ್ನು ತರಿಸಿಕೊಂಡು, ತ್ರಿಪ್ರತಿಯಲ್ಲಿ ಶಿಫಾರಸ್ಸು ಮಾಡಬೇಕು. ಶಾಲಾ ದಳಗಳ ವಿಷಯದಲ್ಲಿ ಆಯಾಶಾಲೆಗಳ ಮುಖ್ಯೋಪಾದ್ಯಾಯರು ಸಹಿ ಮಾಡಬೇಕು.

ಗುಂಪು ನೋಂದಣಿ ಆದ ಬಗ್ಗೆ, ರಾಜ್ಯ ಕಾರ್ಯಾಲಯವು, ಶಾಸನ ಪತ್ರವನ್ನು (Charter)ನೀಡುತ್ತದೆ. ಗುಂಪು ಅದನ್ನು ತಮ್ಮ ಸಂಘಾಲಯದಲ್ಲಿ (Club Room) ಪ್ರದರ್ಶಿಸಬೇಕು. ಯಾರೇ ಆಗಲೀ ಇದನ್ನು ನೋಡಿದ ಕೂಡಲೇ, ಗುಂಪು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಅಧಿಕೃತ ಅಂಗವೆಂಬುದು ತಿಳಿದು ಬರುತ್ತದೆ.

ಈ ರೀತಿ ನೋಂದಣಿ ಪಡೆದ ಮೇಲೆ ಮಾತ್ರ ಬಾಲಕರು, ಮರಿಗಳು, ಸ್ಕೌಟ್‌ಗಳು ಮತ್ತು ರೋವರ್‌ಗಳೆಂದು ಕರೆದುಕೊಳ್ಳಬಹುದು ಮತ್ತು ಸಂಸ್ಥೆಯ ಅಧಿಕೃತ ಸಮವಸ್ತ್ರ ಮತ್ತು ಪದಕಗಳನ್ನು ಧರಿಸಲು ಅರ್ಹರಾಗುತ್ತಾರೆ.

ನೋಂದಣಿ ಪಡೆದ ಬಳಿಕ ಅವರಿಗೆ ಕೆಲವು ಸೌಲಭ್ಯಗಳೂ ದೊರೆಯುತ್ತವೆ. ಉದಾ:- ರೈಲು, ಬಸ್ಸು ಮುಂತಾದ ಸಾರಿಗೆ ವ್ಯವಸ್ಥೆಗಳಲ್ಲಿ ರಿಯಾಯಿತಿ ಉಪಯೋಗ ಪಡೆಯಬಹುದು. ಶಾಲೆಯ ನಿಗದಿತ ಹಣವನ್ನು ಶಿಬಿರಗಳು, ಪರ್ಯಟನೆಗಳು, ಚಾರಣಗಳು ಇತ್ಯಾದಿಗಳಿಗೆ ಬಳಸಬಹುದು.

ನೋಂದಣಿ ಪಡೆಯುವ ಮುನ್ನ, ರಾಜ್ಯ ಕಛೇರಿಯವರು ನಿಗದಿಪಡಿಸಿದ ವೈಯಕ್ತಿಕ ನೋಂದಣಿ ಮತ್ತು ಗುಂಪು ನೋಂದಣಿ ಹಣವನ್ನು ಸಂದಾಯ ಮಾಡಬೇಕು.

ನೋಂದಣಿ ಪಡೆಯುವುದರಿಂದ ಗುಂಪು ಹಲವು ಕಟ್ಟುಪಾಡುಗಳಿಗೆ ಒಳಗಾಗಬೇಕಾಗುತ್ತದೆ. ಎ.ಪಿ.ಆರ್.ಓ. ನಲ್ಲಿ ಕಾಣಿಸಿರುವ ಸಂಸ್ಥೆಯ ನಿಯಮ, ನಿಬಂಧನೆಗಳಿಗೆ ಗುಂಪು ಒಪ್ಪಿಕೊಂಡಂತೆ. ನೋಂದಣಿ ಪಡೆಯುವಾಗ ಗುಂಪು ಪೂರ್ಣ ಗುಂಪಲ್ಲದಿದ್ದರೆ, ಅನಿವಾರ್ಯ ಸಂದರ್ಭಗಳನ್ನು ಬಿಟ್ಟರೆ, ಆದಷ್ಟೂ ಜಾಗ್ರತೆ ಅದು ಪೂರ್ಣ ಗುಂಪಾಗಬೇಕು.

ಎರಡನೆಯದಾಗಿ ನಿಯಮಾವಳಿಯಲ್ಲಿ ಹೇಳಿರುವಂತೆ ಸಂಸ್ಥೆಯ ಧಾರ್ಮಿಕ ನೀತಿಯನ್ನು ಅನುಷ್ಠಾನಕ್ಕೆ ತರಬೇಕು.

ಮೂರನೆಯದಾಗಿ ಸ್ಕೌಟ್ ಶಿಕ್ಷಣದ ವಿವಿಧ ಕ್ಷೇತ್ರಗಳಾದ ಸಚ್ಚಾರಿತ್ರ್ಯ, ಆರೋಗ್ಯ, ಕರಕುಶಲತೆ ಮತ್ತು ಸೇವೆ ಇವುಗಳಲ್ಲಿ ಬಾಲಕರಿಗೆ ಶಿಕ್ಷಣವು ದೊರಕಿ ತೀರಬೇಕು.

ನಾಲ್ಕನೆಯದಾಗಿ ಗುಂಪು ತನ್ನ ಉಪಯೋಗಕ್ಕಾಗಿ, ಸೂಕ್ತ ಸಂಘಾಲಯವನ್ನು ಹೊಂದಿರಬೇಕು. ಅದರಲ್ಲಿ ಬಾಲಕರ ಶಿಕ್ಷಣಕ್ಕೆ ಅವಶ್ಯಕವಾದ ಸಾಮಾನು, ಸರಂಜಾಮುಗಳಿರಬೇಕು ಮತ್ತು ಬಾಲಕರಿಗೆ ಆದಷ್ಟು ಶಿಕ್ಷಣಾವಕಾಶಗಳಿರಬೇಕು.

ಗುಂಪುಗಳು ವರ್ಷಕ್ಕೊಮ್ಮೆ ನಿಗದಿತ ಶುಲ್ಕವನ್ನು ಸಂದಾಯ ಮಾಡಿ, ರಾಜ್ಯ ಕಾರ್ಯಾಲಯದಿಂದ ನೋಂದಣಿಯನ್ನು ಪುನರ್ನವೀಕರಿಸಿಕೊಳ್ಳಬೇಕು.

ನೋಂದಣಿಯ ಪುನರ್ನವೀಕರಣವು ಬಹು ಮುಖ್ಯವಾದುದು. ಪುನರ್ನವೀಕರಣವಾಗದಿದ್ದಲ್ಲಿ ಗುಂಪು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಭಾಗವಾಗಿ ಉಳಿಯದೆ, ಸದಸ್ಯತ್ವದ ಎಲ್ಲಾ ಸೌಲಭ್ಯಗಳನ್ನೂ ಕಳೆದುಕೊಳ್ಳುತ್ತದೆ. ಹಾಗೆಯೇ ಅದರಲ್ಲಿರುವ ಮರಿಗಳು, ಸ್ಕೌಟ್‌ಗಳು, ರೋವರ್‌ಗಳೂ ಸಹ ತಮ್ಮ ಸದಸ್ಯತ್ವವನ್ನು ಕಳೆದುಕೊಂಡು, ಸಂಸ್ಥೆಯ ಸದಸ್ಯರಾಗಿ ಉಳಿಯುವುದಿಲ್ಲ ಮತ್ತು ಸಂಸ್ಥೆಯ ಸಮವಸ್ತ್ರ, ಪದಕಗಳನ್ನು ಧರಿಸಲು ಅನರ್ಹರಾಗುತ್ತಾರೆ.

ನೋಂದಣಿಯು ಇನ್ನೂ ಅಸ್ತಿತ್ವದಲ್ಲಿರುವಾಗಲೇ ಪುನರ್ನವೀಕರಿಸಿ ಕೊಳ್ಳಬೇಕು. ಹಾಗೆ ಮಾಡದಿದ್ದರೆ ಅದು ಹೊಸ ನೋಂದಣಿ ಆಗುತ್ತದಾಗಲೀ ಪುನರ್ನವೀಕರಣವಾಗುವುದಿಲ್ಲ.



## ಅಧ್ಯಾಯ–7

# ದಳವನ್ನು ಪ್ರಾರಂಭಿಸುವುದು ಹೇಗೆ?

ಭಾರತದಲ್ಲಿ, ಸ್ಕೌಟಿಂಗ್ ಹೆಚ್ಚು ಕಡಿಮೆ ಶಾಲೆಗಳಿಗೂ, ವಿದ್ಯಾಸಂಸ್ಥೆಗಳಿಗೂ ಸೀಮಿತವಾಗಿದೆ. ಅದರಲ್ಲೂ ಒಂದು ಶಾಲೆಯಲ್ಲಿ ಸ್ಕೌಟ್ ದಳವಿದ್ದರೆ, ನಾಲ್ಕಾರು ಶಾಲೆಗಳಲ್ಲಿ ಸ್ಕೌಟ್ ದಳಗಳು ಇಲ್ಲವೆಂದು ಹೇಳಬಹುದು. ಶೈಕ್ಷಣಿಕ ಕ್ರಮಕ್ಕೆ ಪೂರಕವಾದ ಸ್ಕೌಟಿಂಗ್‌ನ ಮೌಲ್ಯಗಳ ಬಗ್ಗೆ ವಿಶೇಷವಾಗಿ ಒತ್ತಿ ಹೇಳಬೇಕಾಗಿಲ್ಲ. ವಿದ್ಯಾಭ್ಯಾಸ ಕ್ರಮದಲ್ಲಿ ಕಾಣಬರುವ ಅನೇಕ ನ್ಯೂನತೆಗಳನ್ನು ಸರಿಪಡಿಸುವಲ್ಲಿ, ಸ್ಕೌಟಿಂಗ್ ತನ್ನ ಪಾತ್ರವನ್ನು ತೋರಿಸಿಕೊಟ್ಟಿದೆ. ಈ ವರೆಗೆ ಸ್ಕೌಟಿಂಗ್ ಅನ್ನು ಸಂಘಟಿಸದೇ ಇರುವ ಶಾಲೆಗಳು, ಇಂದೋ ನಾಳೆಯೋ ಅದರ ಅವಶ್ಯಕತೆಯನ್ನು ಕಂಡುಕೊಳ್ಳದೆ ಇರುವುದಿಲ್ಲ. ಆ ರೀತಿ ಪ್ರಾರಂಭಿಸಲು ಉದ್ದೇಶಿಸಿದಾಗ, ಹೇಗೆ ಪ್ರಾರಂಭಿಸುವುದು ಎಂಬ ಅಂಶವು ಮುಖ್ಯವಾಗುತ್ತದೆ.

**ಮೊದಲ ಹೆಜ್ಜೆ :** ಶಾಲಾ ಮುಖ್ಯಸ್ಥರು ಸ್ಕೌಟಿಂಗ್‌ನ ವಿಧಿ ವಿಧಾನಗಳು ಮತ್ತು ಸ್ಕೌಟ್ ದಳವನ್ನು ನಡೆಸುವ ಬಗ್ಗೆ ಸ್ಥೂಲವಾಗಿ ತಿಳಿದುಕೊಳ್ಳಬೇಕು. ಸ್ಕೌಟಿಂಗ್‌ನ ಸಂಸ್ಥಾಪಕರಾದ ಬಿ.ಪಿ.ರವರು ಬರೆದಿರುವ "ಬಾಲಕರಿಗಾಗಿ ಸ್ಕೌಟಿಂಗ್" ಮತ್ತು "ಸ್ಕೌಟ್ ಮಾಸ್ಟರಿಗೆ ಸಲಹೆ"ಗಳು (ಏಯ್‌ಡ್ಸ್ ಟು ಸ್ಕೌಟ್ ಮಾಸ್ಟರ್‌ಷಿಪ್) ಇವುಗಳನ್ನು ಸ್ವಲ್ಪವಾದರೂ ಓದಿ ತಿಳಿಯಬೇಕು. ಈ ಗ್ರಂಥಗಳು ಸ್ಕೌಟ್ ಚಟುವಟಿಕೆಗಳ ಬಗ್ಗೆ ಹಾಗೂ ಸ್ಕೌಟ್ ಜೀವನ ಕ್ರಮದ ಬಗ್ಗೆ ತಿಳಿಸಿಕೊಡುತ್ತವೆ.

**ಮುಂದಿನ ಹೆಜ್ಜೆ :** ಶಾಲಾ ಮುಖ್ಯಸ್ಥರು ಮಾಡಬೇಕಾದ ಮುಂದಿನ ಹೆಜ್ಜೆ ಸ್ಕೌಟ್ ಮಾಸ್ಟರನ್ನು ಪತ್ತೆಹಚ್ಚುವುದು. ತಮ್ಮ ಶಿಕ್ಷಕರ ಪೈಕಿ ಒಬ್ಬರನ್ನು ಸಹಜವಾಗಿ ಆಯ್ಕೆ ಮಾಡುತ್ತಾರೆ. ದಳದ ಕಾರ್ಯವು ಮುಂದುವರೆಯ ಬೇಕಾಗಿರುವುದ ರಿಂದಲೂ, ದಳವು ಯಶಸ್ವಿಯಾಗಿ ಕಾರ್ಯನಿರ್ವಹಿಸ ಬೇಕಾಗಿರುವುದರಿಂದಲೂ, ಒಬ್ಬ ಸಹಾಯಕ ಸ್ಕೌಟ್ ಮಾಸ್ಟರನ್ನೂ ಆರಿಸಿಕೊಳ್ಳಬೇಕು.

ಸ್ಕೌಟ್ ಮಾಸ್ಟರು ಮತ್ತು ಸಹಾಯಕ ಸ್ಕೌಟ್ ಮಾಸ್ಟರುಗಳಲ್ಲಿ ಕೆಲವು ಮುಖ್ಯವಾದ ಗುಣಗಳಿರಬೇಕು.

i) ಬಾಲಕರೊಡನೆ ಮಿಳಿತವಾಗಿ ಕೆಲಸಮಾಡುವ ಉತ್ಕಟೇಚ್ಛೆ ಇರಬೇಕು. ಬಾಲಕರ ಆಸೆ, ಆಕಾಂಕ್ಷೆಗಳನ್ನೂ, ಅವಶ್ಯಕತೆಗಳನ್ನೂ ಅರಿತು ಕೆಲಸ ಮಾಡುವ, ಸ್ಪಂದಿಸುವ ಚಾಕಚಕ್ಯತೆ ಇರಬೇಕು.

ii) ಉತ್ತಮ ಮಟ್ಟದ ಸಚ್ಚಾರಿತ್ರ್ಯವುಳ್ಳವರಾಗಿರಬೇಕು. ಬಲಶಾಲಿ ಗಳಾಗಿರಬೇಕು, ಸಮಾಜದಲ್ಲಿ ಗಣ್ಯತೆಯುಳ್ಳವರಾಗಿರಬೇಕು.

ಸ್ಕೌಟ್ ಮಾಸ್ಟರರ ಕೆಲಸವು ಒಂದು ರೀತಿಯಲ್ಲಿ ವಿಶೇಷ ತರಹೆಯದಾಗಿದೆ. ಆ ಕಾರಣ ಸ್ಕೌಟ್ ಮಾಸ್ಟರರು ಮತ್ತು ಸಹಾಯಕ ಸ್ಕೌಟ್ ಮಾಸ್ಟರರು ಇಬ್ಬರೂ ಸಹ ವಿಶೇಷ ರೀತಿಯ ತರಬೇತಿಯನ್ನು ಪಡೆಯಬೇಕು. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯೂ ಅದರ ಅಂಗ ಸಂಸ್ಥೆಗಳಾದ ರಾಜ್ಯ ಘಟಕಗಳೂ, ಆಗಾಗ್ಗೆ ಸ್ಕೌಟ್ ಮಾಸ್ಟರರುಗಳಿಗಾಗಿ ಏರ್ಪಡಿಸುವ ತರಬೇತಿ ಶಿಬಿರಗಳಿಗೆ ಅವರನ್ನು ಆದಷ್ಟು ಜಾಗ್ರತೆ ತರಬೇತಿ ಪಡೆಯಲು ಕಳುಹಿಸಬೇಕು. ಇಬ್ಬರನ್ನೂ ಒಟ್ಟಿಗೆ ಕಳುಹಿಸಲು ಆಗದಿದ್ದರೆ, ಬೇರೆ ಬೇರೆಯಾಗಿ ಕಳುಹಿಸಬಹುದು. ಈ ತರಬೇತಿಯು ಬಹಳವಾಗಿ ಸಹಾಯಕವಾಗಿರುತ್ತದೆ.

ಸ್ಕೌಟ್ ಮಾಸ್ಟರರು ಮತ್ತು ಸಹಾಯಕ ಸ್ಕೌಟ್ ಮಾಸ್ಟರರುಗಳ ಅರ್ಹತೆಯ ಬಗ್ಗೆ ವಿವರವಾಗಿ ತಿಳಿಯಲು ಎ.ಪಿ.ಆರ್.ಓ.– ಭಾಗ–2, ಅಧ್ಯಾಯ–2 ರ ನಿಯಮ 4ನ್ನು ನೋಡಿ (ಈ ಬಗ್ಗೆ ಇದೇ ಪುಸ್ತಕದ "ಸ್ಕೌಟ್ ಮಾಸ್ಟರರು ಒಂದು ವಿಚಾರ ಧಾರೆ"ಯಲ್ಲೂ, ಅಧ್ಯಾಯ–5ರಲ್ಲೂ ಸಹ ಉಲ್ಲೇಖಿಸಲಾಗಿದೆ)

ಸ್ಕೌಟ್ ಮಾಸ್ಟರರೂ ಮತ್ತು ಸಹಾಯಕ ಸ್ಕೌಟ್ ಮಾಸ್ಟರರೂ ತಮ್ಮ ಕೆಲಸವನ್ನು ಸ್ವ ಇಚ್ಛೆಯಿಂದ, ಸ್ವಯಂ ಸೇವಾ ಭಾವನೆಯಿಂದ ಮಾಡುತ್ತಾರೆ. ಶಾಲಾ ಮುಖ್ಯಸ್ಥರು ಅವರನ್ನು ಆರಿಸುವಾಗ, ಆ ಶಿಕ್ಷಕರು ಯಾವುದೇ ರೀತಿಯ ಒತ್ತಡಕ್ಕೆ ಮಣಿಯದೆ, ಸ್ವಪ್ರೇರಿತರಾಗಿ ಮುಂದೆ ಬರುತ್ತಾರೆಂಬುದನ್ನು ಖಚಿತಪಡಿಸಿ ಕೊಳ್ಳಬೇಕು.

ಮುಂದಿನ ಹೆಜ್ಜೆಯೇ ದಳವನ್ನು ಸೇರುವ ಬಾಲಕರನ್ನು ಆರಿಸಿಕೊಳ್ಳುವುದು, ಸ್ಕೌಟ್ ದಳಕ್ಕೆ ಸೇರಬೇಕಾದ ಬಾಲಕರು 10+ ಇಂದ 18 ವರ್ಷ ವಯೋಮಿತಿ ಯಲ್ಲಿರಬೇಕು. 10+ ಇಂದ 14 ವರ್ಷ ವಯೋಮಿತಿಯೊಳಗಿನ ಬಾಲಕರನ್ನು ಸೇರಿಸಿಕೊಂಡು ದಳವನ್ನು ಪ್ರಾರಂಭಿಸುವುದು ಹೆಚ್ಚು ಉಪಯುಕ್ತವಾಗಿರುತ್ತದೆ. ಆಕಾರಣ ಇವರು ಶಾಲೆಯಲ್ಲೇ ಅಲ್ಲದೇ, ದಳದಲ್ಲೂ ಸಹ ಹೆಚ್ಚು ಕಾಲ ಇರಲು ಅನುಕೂಲವಾಗುತ್ತದೆ. ಅದೇ ಇನ್ನೂ ಹೆಚ್ಚು ವಯಸ್ಸಿನವರಾದರೆ ಹಾಗಾಗಲು ಸಾಧ್ಯವಾಗುವುದಿಲ್ಲ.

ಶಾಲೆಯಲ್ಲಿ ಸ್ಕೌಟ್ ದಳವನ್ನು ಪ್ರಾರಂಭಿಸಲಿರುವುದಾಗಿಯೂ, ಸೇರಲು ಇಷ್ಟಪಡುವ ಬಾಲಕರು ಇಂತಹ (ನಿಗದಿಪಡಿಸಿದ) ತಾರೀಕಿನೊಳಗೆ, ಇಂತಹ ಶಿಕ್ಷಕರಲ್ಲಿ (ಸ್ಕೌಟ್ ಮಾಸ್ಟರರು ಆಗಲಿರುವವರು) ಹೆಸರು ಬರೆಸಬೇಕೆಂದು ಮೆಮೋ ಕಳುಹಿಸಿದರಾಯಿತು. ಬಾಲಕರು ಸೇರುವುದರಲ್ಲಿ ಸಂದೇಹವಿಲ್ಲ. ಆದರೊಂದು ಮಾತು. ಪ್ರಾರಂಭದಲ್ಲಿ 8–10 ಬಾಲಕರನ್ನು ಮಾತ್ರ ಸೇರಿಸಿಕೊಳ್ಳುವುದೊಳ್ಳೆಯದು. ಸ್ಕೌಟ್ ಮಾಸ್ಟರರು ಹೆಸರು ಕೊಟ್ಟವರನ್ನೆಲ್ಲಾ ಸೇರಿಸಿ ಆಟವಾಡಿಸಿಯೋ ಅಥವಾ ಇತರ ರೀತಿಯಲ್ಲೋ, ಅವರೊಡನೆ ಒಂದು ವಾರ ಕಳೆಯುವುದರೊಳಗೆ, ತಮಗೆ ಬೇಕಾದಂತಹ, ಚೂಟಿಯಾದ ಬಾಲಕರನ್ನು ಆರಿಸಿಕೊಳ್ಳುವುದು ಆಗಿಹೋಗುತ್ತದೆ. ಈ 8–10 ಬಾಲಕರಿಗೆ ಪ್ರವೇಶ್ ಮತ್ತು ಅಲ್ಲಿಂದ ಮುಂದೆ ದ್ವಿತೀಯ ಸೋಪಾನ್ ವರೆಗೆ ಸೂಕ್ತರೀತಿಯಲ್ಲಿ ಶಿಕ್ಷಣ ನೀಡಿದರೆ ಸಾಕು. ಆ ವರೆಗೆ ಇತರರನ್ನು ಕಾದಿರಿಸಿದ್ದು, ಆ ಬಳಿಕ ಸೇರಿಸಿಕೊಳ್ಳಬಹುದು.

ಮೊದಲ ಕಂತಿನಲ್ಲಿ ಆರಿಸಿಕೊಂಡ 8–10 ಬಾಲಕರಿಗೆ, ಉತ್ತಮ ರೀತಿಯಲ್ಲಿ ಶಿಕ್ಷಣ ಕೊಡಬೇಕು. ಸ್ಕೌಟ್ ಮಾಸ್ಟರರು ಅವರನ್ನು ವಾರಕ್ಕೆ 3 ಸಂಜೆಗಳಲ್ಲಾದರೂ, ಒಟ್ಟು ಸೇರಿಸಿ, ಆಟ ಪಾಟಗಳನ್ನು ನಿರ್ವಹಿಸಬೇಕು. ಪ್ರವೇಶ್ ಪರೀಕ್ಷಾಂಶಗಳು ಮತ್ತು ಇತರ ಸ್ಕೌಟ್ ಕೌಶಲಗಳಲ್ಲಿ ಶಿಕ್ಷಣ ನೀಡಬೇಕು. 2–3 ವಾರಗಳೊಳಗೆ ಇದನ್ನು ಪೂರೈಸಬಹುದು. ಈ ಮಧ್ಯೆ ದಳವನ್ನು ನೋಂದಾಯಿಸಿಕೊಂಡು (ಅಧ್ಯಾಯ-6 ನೋಡಿ) ಪದಕಗಳನ್ನು ತರಿಸಿಕೊಳ್ಳಲು ವ್ಯವಸ್ಥೆ ಮಾಡಿಕೊಳ್ಳಬೇಕು, ಪ್ರವೇಶ್‌ನ ಅಂಶಗಳು ಮುಗಿದ ಕೂಡಲೇ ಅವರಿಗೆ ಸ್ಕೌಟ್‌ಗಳಾಗಿ ದೀಕ್ಷೆ ನೀಡಬೇಕು.

ಅವರಿಗೆ ಪ್ರಥಮ ಸೋಪಾನ್ ಅಂಶಗಳ ಶಿಕ್ಷಣ ಮುಂದುವರಿಸಬೇಕು.

ಈ ವೇಳೆಗೆ ಯಾವ ಬಾಲಕರು ಒಳ್ಳೆಯ ಪೆಟ್ರೋಲ್ ಲೀಡರ್ ಆಗಬಲ್ಲರು, ಎಂಬುದು ತಿಳಿದು ಬಂದಿರುತ್ತದೆ. ಸಮರ್ಥರಾದ ಈ ಪೆಟ್ರೋಲ್ ಲೀಡರುಗಳ ನಾಯಕತ್ವದಲ್ಲಿ ಬಾಲಕರನ್ನು ಹಂಚಿ, ಪೆಟ್ರೋಲ್‌ಗಳನ್ನು ವಿಂಗಡಿಸಿಕೊಳ್ಳಿ. ಪೆಟ್ರೋಲ್ ನಲ್ಲಿ 6–8 ಬಾಲಕರು ಇರಬಹುದಾದ ಕಾರಣ, ಕಾದಿರಿಸಿದ ಪಟ್ಟಿಯಿಂದ ಬಾಲಕರನ್ನಾರಿಸಿಕೊಂಡು ಭರ್ತಿಮಾಡಿ.

ಈಗ ನಿಗದಿತ ಪೆಟ್ರೋಲ್‌ಗಳನ್ನು ಹೊಂದಿದ ದಳವು ಪೂರ್ಣವಾಗಿದೆ. ಇದೀಗ ಗೌರವಾನ್ವಿತ ನ್ಯಾಯ ಸಭೆಯನ್ನು ರಚಿಸಿ, ಅದು ದಳವನ್ನು ನಡೆಸಿಕೊಂಡು ಹೋಗಲು ಅನುವು ಮಾಡಿಕೊಡಬೇಕು. ಸ್ಕೌಟ್ ಮಾಸ್ಟರರು ಹಿನ್ನೆಲೆಯಲ್ಲಿದ್ದು ಕೊಂಡು, ಒಂದು ರೀತಿಯ 'ಅದೃಶ್ಯ ಚಾಲನಾಶಕ್ತಿ' (ರಿಮೋಟ್ ಕಂಟ್ರೋಲ್) ಆಗಿ ಕೆಲಸ ಮಾಡುತ್ತಾರೆ.

ಇಲ್ಲಿಂದೀಚೆಗೆ ದಳವು ಕ್ರಮಬದ್ಧವಾಗಿ ಕೆಲಸ ಮಾಡಲು ಪ್ರಾರಂಭಿಸುತ್ತದೆ. ಏನಿಲ್ಲವೆಂದರೂ ವಾರಕ್ಕೆರಡು ಬಾರಿಯಾದರೂ ದಳವು ಸಭೆ ಸೇರಬೇಕು. ಪ್ರತಿ ಸಭೆಯೂ ಕನಿಷ್ಟ 75 ನಿಮಿಷಗಳ ಕಾಲ ಕಾರ್ಯಕ್ರಮ ನಡೆಸಬೇಕು. ಸ್ಕೌಟ್ ಕೌಶಲಗಳನ್ನೀಗಾಗಲೇ ತಿಳಿದಿರುವ ಬಾಲಕರು, ಇತರರಿಗೆ ಹೇಳಿಕೊಡುತ್ತಾರೆ. ಎಲ್ಲರೂ "ಕೆಲಸ ಮಾಡುವ ಮೂಲಕ ಕಲಿಯುತ್ತಾರೆ". ಈ ರೀತಿ ಪೆಟ್ರೋಲ್ ಪದ್ಧತಿಯ ಮೂಲಕ ಸ್ಕೌಟುಗಳು, ಸ್ಕೌಟ್ ಕೌಶಲಗಳನ್ನು ಅಭ್ಯಾಸ ಮಾಡುತ್ತಾರೆ. ಹೊಸಬರು 'ಪ್ರವೇಶ್' ಗೆ ಕಲಿಯುತ್ತಿದ್ದರೆ, ಹಳಬರು ಪ್ರಥಮ ಸೋಪಾನ್‌ಗೆ, ಇನ್ನೂ ಮುಂದೆ ಅವಶ್ಯಕತೆಗೆ ತಕ್ಕಂತೆ, ಅಭ್ಯಾಸ ಮಾಡುತ್ತಿರುತ್ತಾರೆ.

## ದಳದ ನೊಂದಣಿ:

ದಳವು ಒಂದು ರೀತಿಯಲ್ಲಿ, ಸುವ್ಯವಸ್ಥಿತವಾಗುತ್ತಿದ್ದಂತೆಯೇ ಎ.ಪಿ.ಆರ್.ಓ. ನಿಯಮಾವಳಿ ಅಧ್ಯಾಯ-3, ನಿಯಮ 4 ಮತ್ತು 6ರ ಪ್ರಕಾರ ಸ್ಥಳೀಯ/ಜಿಲ್ಲಾ/ ರಾಜ್ಯ ಕಾರ್ಯಾಲಯದಲ್ಲಿ ನೋಂದಾಯಿಸಿಕೊಳ್ಳುವ ಮೂಲಕ ದಳದ, ದಳದ ಸದಸ್ಯರ ಸದಸ್ಯತ್ವವು ಅಧಿಕೃತವಾಗುವಂತೆ ನೋಡಿಕೊಳ್ಳಬೇಕು.



ಅಧ್ಯಾಯ–8

# ಪೆಟ್ರೋಲ್ ಮತ್ತು ದಳ

ಸ್ಕೌಟಿಂಗ್‌ನ ಮೂಲ ಘಟಕವೆಂದರೆ ಪೆಟ್ರೋಲ್/ಪಟಾಲಂ. 2 ಅಥವಾ ಹೆಚ್ಚು ಪೆಟ್ರೋಲುಗಳು ಸೇರಿದರೆ ಒಂದು ದಳ.

**ಪೆಟ್ರೋಲು:**

ಒಂದು ಸ್ಕೌಟ್ ಪೆಟ್ರೋಲ್‌ನಲ್ಲಿ 6–8 ಬಾಲಕರಿರುತ್ತಾರೆ. ಬಾಲಕರು ಹೆಚ್ಚು ಕಡಿಮೆ ಒಂದೇ ವಯಸ್ಸಿನವರಿರುತ್ತಾರೆ. ಅವರೆಲ್ಲರೂ ನೆರೆಹೊರೆಯವರಾದರೆ ಬಹಳ ಅನುಕೂಲ. ಆವರುಗಳು ಪರಸ್ಪರ ಹೊಂದಿಕೊಂಡು ಹೋಗಲು, ದಳದ ಸಭೆಗಳಿಗೆ ಒಂದಾಗಿ, ಶಿಕ್ಷಣಕ್ಕೆ ಬಂದುಹೋಗಲೂ ಸುಲಭವಾಗುತ್ತದೆ. ಯಾವುದಾದರೂ ನಿಗದಿತ ಕಾರ್ಯಕ್ರಮಕ್ಕೆ ಸೇವಾ ಕಾರ್ಯಕ್ಕೆ ಒಟ್ಟುಗೂಡಿ ಭಾಗವಹಿಸಲು ಅನುಕೂಲವಾಗುತ್ತದೆ.

ನಿಯಮ ಪ್ರಕಾರ ಒಂದು ಪೆಟ್ರೋಲ್ ನಲ್ಲಿ ಕನಿಷ್ಠ 6 ಜನರಿರಬೇಕು. ಗರಿಷ್ಠ 8 ಬಾಲಕರಿರಬಹುದು. ಕಡಿಮೆ ಇದ್ದರೆ ಯಾವುದೇ ಕೆಲಸಕ್ಕೂ ಅವರಲ್ಲಿ ಕಡಿಮೆ ಇರುವ ಭಾವನೆ ಉಂಟಾಗುತ್ತದೆ. ಅದೇ ಹೆಚ್ಚಾಗಿದ್ದರೆ ಗಡಿಬಿಡಿಉಂಟಾಗಿ ಕೆಲಸವು ಆಗುವುದಿಲ್ಲ.

ಸ್ಕೌಟ್ ಪೆಟ್ರೋಲ್‌ಗಳನ್ನು ಪಕ್ಷಿಗಳು ಅಥವಾ ಪ್ರಾಣಿಗಳ ಹೆಸರಿನಲ್ಲಿ ಕರೆಯಲಾಗುತ್ತದೆ. ಬಾಲಕರೂ ಆ ಹೆಸರನ್ನು ಇಷ್ಟಪಡುತ್ತಾರೆ ಹಾಗೂ ಆ ಬಗ್ಗೆ ಹೆಮ್ಮೆ ಪಡುತ್ತಾರೆ. ಈ ರೀತಿ ಹೆಸರಿಸುವ ಉದ್ದೇಶವಾದರೂ, ಬಾಲಕರಲ್ಲಿ ಪ್ರಕೃತಿ ಅಧ್ಯಯನದ ಬಗ್ಗೆ ಆಸಕ್ತರನ್ನಾಗಿ ಮಾಡುವುದು. ಹೆಸರುಗಳನ್ನು ಆರಿಸುವಾಗ, ಆದಷ್ಟೂ ಆಯಾ ಜಿಲ್ಲಾ ಪ್ರದೇಶದಲ್ಲಿ ವಿಶೇಷವೆನಿಸುವ ಪಕ್ಷಿ ಪ್ರಾಣಿಗಳಾದರೆ ಒಳ್ಳೆಯದು.

'ಬಾಲಕರಿಗಾಗಿ ಸ್ಕೌಟಿಂಗ್' ಪುಸ್ತಕದಲ್ಲಿ ಪಕ್ಷಿ, ಪ್ರಾಣಿಗಳ, ಸೂಕ್ತವಾದ ಹೆಸರುಗಳ ಪಟ್ಟಿಯನ್ನು ಕೊಡಲಾಗಿದೆ. ಈ ಪಟ್ಟಿಯಲ್ಲಿರುವ ಪ್ರತಿ ಪಕ್ಷಿ/ಪ್ರಾಣಿಗೂ ಒಂದೋ ಎರಡೋ ಬಣ್ಣಗಳನ್ನು ನಿಗದಿಪಡಿಸಲಾಗಿದೆ. ತಮ್ಮ ಪೆಟ್ರೋಲ್ ಹೆಸರಿಗೆ

ತಕ್ಕಂತೆ, ಆಯಾಬಣ್ಣದ ಭುಜಪಟ್ಟಿಗಳನ್ನು ಸ್ಕೌಟುಗಳು ಧರಿಸುತ್ತಾರೆ. ಈ ಬಣ್ಣದ ಭುಜಪಟ್ಟಿಗಳೆರಡೂ, 5ಸೆಂ. ಮೀ. ಉದ್ದ ಮತ್ತು 1.5ಸೆಂ. ಮೀ. ಅಗಲ ಇರುತ್ತವೆ. "ಬಾಲಕರಿಗಾಗಿ ಸ್ಕೌಟಿಂಗ್" ಪುಸ್ತಕದಲ್ಲಿ ನಿಗದಿಪಡಿಸಿರುವ ಬಣ್ಣದ ಭುಜಪಟ್ಟಿಗಳನ್ನು ಎಡತೋಳಿನ ಮೇಲೆ ಭುಜದ ಹೊಲಿಗೆಯ ಕೆಳಗೆ, ಅಡ್ಡಡ್ಡವಾಗಿ, 2ಸೆಂ. ಮೀ. ಅಂತರದಲ್ಲಿ ಹೊಲಿದುಕೊಳ್ಳಬೇಕು.

ಪೆಟ್ರೋಲ್ ಪಕ್ಷಿ/ಪ್ರಾಣಿಗಳ, ವಿಶೇಷವಾದ ಗುಣದ ಆಧಾರದ ಮೇಲೆ ಸ್ಕೌಟ್ ಪೆಟ್ರೋಲ್‌ನ ಒಂದು ಧ್ಯೇಯ ವಾಕ್ಯವಿರುತ್ತದೆ. ಪೆಟ್ರೋಲ್‌ನ ಸದಸ್ಯರು ತಮ್ಮ ಪ್ರಾಣಿ/ಪಕ್ಷಿಯ ಬಗ್ಗೆ ಅಧ್ಯಯನ ಪೂರ್ವಕವಾಗಿಯೂ, ಅವಲೋಕನ ಪೂರ್ವಕ ವಾಗಿಯೂ ಸಾಧ್ಯ ಆದಷ್ಟೂ ವಿಷಯಗಳನ್ನು ತಿಳಿದುಕೊಳ್ಳಬೇಕು.

ಬಾಲಕರಿಗಾಗಿ ಸ್ಕೌಟಿಂಗ್ ಪುಸ್ತಕದಲ್ಲಿ ಹೇಳಿರುವಂತೆ, ಪೆಟ್ರೋಲ್ ಕೂಗನ್ನು, ಪೆಟ್ರೋಲ್‌ನ ಎಲ್ಲಾ ಸದಸ್ಯರೂ ಅನುಕರಿಸಬೇಕು. ಆಟಗಳು ಮತ್ತಿತರ ವೇಳೆಗಳಲ್ಲಿ, ಪರಸ್ಪರ ಗಮನ ಸೆಳೆಯಲು, ಈ ಕೂಗನ್ನು ಉಪಯೋಗಿಸಬಹುದು. ಎಚ್ಚರಿಕೆ ವಹಿಸಿ, ಉಪಯೋಗ ಮಾಡುವುದರಿಂದ ಇತರರಿಗೆ ತಿಳಿಯದಂತೆ ತಮ್ಮ ಚಲನವಲನಗಳನ್ನು ನಿಯಂತ್ರಿಸಿಕೊಳ್ಳಬಹುದು. ಪೆಟ್ರೋಲ್ ಕೂಗಿನ ಮೂಲಕ ಗುಟ್ಟಾಗಿ ಪರಸ್ಪರ ವ್ಯವಹರಿಸಬಹುದು.

ಮಾರ್ಗಶೋಧನೆ ಮತ್ತಿತರ ಆಟಗಳ ಸಮಯದಲ್ಲಿ ಪೆಟ್ರೋಲ್‌ನವರು ಪೆಟ್ರೋಲ್ ಸಹಿಯನ್ನುಪಯೋಗಿಸಿ ತಮ್ಮನ್ನು ಗುರುತಿಸಿಕೊಳ್ಳಬಹುದು.

## ಪೆಟ್ರೋಲ್ ಲೀಡರು:

ಪೆಟ್ರೋಲ್‌ನ ಸದಸ್ಯರ ಪೈಕಿ ಒಬ್ಬರನ್ನು, ಪೆಟ್ರೋಲ್ ನಾಯಕನನ್ನಾಗಿ, ಸ್ಕೌಟ್ ಮಾಸ್ಟರು ಆರಿಸಿ ನೇಮಕಾತಿ ಮಾಡುತ್ತಾರೆ. ಈ ಆಯ್ಕೆಯನ್ನು ಎಚ್ಚರಿಕೆ ವಹಿಸಿ ಮಾಡಬೇಕು. ನೇಮಕಾತಿಗೆ ಮುನ್ನ ತನ್ನ ಆಯ್ಕೆಯು ಪೆಟ್ರೋಲ್‌ನ ಸದಸ್ಯರಿಗೆ ಒಪ್ಪಿಗೆಯಾಗುತ್ತದೆಂಬುದನ್ನು, ಅವರೊಡನೆ ಅನೌಪಚಾರಿಕವಾಗಿ (informally) ಕಲೆತು ಮಾತನಾಡಿ ತಿಳಿದುಕೊಳ್ಳಬೇಕು. ಹಾಗಲ್ಲದೆ ಪೆಟ್ರೋಲು ಸದಸ್ಯರು ತಮ್ಮ ನಾಯಕನನ್ನು ಔಪಚಾರಿಕ ರೀತಿಯಲ್ಲಿ ಚುನಾಯಿಸಿಕೊಳ್ಳುವಂತೆ ಮಾಡಿ, ಅವನನ್ನು ಅನುಮೋದಿಸಿ ನೇಮಕಮಾಡಬಹುದು.

ಪೆಟ್ರೋಲ್ ಲೀಡರನ ಆಯ್ಕೆಯಲ್ಲಿ ಕೆಲವು ನಿರ್ದಿಷ್ಟ ಅಂಶಗಳನ್ನು ಪಾಲಿಸಬೇಕು. ಅವನು i) ಸ್ಕೌಟ್ ಆಗಿ ಕೌಶಲಗಳಲ್ಲಿ ಸಮರ್ಥನಾಗಿರಬೇಕು.

ii) ಒಳ್ಳೆಯ ಸಚ್ಚಾರಿತ್ರ್ಯವುಳ್ಳವನಾಗಿರಬೇಕು. iii) ಅನುಕರಣೀಯನಾಗಿರಬೇಕು. iv) ಚೂಟಿಯಾಗಿರಬೇಕು ಮತ್ತು v) ಅವನಲ್ಲಿ ನಾಯಕತ್ವದ ಲಕ್ಷಣಗಳಿರಬೇಕು. ಸಚ್ಚಾರಿತ್ರ್ಯವಿಲ್ಲದಿದ್ದರೆ ಅಥವಾ ಸ್ಕೌಟ್ ಕೌಶಲಗಳಲ್ಲಿ ಸಮರ್ಥನಾಗಿಲ್ಲದಿದ್ದರೆ, ಪೆಟ್ರೋಲ್ ಲೀಡರಾಗಿ ತನ್ನ ಕೆಲಸಕಾರ್ಯಗಳನ್ನು ನಿರ್ವಹಿಸಲು ಅವನಿಗೆ ಕಷ್ಟವಾಗುತ್ತದೆ.

**ಪೆಟ್ರೋಲ್ ಲೀಡರನು, ಯಾವಾಗ ನೇತೃತ್ವ ವಹಿಸುತ್ತಾನೆ?**

ಉತ್ತರ ಸರಳ. ಸದಾಕಾಲ ಪೆಟ್ರೋಲ್ ಲೀಡರನು ಯಶಸ್ವಿಯಾಗಿ ನೇತೃತ್ವ ವಹಿಸಬೇಕು. ತನ್ನ ಪೆಟ್ರೋಲ್‌ನ ಎಲ್ಲಾ ಸದಸ್ಯರೂ ವೈಯಕ್ತಿಕ ನಡೆವಳಿಕೆ ಮತ್ತು ಸ್ಕೌಟ್ ಕೌಶಲಗಳಲ್ಲಿ ಪ್ರಗತಿದಾಯಕವಾಗಿ ಮುಂದುವರೆಯುವಂತೆ ನೋಡಿಕೊಳ್ಳಬೇಕು. ತನ್ನ ಪೆಟ್ರೋಲ್‌ನ ಎಲ್ಲಾ ಸದಸ್ಯರೂ ಪೆಟ್ರೋಲ್ ಮತ್ತು ದಳದ ಸಭೆಗಳಲ್ಲಿ ಚಾಚೂ ತಪ್ಪದೆ ಭಾಗವಹಿಸುವಂತೆ ಪ್ರಚೋದಿಸಬೇಕು. ಅಲ್ಲದೆ ಸ್ಕೌಟಿಂಗ್ ಸಾಮರ್ಥ್ಯಗಳಲ್ಲಿ, ಪ್ರಗತಿಶೀಲರಾಗಿ ಮುಂದುವರೆಯುವಂತೆ ಕಾಯ್ದುಕೊಳ್ಳಬೇಕು. ಪ್ರವೇಶ ಸ್ಕೌಟು ಪ್ರಥಮ ಸೋಪಾನ ಸ್ಕೌಟ್ ಆಗಬೇಕು. ಪ್ರಥಮ ಸೋಪಾನ್ ಸ್ಕೌಟ್ ದ್ವಿತೀಯ ಸೋಪಾನ್ ಸ್ಕೌಟ್ ಆಗಬೇಕು. ದ್ವಿತೀಯ ಸೋಪಾನ್ ಸ್ಕೌಟು ತೃತೀಯ ಸೋಪಾನ್ ಸ್ಕೌಟ್ ಆಗಿ ಮುಂದುವರೆಯಬೇಕು ಮತ್ತೂ ಮುಂದುವರೆದು ರಾಜ್ಯ ಪುರಸ್ಕಾರ ಪಡೆಯಬೇಕು. ಕೊನೆಯ ಹಂತದಲ್ಲಿ ರಾಷ್ಟ್ರಪತಿ ಪ್ರಶಸ್ತಿಯನ್ನು ಸ್ವೀಕರಿಸಲು ಅರ್ಹತೆ ಪಡೆಯಬೇಕು. ಇವೆಲ್ಲವನ್ನೂ ಗಮನದಲ್ಲಿಟ್ಟುಕೊಂಡು, ಪೆಟ್ರೋಲ್ ಲೀಡರನು, ತನ್ನ ಕೆಲಸವನ್ನು ಜಾಗ್ರತೆವಹಿಸಿ ರೂಪಿಸಿಕೊಳ್ಳಬೇಕು. ಸ್ಕೌಟುಗಳು ಹಂತಹಂತವಾಗಿ ಮೇಲೇರುವಂತೆ, ಬುದ್ಧಿವಂತಿಕೆಯಿಂದಲೂ, ನಿಶ್ಚಲತೆಯಿಂದಲೂ ತನ್ನ ಕೆಲಸವನ್ನು ನಿರ್ವಹಿಸಬೇಕು. ಅವನ ಇನ್ನೊಂದು ಮುಖ್ಯ ಕೆಲಸವೆಂದರೆ, ಸ್ಕೌಟ್ ನಿಯಮ ಮತ್ತು ಪ್ರತಿಜ್ಞೆ ಇವುಗಳಲ್ಲಿ ನಿಹಿತವಾಗಿರುವ ಆದರ್ಶಗಳ ಬಗ್ಗೆ ನಿಷ್ಠೆಯಿಂದ ವರ್ತಿಸಲು ಪ್ರೇರಣೆ ನೀಡುವುದು. ಬೇರಾವುದರಲ್ಲಲ್ಲದಿದ್ದರೂ, ಈ ವಿಷಯದಲ್ಲಿ ಪೆಟ್ರೋಲ್ ಲೀಡರನ ಮೇಲ್ಪಂಕ್ತಿಯು ಹೆಚ್ಚು ಪರಿಣಾಮಕಾರಿ ಯಾಗಿರುತ್ತದೆ.

**ದ್ವಿತೀಯಕ :**

ಪೆಟ್ರೋಲ್ ಲೀಡರನ ಕೆಲಸವು ಹೆಚ್ಚು ಜವಾಬ್ದಾರಿಯುತವಾದುದು. ಅದರ ನಿರ್ವಹಣೆಯಲ್ಲಿ, ಇನ್ನೊಬ್ಬ ಸದಸ್ಯನ ಸಹಾಯ, ಸಹಕಾರಗಳು ಹೆಚ್ಚು ಅವಶ್ಯಕವಾದುದು. ಪೆಟ್ರೋಲ್ ಲೀಡರನು, ತನಗೆ ವಿಶ್ವಾಸಾರ್ಹನಾದ ಯೋಗ್ಯ

ಸದಸ್ಯನೊಡನೆ ಜವಾಬ್ದಾರಿಯನ್ನು ಹಂಚಿಕೊಳ್ಳುತ್ತಾನೆ. ಅವನು ಹಾಗೆ ಎಣಿಕೆ ಮಾಡಿಕೊಂಡ ಬಾಲಕನನ್ನು ಸ್ಕೌಟ್ ಮಾಸ್ಟರರು ದ್ವಿತೀಯಕನನ್ನಾಗಿ ನೇಮಕ ಮಾಡುತ್ತಾರೆ. ಅವನು ಪೆಟ್ರೋಲ್‌ನ ಎರಡನೆಯ ನೇತಾರ, ಅವನು ಪೆಟ್ರೋಲ್ ಲೀಡರನ ಸಹಾಯಕನಾಗಿ, ಅವನ ಗೈರು ಹಾಜರಿಯಲ್ಲಿ ಪೆಟ್ರೋಲ್‌ನ ನಾಯಕತ್ವ ವಹಿಸುತ್ತಾನೆ.

**ವಿಶೇಷ ಚಿಹ್ನೆಗಳು:**

ಪೆಟ್ರೋಲ್ ಲೀಡರು ಮತ್ತು ದ್ವಿತೀಯಕರುಗಳಿಗೆ ಅವರದೇ ಆದ ವಿಶೇಷ ಚಿನ್ಹೆಗಳಿವೆ. 6. ಸೆ. ಮೀ. ಉದ್ದ ಮತ್ತು 1. ಸೆ.ಮೀ. ಅಗಲದ ಹಸಿರುಪಟ್ಟಿಗಳೇ ಈ ಚಿನ್ಹೆಗಳು.

ಪೆಟ್ರೋಲ್ ಲೀಡರನು ಎಡಜೇಬಿನ ಮೇಲೆ ಮಧ್ಯದಲ್ಲಿರುವ ಸದಸ್ಯತ್ವ ಪದಕದ ಎಡ ಮತ್ತು ಬಲಭಾಗಗಳಲ್ಲಿ ಒಂದೊಂದು ಹಸಿರು ಪಟ್ಟಿಯನ್ನು ಧರಿಸುತ್ತಾನೆ. ದ್ವಿತೀಯಕನು ಸದಸ್ಯತ್ವ ಪದಕದ ಬಲಭಾಗದಲ್ಲಿ ಒಂದು ಹಸಿರು ಪಟ್ಟಿಯನ್ನು ಮಾತ್ರ ಧರಿಸುತ್ತಾನೆ.

ಪೆಟ್ರೋಲ್ ಲೀಡರನು ಪೆಟ್ರೋಲ್ ಪತಾಕೆಯನ್ನು ಸಹ ಒಯ್ಯುತ್ತಾನೆ.

**ಸ್ಕೌಟ್ ದಳ :**

ಸ್ಕೌಟ್ ದಳದಲ್ಲಿ 2 ಅಥವಾ ಹೆಚ್ಚು ಪೆಟ್ರೋಲ್‌ಗಳು ಒಟ್ಟಾಗಿ ಕೆಲಸ ಮಾಡುತ್ತವೆ. ಪ್ರತಿ ಪೆಟ್ರೋಲೂ ಸ್ವಯಂ ಪೂರ್ಣವಾದ ಒಂದು ಘಟಕ. ಪೆಟ್ರೋಲ್ ಲೀಡರನು ಅದನ್ನು ನೋಡಿಕೊಳ್ಳುತ್ತಾನೆ. ಸ್ಕೌಟ್ ಮಾಸ್ಟರರ ಮಾರ್ಗದರ್ಶನದಲ್ಲಿ ಅವನು ತನ್ನ ಪೆಟ್ರೋಲನ್ನು ತನ್ನದೇ ರೀತಿಯಲ್ಲಿ ನಿರ್ವಹಿಸುತ್ತಾನೆ. ಆದರೆ ಶಿಬಿರಗಳು, ಆಟಗಳು, ಅಭ್ಯಾಸಗಳು, ವ್ಯಾಯಾಮಗಳು ಹೀಗೆ ದಳದ ಎಲ್ಲರೂ ಭಾಗವಹಿಸುವ ಕಾರ್ಯಕ್ರಮಗಳಲ್ಲಿ ಪೆಟ್ರೋಲ್‌ಗಳು ಒಟ್ಟು ಸೇರುತ್ತವೆ. ಈ ಎಲ್ಲ ಸಂದರ್ಭಗಳಲ್ಲಿಯೂ ಸ್ಕೌಟ್ ಮಾಸ್ಟರರು ದಳದ ನಾಯಕತ್ವ ವಹಿಸುತ್ತಾರಾದರೂ, ಪೆಟ್ರೋಲ್ ಲೀಡರನು ತನ್ನ ಪೆಟ್ರೋಲಿನ ನಾಯಕತ್ವ ಸ್ಥಾನದಲ್ಲೇ ಇರುತ್ತಾನೆ.

ಸ್ಕೌಟ್ ಪೆಟ್ರೋಲ್‌ಗಳು ಮತ್ತು ದಳದ ಸಂಬಂಧವನ್ನು ಸರಿಯಾಗಿ ಅರ್ಥಮಾಡಿಕೊಳ್ಳಬೇಕು. ಸ್ಕೌಟ್ ದಳವನ್ನು ಪೆಟ್ರೋಲ್‌ಗಳಾಗಿ ವಿಭಜಿಸಲಾಗಿದೆ ಎಂದರೆ ತಪ್ಪಾಗುತ್ತದೆ. ಏಕೆ ಗೊತ್ತೆ? ಸ್ಕೌಟಿಂಗ್‌ನಲ್ಲಿ ಪೆಟ್ರೋಲು ಒಂದು ಘಟಕ

ಅದರಲ್ಲೂ ಒಂದು ಸ್ವಯಂಪೂರ್ಣ ಘಟಕ. ಹಾಗಾಗಿ ಸ್ಕೌಟ್ ದಳದಲ್ಲಿ ಹಲವು ಪೆಟ್ರೋಲ್‌ಗಳಿರುತ್ತವೆ ಎಂಬ ಮಾತು ಸರಿ.

**ಗುಂಪು ಮನೋಭಾವನೆ (Gang Spirit):**

ಸ್ಕೌಟ್ ವಯೋಮಿತಿಯ ಬಾಲಕರಲ್ಲಿ ಸಹಜವಾಗಿ ಕಾಣಬರುವ ಹಲವಾರು ನಿರ್ದಿಷ್ಟವಾದ ವಿಶೇಷ ಗುಣಗಳನ್ನಾಧರಿಸಿ, ಸಂಸ್ಥಾಪಕರಾದ ಬೇಡನ್ ಪೊವೆಲ್‌ರವರು, ಪೆಟ್ರೋಲ್ ಪದ್ಧತಿಗೆ ರೂಪುಕೊಟ್ಟರು, ಆಟಕ್ಕಾಗಲೀ ಒಳ್ಳೆಯ ಕೆಲಸಕ್ಕಾಗಲೀ, ಗಲಾಟೆಗಾಗಲೀ ಈ ವಯಸ್ಸಿನ ಬಾಲಕರು ಸಣ್ಣ ಸಣ್ಣ ಗುಂಪುಗಳನ್ನು ಮಾಡಿಕೊಳ್ಳುತ್ತಾರೆ. ಹಾಗೆ ಜೊತೆಗೂಡಿದಾಗ ಅವರಲ್ಲೊಬ್ಬ ಸಹಜವಾದ ನಾಯಕನಿರುತ್ತಾನೆ. ಆ ಗುಂಪಿನವರೆಲ್ಲರೂ ನಿಷ್ಠೆಯಿಂದ ಅವನನ್ನು ಅನುಸರಿಸುತ್ತಾರೆ. ಅಲ್ಲದೇ ಸದಸ್ಯರೂ ಪರಸ್ಪರ ನಿಷ್ಠರಾಗಿದ್ದುಕೊಂಡು, ಕಷ್ಟಸುಖಗಳಲ್ಲಿ ಭಾಗಿಗಳಾಗುತ್ತಾರೆ. ಈ ರೀತಿಯ ಗುಂಪುನಿಷ್ಠೆಯನ್ನು ಬಿ.ಪಿ.ರವರು "ಗ್ಯಾಂಗ್ ಸ್ಪಿರಿಟ್" (Gang Spirit) "ಗುಂಪು ಮನೋಭಾವನೆ" ಎಂದು ಕರೆದರು. ಇದನ್ನು ಆಧರಿಸಿಕೊಂಡು, ಸ್ಕೌಟ್ ಪೆಟ್ರೋಲ್‌ಗಳನ್ನೂ, ಪೆಟ್ರೋಲ್ ಪದ್ಧತಿಯನ್ನೂ ರೂಪಿಸಿದರು.

**ನಾಯಕತ್ವ ತರಬೇತಿ :**

"ಕೆಲಸ ಮಾಡುವ ಮೂಲಕ ಕಲಿಕೆ"ಯ ವಿಧಾನವನ್ನನುಸರಿಸಿ, ಪೆಟ್ರೋಲ್ ಲೀಡರೂ, ದ್ವಿತೀಯಕನೂ, ನಾಯಕತ್ವದ ಬಗ್ಗೆ ಅರಿವು ಮೂಡಿಸಿಕೊಳ್ಳುತ್ತಾರೆ. ಪೆಟ್ರೋಲ್‌ನ ಜವಾಬ್ದಾರಿ ವಹಿಸಿಕೊಂಡ ಕಾರಣ ಜವಾಬ್ದಾರಿಯುತವಾಗಿ ಕೆಲಸ ನಿರ್ವಹಿಸಲು ಕಲಿಯುತ್ತಾರೆ. ಈ ರೀತಿಯಲ್ಲಿ ಜವಾಬ್ದಾರಿಯುತ ನಾಯಕರಾಗುತ್ತಾರೆ. ಇತರರು ತಮ್ಮನ್ನು ಅನುಕರಣೆ ಮಾಡುವ ರೀತಿಯಲ್ಲಿ ನಡೆದುಕೊಳ್ಳುತ್ತಾರೆ. ಸ್ಕೌಟ್ ನಿಯಮ ಮತ್ತು ಪ್ರತಿಜ್ಞೆಗಳ ಬಗ್ಗೆ ಸದ್ಭಾವನೆಯಿಂದ ಕೂಡಿದವರಾಗಿರುತ್ತಾರೆ. ಸ್ಕೌಟ್ ಆದರ್ಶಗಳ ಬಗ್ಗೆ ನಿಷ್ಠೆಯುಳ್ಳವರಾಗಿರುತ್ತಾರೆ.

ದಳ ಮತ್ತು ಪೆಟ್ರೋಲ್ ಸಭೆಗಳ ಸಮಯದಲ್ಲಿ ಪೆಟ್ರೋಲ್ ಲೀಡರನು ತನ್ನ ಸ್ಕೌಟುಗಳ ಜೊತೆ ಸೇರಿದಾಗ ಮಾತ್ರ ಜವಾಬ್ದಾರಿಯನ್ನು ನಿರ್ವಹಿಸುತ್ತಾನೆಂದರೆ ತಪ್ಪಾದೀತು. ಆ ಜವಾಬ್ದಾರಿಯು ಇತರ ಸಮಯಗಳಲ್ಲಿಯೂ, ಕ್ಷೇತ್ರಗಳಲ್ಲಿಯೂ ವಿಸ್ತರಿಸುತ್ತದೆ. ಅವನು ಎಲ್ಲಾ ವಿಷಯಗಳಲ್ಲಿಯೂ, ಸದಾಕಾಲ ಅವರ ನಾಯಕನಾಗಿ ಉಳಿಯುತ್ತಾನೆ.

**ಪೆಟ್ರೋಲ್ ಪರಿಷತ್ತು : (Patrol-in Council)**

ಪೆಟ್ರೋಲ್ ಲೀಡರ್ ಮತ್ತು ಅವನ ಪೆಟ್ರೋಲ್ ಸದಸ್ಯರು ಒಂದು ಗುಂಪು. ಅವರು ಎಲ್ಲಾ ರೀತಿಗಳಲ್ಲಿಯೂ ಒಂದುಗೂಡಿ ಕೆಲಸ ಮಾಡುತ್ತಾರೆ. ತನ್ನ ಪೆಟ್ರೋಲ್‌ನ ಆಸೆ, ಆಕಾಂಕ್ಷೆಗಳ ಬಗ್ಗೆ, ಪೆಟ್ರೋಲ್ ಲೀಡರು ತಿಳಿದಿರಬೇಕಾಗುತ್ತದೆ. ಈ ರೀತಿ ಚರ್ಚೆ ಮಾಡಲು ಸೇರುವುದೇ ಪೆಟ್ರೋಲ್ ಪರಿಷತ್ತು (ಪೆಟ್ರೋಲ್ ಇನ್ ಕೌನ್ಸಿಲ್) ಪೆಟ್ರೋಲ್ ಲೀಡರನು ಸಭೆಯ ಅಧ್ಯಕ್ಷತೆ ವಹಿಸುತ್ತಾನೆ. ಎಲ್ಲ ಸದಸ್ಯರೂ ನಿರ್ಭೀತಿಯಿಂದ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಾರೆ. ಚರ್ಚಾಸಮಯದಲ್ಲಿ ಎಷ್ಟೇ ಭಿನ್ನಾಭಿಪ್ರಾಯಗಳಿದ್ದರೂ, ಇತರರ ಅಭಿಪ್ರಾಯಗಳನ್ನು ಗೌರವಿಸಿ ಒಮ್ಮತಕ್ಕೆ ಬರುತ್ತಾರೆ. ಈ ಒಮ್ಮತವನ್ನು ಪೆಟ್ರೋಲ್ ಲೀಡರನು, ಸ್ಕೌಟ್ ಮಾಸ್ಟರಿಗೆ, ಅವಶ್ಯಕತೆಯೆನಿಸಿದರೆ ಗೌರವಾನ್ವಿತ ನ್ಯಾಯ ಸಭೆಯಲ್ಲಿ ಭಿನ್ನವಿಸಿಕೊಳ್ಳುತ್ತಾನೆ.

ಪೆಟ್ರೋಲ್ ಸಭೆಯು ವಾರಕ್ಕೊಮ್ಮೆ ಸೇರುತ್ತದೆ. ಮುಖ್ಯ ವಿಷಯಗಳ ಬಗ್ಗೆ ಚರ್ಚೆ ಮಾಡುವುದಿದ್ದರೆ, ಈ ಮಧ್ಯೆಕೂಡ ಸಭೆ ಸೇರುತ್ತದೆ.

**ಶಾಲಾ ದಳ :**

ಬೇರೆ ಎಲ್ಲಾ ದಳಗಳಂತೆಯೇ ಶಾಲಾ ದಳವೂ ಕೂಡ, ಶಾಲಾ ದಳಗಳಿಗೂ, ಇತರೆಯ ಎಂದರೆ ಯಾವುದೇ ಒಂದು ಸ್ಥಳೀಯ ಅಥವಾ ಸಂಘ ಸಂಸ್ಥೆಯ ಪರವಾಗಿ ಪ್ರಾರಂಭಿಸಿ ನಡೆಸುವ ದಳಗಳಿಗೂ, ವ್ಯತ್ಯಾಸವೇನೂ ಇರುವುದಿಲ್ಲ. ಎಲ್ಲವೂ ಸ್ಕೌಟ್ ದಳಗಳೇ. ಒಂದೇ ಗುರಿ ಮತ್ತು ಉದ್ದೇಶದಿಂದ (aims and objects) ಕೆಲಸ ಮಾಡುತ್ತವೆ. ಏಕ ರೀತಿಯ ವಿಧಾನಗಳನ್ನು ಅನುಸರಿಸುತ್ತವೆ. ಒಂದೇ ಎನ್ನಬಹುದಾದ ಚಟುವಟಿಕೆಗಳನ್ನೂ ನಡೆಸುತ್ತವೆ.

ಶಾಲಾದಳವು ಆ ಶಾಲೆಯ ಮುಖ್ಯೋಪಾಧ್ಯಾಯ/ಪ್ರಿನ್ಸಿಪಾಲ್‌ರ ಅಧೀನದಲ್ಲಿ ರಚಿಸಲ್ಪಟ್ಟು, ಸ್ಥಳೀಯ ಸಂಸ್ಥೆ ಮತ್ತು ಜಿಲ್ಲಾ ಸಂಸ್ಥೆ ಮೂಲಕ ಭಾರತ್ ಸ್ಕೌಟ್ಸ್ ಗೈಡ್ಸ್‌ನ ರಾಜ್ಯ ಕಾರ್ಯಾಲಯದಲ್ಲಿ ನೋಂದಣಿ ಪಡೆಯುತ್ತದೆ. ಮುಖ್ಯೋಪಾಧ್ಯಾಯರು ನೇಮಿಸಿದ ಶಿಕ್ಷಕ/ಶಿಕ್ಷಕರುಗಳು ದಳವನ್ನು ನಡೆಸುತ್ತಾರೆ. ಆ ಶಿಕ್ಷಕರನ್ನು ರಾಜ್ಯ ಸಂಸ್ಥೆಯು ಗುರುತಿಸಿ, ಸನ್ನದು (ಅಧಿಕಾರ ಪತ್ರ) ನೀಡುತ್ತದೆ. ಜಿಲ್ಲಾ ಆಯುಕ್ತರ ಮತ್ತು ಜಿಲ್ಲಾ ಮುಖ್ಯ ಆಯುಕ್ತರ ಶಿಫಾರಸ್ಸಿನ ಮೇರೆಗೆ ರಾಜ್ಯ ಸಂಸ್ಥೆಯು ಸನ್ನದು ನೀಡುತ್ತದೆ. ನೋಂದಾವಣಿ ಹೊಂದಿದ ದಳಕ್ಕೆ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಅಂಗ ಘಟಕವಾಗಿ ಅಸ್ತಿತ್ವವೂ, ಮನ್ನಣೆಯೂ ದೊರಕುತ್ತದೆ. ಇದರಿಂದ ಆ ದಳಕ್ಕೆ, ಹಲವು ಸೌಲಭ್ಯಗಳು ದೊರೆಯತ್ತದೆ. ಉದಾ: ರೈಲ್ವೆ

ರಿಯಾಯಿತಿಯನ್ನು ಉಪಯೋಗಿಸಿಕೊಳ್ಳಬಹುದು. ಶಿಬಿರಗಳು, ಪರ್ಯಟನೆ ಗಳಿಗೆ ಶಾಲಾ ಸ್ಕೌಟ್ ಹಣವನ್ನು ಉಪಯೋಗಿಸಬಹುದು. ನೋಂದಣಿ ಪಡೆದ ದಳಗಳು ಮಾತ್ರ ರ್‍ಯಾಲಿಗಳು, ಜಾಂಬೋರಿಗಳು ಮುಂತಾದ ಸಮಾವೇಶಗಳಲ್ಲಿ ಭಾಗವಹಿಸಬಹುದು.

ನೋಂದಾಯಿತ ದಳಗಳ ಸದಸ್ಯರು ಮಾತ್ರ ಸ್ಕೌಟ್ ಸಮವಸ್ತ್ರವನ್ನು ಧರಿಸಲು ಅರ್ಹರು. ವಿವಿಧ ಪದಕಗಳಿಗಾಗಿ ಪ್ರಯತ್ನಪಟ್ಟು ಸಂಪಾದಿಸಿ, ಸಮವಸ್ತ್ರದ ಮೇಲೆ ಧರಿಸಬಹುದು.

ನೋಂದಾಯಿತ ದಳಗಳ ಸ್ಕೌಟರುಗಳೂ ಸಹ, ಸ್ಕೌಟ್ ಸಮವಸ್ತ್ರವನ್ನೂ, ಪದಕಗಳನ್ನೂ, ವಿಶೇಷ ಚಿನ್ಹೆಗಳನ್ನೂ ಧರಿಸಬಹುದು. ವಿವಿಧ ಸಭೆಗಳು, ಸಮಿತಿಗಳಿಗೆ ಚುನಾಯಿತರಾಗಬಹುದು.

ಶಾಲಾದಳಗಳು "ಅಧೀನದಳ"ಗಳ ಲೆಕ್ಕದಲ್ಲಿ ಬರುತ್ತವೆ. ಅಧೀನದಳಗಳು ಅಥವಾ ಪ್ರಾಯೋಜಿತ ದಳಗಳು ಎಂದರೆ ಶಾಲೆಗಳು ಅಥವಾ ಸಂಘ ಸಂಸ್ಥೆಗಳಿಂದ ನಡೆಸಲ್ಪಡುವಂತಹುವುಗಳು.

ಯಾವುದಾದರೊಂದು ವಸತಿ ಪ್ರದೇಶದ ಜನರಿಂದ ಅಥವಾ ಅದರ ನೆರೆಹೊರೆಯವರಿಂದ ನಡೆಸಲ್ಪಡುವಂತಹ ದಳಗಳೇ "ಮುಕ್ತ" ಅಥವಾ "ಸ್ವತಂತ್ರ" ದಳಗಳು.



## ಅಧ್ಯಾಯ-9

# ಪೆಟ್ರೋಲ್ ಪದ್ಧತಿ

ಸ್ಕೌಟ್ ದಳದಲ್ಲಿ ಪೆಟ್ರೋಲ್ ಪದ್ಧತಿ ಅಥವಾ ಪೆಟ್ರೋಲ್ ಕ್ರಮವು ಸ್ಕೌಟಿಂಗ್‌ನ ಒಂದು ವೈಶಿಷ್ಟತೆ ಆಗಿದೆ. ಸ್ಕೌಟ್ ಸಂಸ್ಥೆಯನ್ನು ಇತರ ಸಂಸ್ಥೆಗಳೊಡನೆ ಪ್ರತ್ಯೇಕಿಸಿ ಹೇಳುವ ಪದ್ಧತಿ ಇದು. ಪೆಟ್ರೋಲ್ ಕ್ರಮದ ಆಚರಣೆಯಲ್ಲಿ, ಪೆಟ್ರೋಲ್‌ನ ಎಲ್ಲಾ ಆಚರಣೆಗಳನ್ನೂ ಪೆಟ್ರೋಲ್ ಲೀಡರನಿಗೆ ವಹಿಸಿ, ಅದರ ಕಾರ್ಯಕ್ರಮಗಳ ಬಗ್ಗೆ ಸಹ ಅವನೇ ಉಪಕ್ರಮಿಸುವಂತೆ (take initiative) ಮಾಡುವುದಾಗಿದೆ. ದಳದ ಪೆಟ್ರೋಲ್ ಲೀಡರುಗಳು, ಪ್ರಗತಿ ಹಾಗೂ ದಕ್ಷತೆಯ ಎಲ್ಲಾ ಜವಾಬ್ದಾರಿಯೂ ತಮ್ಮ ಮೇಲಿದೆ ಎಂದು ಅರ್ಥಮಾಡಿಕೊಂಡಾಗ, ತಮ್ಮ ಮೇಲಿನ ಗುರುತರ ಜವಾಬ್ದಾರಿಗೆ ಸ್ಪಂದಿಸಿ, ತಮ್ಮ ತಮ್ಮ ಪೆಟ್ರೋಲ್‌ಗಳು ಶಿಸ್ತಿನಿಂದಲೂ, ಸಮರ್ಥ ರೀತಿಯಲ್ಲಿಯೂ ನಡೆದುಕೊಳ್ಳಲು, ತಮ್ಮ ಕೈಲಾಗುವ ಸಕಲಪ್ರಯತ್ನವನ್ನೂ ಮಾಡುತ್ತಾರೆ.

ಪೆಟ್ರೋಲ್ ಲೀಡರುಗಳು ಶಿಕ್ಷಣ ಪಡೆದ ನಾಯಕರಲ್ಲ. ಆದರೆ ಶಿಕ್ಷಣ ಪಡೆಯುತ್ತಿರುವ ಬಾಲ ನಾಯಕರುಗಳು. ಪೆಟ್ರೋಲ್ ಪದ್ಧತಿಯ ಆಚರಣೆಯಿಂದ, ಬಾಲಕರಿಗೆ ನಾಯಕತ್ವವಹಿಸುವ, ಜವಾಬ್ದಾರಿಗಳನ್ನು ಒಪ್ಪಿಕೊಳ್ಳುವ ಹಾಗೂ ಕಾರ್ಯಗತ ಮಾಡುವ ಬಗ್ಗೆ ಅವಕಾಶಗಳು ದೊರೆತು ಅವುಗಳನ್ನು ಕಲಿಯುತ್ತಾರೆ. ಜವಾಬ್ದಾರಿಯನ್ನು ಹೊರುವ ಬಗೆಗಿನ ಶಿಕ್ಷಣವು, ಸ್ಕೌಟಿಂಗ್‌ನಿಂದ ಬಾಲಕರಿಗೆ ದೊರೆಯುವ ಅಮೂಲ್ಯ ಕೊಡುಗೆಯಾಗಿದೆ.

ಪೆಟ್ರೋಲ್ ಲೀಡರನು, ಸದಾಕಾಲ ಎಲ್ಲರಿಗಿಂತಲೂ ಮುಂದಿರುವಂತೆ. ಸ್ಕೌಟ್ ಮಾಸ್ಟರರು ನೋಡಿಕೊಳ್ಳಬೇಕು. ಅವರಿಗೆ ವಿಶೇಷ ರೀತಿಯಲ್ಲಿ ಶಿಕ್ಷಣ ನೀಡಬೇಕು. ತಾನು (ಸ್ಕೌಟ್ ಮಾಸ್ಟರು) ಆ ಪೆಟ್ರೋಲ್ ಲೀಡರುಗಳಿಗೆ ಪೆಟ್ರೋಲ್ ಲೀಡರ್ ಎಂದು ಭಾವಿಸಿಕೊಂಡು, ಸ್ಕೌಟ್ ಕಲೆಗಳಲ್ಲಿ ಅವರಿಗೆ ಶಿಕ್ಷಣ ನೀಡಬೇಕು. ವಿಶೇಷ ಸಭೆಗಳು ವಿಶೇಷ ಶಿಕ್ಷಣ ಶಿಬಿರಗಳು  ಮತ್ತು ಗೌರವಾನ್ವಿತ ನ್ಯಾಯ ಸಭೆಗಳ ಬಳಿಕ ಒಟ್ಟು ಸೇರಿಸಿ ಶಿಕ್ಷಣ ನೀಡಬೇಕು. ದಳಗಳ ಸಭೆಗಳಲ್ಲಿ ಸ್ವಲ್ಪ ಕಾಲಾವಕಾಶ ಮಾಡಿಕೊಂಡು ದ್ವಿತೀಯಕರಿಗೆ ಪೆಟ್ರೋಲ್‌ನ ಜವಾಬ್ದಾರಿ ವಹಿಸಿ, ಪೆಟ್ರೋಲ್ ಲೀಡರ್‌ಗಳಿಗೆ ವಿಶೇಷ ತಿಳುವಳಿಕೆ ಅಥವಾ ಶಿಕ್ಷಣ ಕೊಡಬಹುದು.

ಈ ಮೇಲಿನಂತೆ ವಿಶೇಷ ರೀತಿಯ ಶೈಕ್ಷಣಿಕ ಸಹಾಯದ ಜೊತೆಗೆ, ಅವರಿಗೆ ಇತರ ರೀತಿಯ ಸಹಾಯಗಳೂ ಬೇಕು. ವಿವರವಾಗಿಯಲ್ಲದಿದ್ದರೂ, ಮುಂಬರಲಿರುವ ಸಭೆಗಳು, ಸಮಾರಂಭಗಳು ಅಥವಾ ಚಟುವಟಿಕೆಗಳ ಬಗ್ಗೆ ಮುಂದಾಗಿ ಸೂಚನೆ ಕೊಡಬಹುದು. ಪೆಟ್ರೋಲ್ ಸಭೆಗಳನ್ನೂ, ಚಟುವಟಿಕೆಗಳನ್ನೂ ನಡೆಸಲು ಸೂಕ್ತವಾದ ಸಲಹೆ ಸಹಕಾರಗಳನ್ನು ಕೊಡಬೇಕು. ಪೆಟ್ರೋಲ್ ಶಿಬಿರಗಳು, ಪೆಟ್ರೋಲ್ ಚಾರಣಗಳು, ಪೆಟ್ರೋಲ್ ಸಭೆಗಳು ಇತ್ಯಾದಿಗಳನ್ನು ನಡೆಸಲು ಅವಕಾಶಗಳೂ, ಸಹಾಯ, ಸಹಕಾರಗಳೂ, ಪ್ರೋತ್ಸಾಹವೂ ಬೇಕು.

ಪೆಟ್ರೋಲ್ ಪದ್ಧತಿಯು ಸ್ಕೌಟ್ ಶಿಕ್ಷಣದ ಹಲವಾರು ವಿಧಾನಗಳಲ್ಲೊಂದಾಗದೆ, ಅದು ಏಕೈಕ ವಿಶಿಷ್ಟ ವಿಧಾನವಾಗಿದೆ. ಪೆಟ್ರೋಲ್ ಪದ್ಧತಿಯು ಸ್ಕೌಟ್ ಮಾಸ್ಟರರ ಇಚ್ಛೆ, ಅನಿಚ್ಛೆಗಳಿಗೆ ಹೊರತಾಗಿದ್ದು, ಅನುಸರಿಸಲೇಬೇಕದ ವಿಧಾನವಾಗಿದೆ. ಸ್ಕೌಟ್ ಮಾಸ್ಟರರು ಈ ವಿಧಾನವನ್ನು ಜಾರೀ ಮಾಡಲೇ ಬೇಕಾಗಿರುವುದರಿಂದ, ಇದು ಅಸ್ತಿತ್ವದಲ್ಲಿರುತ್ತದೆ. ಇದು ತಾನಾಗಿ ನಡೆಯುವುದಿಲ್ಲ. ಮಕ್ಕಳ "ಗುಂಪು ಮನೋಭಾವನೆ"ಗೆ (Gang Spirit)ಗೆ ಅನುಗುಣವಾಗಿ ನಡೆಯಬೇಕಾಗಿರುವುದರಿಂದ ಇದನ್ನು ಜಾರಿಯಲ್ಲಿಡುವುದು, ಸುಲಭ ಸಾಧ್ಯವಲ್ಲ. ಸ್ಕೌಟ್ ಮಾಸ್ಟರರು ಹಠತೊಟ್ಟು, ಇದನ್ನು ಯಶಸ್ವಿಗೊಳಿಸುವುದು ಅತ್ಯಗತ್ಯ.

ಪೆಟ್ರೋಲ್ ಪದ್ಧತಿಯು ಯಶಸ್ವಿಯಾಗಬೇಕಾದರೆ, ಸ್ಕೌಟ್ ಮಾಸ್ಟರಿಗೆ

(1) ಬಾಲಕನಲ್ಲಿಯೂ, ಅವನ ನಿಹಿತ ಶಕ್ತಿಯಲ್ಲಿಯೂ ವಿಶ್ವಾಸವಿರಬೇಕು.
(2) ಸ್ಕೌಟ್ ವಿಧಾನ ಮತ್ತು ಸ್ಕೌಟ್ ಕಲೆಗಳಲ್ಲಿನ ವ್ಯತ್ಯಾಸವು ತಿಳಿದಿರಬೇಕು.
(3) ಗೌರವಾನ್ವಿತ ನ್ಯಾಯಸಭೆಯ ನಡವಳಿಕೆಗಳನ್ನು, ಕ್ರಮಬದ್ಧವಾಗಿ ಆಗಾಗ ನಡೆಸುತ್ತಿರಬೇಕು.
(4) ವಿಷಯವು ಸಣ್ಣದಾಗಲೀ, ದೊಡ್ಡದಾಗಲೀ, ಪೆಟ್ರೋಲ್ ಲೀಡರುಗಳ ಬಗ್ಗೆ, ಸ್ಕೌಟ್ ಮಾಸ್ಟರರಿಗೆ, ಅಚಲವಾದ ನಿಷ್ಠೆಯಿರಬೇಕು.

ಬಾಲಕರ ಸಚ್ಚಾರಿತ್ರ್ಯ, ನೇತೃತ್ವಶಕ್ತಿ ಮತ್ತು ಜವಾಬ್ದಾರಿಯುತ ಭಾವನೆಗಳ ಬಗ್ಗೆ, ಶಿಕ್ಷಣ ನೀಡಲು ಪೆಟ್ರೋಲ್ ಪದ್ಧತಿಯು ಅತ್ಯುತ್ತಮವಾದುದು. ಸ್ಕೌಟ್‌ದಳವನ್ನು ನಡೆಸಲು ಅದೊಂದೇ ಮಾರ್ಗ. ಪೆಟ್ರೋಲ್ ಪದ್ಧತಿಯ ಆಚರಣೆಯು ಲೋಪವಾದಲ್ಲಿ, ಸ್ಕೌಟ್ ದಳದ ಅವನತಿಯು ಖಂಡಿತ.

ದಳದಲ್ಲಿ ನೀಡಲಾಗುವ ಶಿಕ್ಷಣ ಪಥವು ಹೇಗಿರಬೇಕೆಂದರೆ, ಪೆಟ್ರೋಲ್ ಲೀಡರುಗಳಿಗೆ, ಸ್ಕೌಟ್ ಮಾಸ್ಟರು ಶಿಕ್ಷಣ ನೀಡುತ್ತಾರೆ. ಪೆಟ್ರೋಲ್ ಲೀಡರುಗಳು, ಅವರ ಸ್ಕೌಟ್‌ಗಳಿಗೆ ಹೇಳಿಕೊಡುತ್ತಾರೆ.

ದಳದ ಸಭೆಗಳ ಸಮಯದಲ್ಲಿ ಹೊಸ ಕೌಶಲಗಳನ್ನು ಕಲಿಯಲು, ಸ್ಕೌಟ್ ಮಾಸ್ಟರರು. ಅವಕಾಶಗಳನ್ನೊದಗಿಸುತ್ತಾರೆ. ಶ್ರಮಕ್ಕೆ ತಕ್ಕ ಫಲವಿರಬೇಕು. ಪದಕ ಪರೀಕ್ಷೆಗಳನ್ನು ನಡೆಸುತ್ತಿರಬೇಕು. ಉತ್ತೀರ್ಣರಾಗುತ್ತಿದ್ದಂತೆಯೇ ಅಂತಹವರುಗಳಿಗೆ ಪದಕ ಪ್ರದಾನಮಾಡಬೇಕು. ಆಟಗಳು, ಸ್ಪರ್ಧೆಗಳು, ಪೆಟ್ರೋಲ್ ಕಾರ್ಯಕ್ರಮಗಳು, ದಳದ ಅಥವಾ ಪೆಟ್ರೋಲ್ ಸಭೆಗಳು ಹೀಗೆ, ಸ್ಕೌಟ್ ಕೌಶಲಗಳನ್ನು ಪುನರಾವರ್ತಿಸಲು ಅವಕಾಶಗಳನ್ನು ಕಲ್ಪಿಸುತ್ತಲೇ ಇರಬೇಕು.

ಎಲ್ಲಾ ವಿಷಯಗಳನ್ನೂ ಈ ರೀತಿಯಲ್ಲಿ ಕಲಿಸಲಾಗುವುದಿಲ್ಲ ಅಥವಾ ಪೆಟ್ರೋಲ್ ಲೀಡರುಗಳನ್ನು ಎಲ್ಲಾ ಯೋಜನೆಗಳಿಗೂ ಉಪಯೋಗಿಸಿಕೊಳ್ಳಲೂ ಆಗುವುದಿಲ್ಲ. ಮುಂದುವರೆದ ಪ್ರಥಮ ಚಿಕಿತ್ಸೆ, ದಿಕ್ಸೂಚಿಯ ಬಳಕೆ ಮುಂತಾದ ವಿಷಯಗಳನ್ನು ಸ್ಕೌಟ್ ಮಾಸ್ಟರರೇ ಮಾಡಬೇಕಾಗುತ್ತದೆ. ಒಂದು ಅಂಶವನ್ನು ನೆನಪಿನಲ್ಲಿಡಬೇಕು. ಪೆಟ್ರೋಲ್ ಲೀಡರನನ್ನು ಬೋಧಕನನ್ನಾಗಿ ಉಪಯೋಗಿಸಿ ಕೊಳ್ಳದಿದ್ದರೆ, ನೇತೃತ್ವ ಶಕ್ತಿಯ ಗಳಿಕೆಯ ಒಂದು ಅಮೂಲ್ಯ ಅವಕಾಶವು ಅವನಿಗಿಲ್ಲದಂತಾಗುತ್ತದೆ.

ಪೆಟ್ರೋಲ್ ಲೀಡರನು ಸದಾಕಾಲ, ತನ್ನ ಪೆಟ್ರೋಲ್‌ನ ಸದಸ್ಯರೊಡನೆ ಸಂಪರ್ಕವನ್ನಿಟ್ಟುಕೊಂಡಿರಬೇಕು. ಗೌರವಾನ್ವಿತ ನ್ಯಾಯ ಸಭೆಗಳಲ್ಲಿ, ತನ್ನ ಪೆಟ್ರೋಲ್‌ನ ಅಭಿಪ್ರಾಯಗಳನ್ನು (ತನ್ನ ಸ್ವಂತದ್ದಲ್ಲ) ಅವನು ಮಂಡಿಸಬೇಕಾಗುತ್ತದೆ. ಅವನು ತನ್ನ ಪೆಟ್ರೋಲ್‌ನ ಎಲ್ಲಾ ಸದಸ್ಯರನ್ನೂ ಕಲೆಹಾಕಿ, ಸಭೆ ನಡೆಸಿದ್ದರೆ ಇದು ಸಾಧ್ಯವಾಗುತ್ತದೆ. ಹಾಗೆ ಸಭೆ ನಡೆಸಿದಾಗ, ಎಲ್ಲಾ ಸದಸ್ಯರ ಅಭಿಪ್ರಾಯಗಳನ್ನು ತಿಳಿಯಲೂ, ಮುಕ್ತವಾಗಿ ಚರ್ಚೆಮಾಡಲೂ ಬರುತ್ತದೆ. ಆ ರೀತಿ ಸಭೆಗಳನ್ನು ನಡೆಸಲೂ ಆ ರೀತಿ ನಡೆಸಿದ ಸಭೆಗಳಲ್ಲಿ ಸಂಗ್ರಹಿಸಿದ ವರದಿಯನ್ನು ಒಪ್ಪಿಸಲೂ, ಸ್ಕೌಟ್ ಮಾಸ್ಟರರು, ಪೆಟ್ರೋಲ್ ಲೀಡರುಗಳಿಗೆ ಅವಕಾಶಗಳನ್ನು ಕಲ್ಪಿಸುತ್ತಿರಬೇಕು. ಪೆಟ್ರೋಲ್ ಸಭೆಗಳು ಔಪಚಾರಿಕವಾಗಿಯೇ ಇರಬೇಕೆಂದೇನೂ ಇಲ್ಲ. ಅನೌಪಚಾರಿಕವಾಗಿಯೂ ಇರಬಹುದು. ಉದಾ: ಶಿಬಿರಗಳಲ್ಲಿ ಊಟದ ಸಮಯದಲ್ಲಿ ಚರ್ಚಿಸುವುದು.

ಪೆಟ್ರೋಲ್ ಪದ್ಧತಿಯು ಕಾಲಾನು ಕ್ರಮದಲ್ಲಿ ಉತ್ತಮ ಫಲವನ್ನು ಕೊಡುತ್ತದೆ. ಪೆಟ್ರೋಲ್ ಪದ್ಧತಿಯು ಸ್ಕೌಟಿಂಗ್‌ನ ಅವಿಭಾಜ್ಯ ವಿಧಾನವಾಗಿದೆ. ಇದು ಸ್ಕೌಟಿಂಗ್‌ನ ಯಶಸ್ಸಿಗೆ ಮೂಲ ಕಾರಣವೂ ಆಗಿದೆ.



## ಅಧ್ಯಾಯ–10

# ಗೌರವಾನ್ವಿತ ನ್ಯಾಯಸಭೆ

ಸ್ಕೌಟ್ ದಳವನ್ನು ಸ್ವಯಂಪಾಲನಾ ಸಂಸ್ಥೆಯಾಗಿ ಸಂಘಟಿಸಿ ನಡೆಸಲಾಗುತ್ತದೆ. ಸ್ಕೌಟ್ ಮಾಸ್ಟರು ಮತ್ತು ಪೆಟ್ರೋಲ್ ಲೀಡರುಗಳನ್ನೊಳಗೊಂಡ "ಗೌರವಾನ್ವಿತ ನ್ಯಾಯ ಸಭೆ"ಗೆ (Court of Honour) ಅದರ ನಿರ್ವಹಣೆಯನ್ನು ಒಪ್ಪಿಸಲಾಗಿದೆ. ಗೌರವಾನ್ವಿತ ನ್ಯಾಯ ಸಭೆಯು ದಳದ ದಿನ ನಿತ್ಯದ ವಿಚಾರಗಳ ಬಗ್ಗೆ ಗಮನ ನೀಡುತ್ತದೆ. ಅದು

i) ದಳದ ಗೌರವವನ್ನು ಕಾಪಾಡಿಕೊಳ್ಳುತ್ತದೆ.

ii) ದಳದ ಗುಣಮಟ್ಟವನ್ನು ಕಾಯ್ದುಕೊಳ್ಳುತ್ತದೆ.

iii) ದಳದ ಕಾರ್ಯಕ್ರಮಗಳು ಇತ್ಯಾದಿ ವಿಷಯಗಳಲ್ಲಿ, ಅವುಗಳ ಸಂಘಟನೆ, ನಡೆವಳಿಕೆ ಮುಂತಾದ ವಿವರಗಳ ಬಗ್ಗೆ ಸ್ಕೌಟ್ ಮಾಸ್ಟರರಿಗೆ ಸಲಹೆ, ಸಹಾಯಗಳನ್ನು ನೀಡುತ್ತದೆ.

iv) ದಳದ ಆಂತರಿಕ ವ್ಯವಹಾರಗಳು ಎಂದರೆ ಶಿಸ್ತು, ವಂತಿಗೆ ವಸೂಲಿ, ಖರ್ಚು ಮುಂತಾದ ವಿಷಯಗಳನ್ನು ನಿರ್ವಹಿಸುತ್ತದೆ.

**ಸಭೆಗಳು:**

ಗೌರವಾನ್ವಿತ ನ್ಯಾಯ ಸಭೆಯು ಸಾಮಾನ್ಯವಾಗಿ ತಿಂಗಳಿಗೊಮ್ಮೆ ಸಭೆ ಸೇರುತ್ತದೆ. ಅವಶ್ಯಕತೆ ಬಿದ್ದರೆ, ಅದಕ್ಕೆ ತಕ್ಕಂತೆ ಇನ್ನೂ ಹೆಚ್ಚು ಬಾರಿ ಸಭೆ ಸೇರುತ್ತದೆ. ದಳದ ಕಾರ್ಯಕ್ರಮಗಳು, ದೈನಂದಿನ ಚಟುವಟಿಕೆಗಳು ಮತ್ತು ವಿಶೇಷ ಸಂಘಟನೆಗಳ ಬಗ್ಗೆ ವ್ಯವಹರಿಸುತ್ತದೆ. ಸಭೆಯನ್ನು ದಳದ ದೈನಂದಿನ ಕಾರ್ಯಕ್ರಮದ ಅಂಗವಾಗಿ ನಡೆಸಬಾರದು. ಅದನ್ನು ಬೇರೆಯಾಗಿ ಏರ್ಪಡಿಸಬೇಕು, ನಿಗದಿತ ಕೋಣೆ ಇದ್ದರೆ ಅಲ್ಲಿ ಅಥವಾ ಮತ್ತೆಲ್ಲಾದರೂ ಸುಲಭವಾಗಿ ಸೇರುವಂತಹ ಕಡೆ ಸಭೆ ಸೇರಬಹುದು.

ಗೌರವಾನ್ವಿತ ನ್ಯಾಯ ಸಭೆಯು ಸಭೆ ಸೇರಿದಾಗ ಅದನ್ನು ಕ್ರಮಬದ್ಧವಾಗಿ ನಡೆಸಬೇಕು. ಕಾಲಹರಣ ಮಾಡದೆ, ನಿಗದಿತ ವೇಳೆಗೆ ಸರಿಯಾಗಿ ಮಾಡಿ ಮುಗಿಸಬೇಕು. ಚರ್ಚೆಯು ಮುಕ್ತವಾಗಿರಬೇಕು ಮತ್ತು ವ್ಯಾವಹಾರಿಕವಾಗಿರಬೇಕು.

ಪೆಟ್ರೋಲ್ ಲೀಡರುಗಳೂ, ಸ್ಕೌಟ್ ಮಾಸ್ಟರರೂ, ಕಾಲಕ್ಕೆ ಸರಿಯಾಗಿ ಸಭಾಂಗಣಕ್ಕೆ ಬಂದು ಕಾಯಬೇಕು. ನಿಗದಿತ ವೇಳೆಗೆ ಸರಿಯಾಗಿ ಅಧ್ಯಕ್ಷರು ಸಭೆಯನ್ನು ಪ್ರಾರಂಭಿಸುತ್ತಿರುವುದಾಗಿ ಹೇಳಬೇಕು. ಕೂಡಲೇ ಎಲ್ಲರೂ ಎದ್ದುನಿಂತು ದೇವರಿಗೆ ಪ್ರಾರ್ಥನೆ ಸಲ್ಲಿಸಬೇಕು.

ಸ್ಕೌಟ್ ಮಾಸ್ಟರು ಸಭೆಯ ಸದಸ್ಯರು ಮಾತ್ರ. ಸಾಮಾನ್ಯವಾಗಿ ದಳ ನಾಯಕ ಅಥವಾ ಒಬ್ಬ ಪೆಟ್ರೋಲ್ ಲೀಡರಿಗೆ ಅಧ್ಯಕ್ಷತೆ ವಹಿಸಲು ಹೇಳಿರಲಾಗುತ್ತದೆ. ಯಾವುದೇ ವಿಷಯದ ಬಗ್ಗೆ ಸ್ಕೌಟ್ ಮಾಸ್ಟರಿಗೆ "ಅನಂಗೀಕಾರ" ಸೂಚಿಸುವ ಅಧಿಕಾರ ಇರುತ್ತದೆ.

ಸಭೆಯು ನಡೆಯುವ ಸಮಯದಲ್ಲಿ ಸ್ಕೌಟ್ ಮಾಸ್ಟರರು, ತಮ್ಮ ಅಭಿಪ್ರಾಯಗಳನ್ನು ಸಾಮಾನ್ಯವಾಗಿ ಹಿನ್ನೆಲೆಯಲ್ಲಿಟ್ಟುಕೊಂಡು, ಪೆಟ್ರೋಲ್ ಲೀಡರುಗಳು ಅವರ ಸಮಸ್ಯೆಗಳನ್ನು ಅವರದೇ ರೀತಿಯಲ್ಲಿ ಪರಿಹರಿಸಿಕೊಳ್ಳಲು ಬಿಡುತ್ತಾರೆ. ಚರ್ಚಾ ಸಮಯದಲ್ಲಿ ತಮ್ಮ ಅಭಿಪ್ರಾಯಗಳನ್ನು ಅವರ ಮೇಲೆ ಹೇರದೆ, ಮುಕ್ತ ಅವಕಾಶವನ್ನು ಕಲ್ಪಿಸುತ್ತಾರೆ. ಯಾವುದೇ ಸಮಸ್ಯೆಯ ಬಗ್ಗೆ, ಪರ ಮತ್ತು ವಿರುದ್ಧ ಅಭಿಪ್ರಾಯಗಳನ್ನು ವ್ಯಾವಹಾರಿಕ ಜಾಣ್ಮೆಯಿಂದ ಮನದಟ್ಟು ಮಾಡಿಕೊಟ್ಟು, ಪೆಟ್ರೋಲ್ ಲೀಡರ್‌ಗಳಿಗೆ, ಸೂಕ್ತನಿರ್ಧಾರ ತೆಗೆದುಕೊಳ್ಳಲು ಸಹಾಯ ಮಾಡುತ್ತಾರೆ. ಅವರ ಉದ್ದೇಶವಾದರೂ ಪೆಟ್ರೋಲ್ ಲೀಡರುಗಳಿಗೆ ಶಿಕ್ಷಣ ನೀಡುವುದು. ಸ್ಕೌಟ್ ಮಾಸ್ಟರರು ಅನಾವಶ್ಯಕವಾಗಿ ಚರ್ಚೆಯಲ್ಲಾಗಲೀ, ಕಾರ್ಯಕಲಾಪಗಳಲ್ಲಾಗಲೀ ತಲೆಹಾಕುವುದಿಲ್ಲ. ಚರ್ಚೆಯು ತಪ್ಪುದಾರಿ ಹಿಡಿದಂತೆ ಕಂಡಾಗ, ನಿರ್ಧಾರವು ಅಪಾಯಕಾರಿಯೆನಿಸಿದಾಗ ಅಥವಾ ಕಷ್ಟಕರವೆನಿಸಿದಾಗ ಮಾತ್ರ, ತಮ್ಮ ಸಲಹೆ ನೀಡಲು ಮುಂದೆ ಬರುತ್ತಾರೆ.

ದ್ವಿತೀಯಕರು ಗೌರವಾನ್ವಿತ ನ್ಯಾಯ ಸಭೆಯ ಸದಸ್ಯರಲ್ಲ. ಆದರೆ ವೀಕ್ಷಕರಾಗಿ ಸಭೆಯಲ್ಲಿ ಕೂಡಬಹುದು. ಯಾವುದೇ ರೀತಿಯಲ್ಲಿಯೂ, ಚರ್ಚೆ ಮತ್ತು ಕಾರ್ಯಕಲಾಪಗಳಲ್ಲಿ ಭಾಗವಹಿಸುವಂತಿಲ್ಲ. ಹಾಗೇನಾದರೂ ಹೇಳಬಯಸಿದರೆ ಅದನ್ನು ತಮ್ಮ ಪೆಟ್ರೋಲ್ ಲೀಡರಿಗೆ ಮಾತ್ರ ತಿಳಿಸಬಹುದು.

ತಮ್ಮ ಪೆಟ್ರೋಲ್ ಸದಸ್ಯರ ಪ್ರಗತಿಯ ಬಗ್ಗೆ ವರದಿಯನ್ನು ತಯಾರು ಮಾಡಿಕೊಂಡು ಬಂದು, ಗೌರವಾನ್ವಿತ ನ್ಯಾಯ ಸಭೆಯಲ್ಲಿ ಅವರು ಆ ವರದಿ ಯನ್ನೊಪ್ಪಿಸುವುದು ಪೆಟ್ರೋಲ್ ಲೀಡರುಗಳಿಗೊಂದು ಒಳ್ಳೆಯ ಅಭ್ಯಾಸವೆನಿಸುತ್ತದೆ. ಆ ವರದಿಯಲ್ಲಿ ಪ್ರತೀ ಸದಸ್ಯನ ಹಾಜರಾತಿ, ಪದಕಗಳ ಸಂಪಾದನೆ (ಪ್ರ, ದ್ವಿ, ತೃ, ಸೋಪಾನ ಪದಕಗಳು, ಪ್ರವೀಣತಾ ಪದಕಗಳು ಇತ್ಯಾದಿ.) ಮುಂತಾದ ವಿವರಗಳನ್ನು

ಸೇರಿಸಬಹುದು. ಈ ರೀತಿಯ ವಿವರಗಳು, ಗೌರವಾನ್ವಿತ ನ್ಯಾಯ ಸಭೆ ಮತ್ತು ಸ್ಕೌಟ್ ಮಾಸ್ಟರುಗಳು, ದಳವು ಪ್ರಗತಿಪಥದಲ್ಲಿದೆಯೇ ಇಲ್ಲವೇ? ಎಂದು ಹೇಳಲು ಬರುತ್ತದೆ ಮತ್ತು ಅವಶ್ಯಕವೆನಿಸಿದರೆ ಸೂಕ್ತ ಕ್ರಮಕೈಗೊಳ್ಳಲು ಅನುಕೂಲವಾಗುತ್ತದೆ.

ವರ್ಷದ ಪ್ರಾರಂಭದಲ್ಲಿ ಆ ವರ್ಷಪೂರಾ ನಡೆಸಲಿರುವ ಕಾರ್ಯಕ್ರಮಗಳು ಮತ್ತು ಸಾಧಿಸಲಿರುವ ಪ್ರಗತಿಯ ಬಗ್ಗೆ ಯೋಜನೆ ತಯಾರಿಸಬೇಕು. ಗೌರವಾನ್ವಿತ ನ್ಯಾಯ ಸಭೆಯು ಅದನ್ನು ಸ್ಥೂಲವಾಗಿ ತಯಾರಿಸಿ, ಮುಖ್ಯಾಂಶಗಳನ್ನೂ ಘಟನೆಗಳನ್ನು ಸೂಚಿಸಬಹುದು, ಈ ಹಂತದಲ್ಲಿ ವಿವರಗಳಿಗೆ ಹೋಗಬೇಕಾಗಿಲ್ಲ ಈ ದೀರ್ಘಾವಧಿಯೋಜನೆಯ ಆಧಾರದ ಮೇಲೆ, ಗೌರವಾನ್ವಿತ ನ್ಯಾಯ ಸಭೆಯು ಆಗಾಗ್ಗೆ ಸೇರುವ ಸಭೆಗಳಲ್ಲಿ, 3 ತಿಂಗಳಿಗೊಂದರಂತೆ ಅಲ್ಪಾವಧಿ ಕಾರ್ಯಕ್ರಮ ಗಳನ್ನೂ; ಮತ್ತೆ ಅದರಲ್ಲಿ ತಿಂಗಳಿಗೊಮ್ಮೆ ಸೇರಿದಾಗ ಸೂಕ್ಷ್ಮ ಯೋಜನೆಗಳನ್ನೂ ರೂಪಿಸಬಹುದು. ಈ ಯೋಜನೆಯ ಆಧಾರದ ಮೇಲೆ, ಸ್ಕೌಟ್ ಮಾಸ್ಟರರು, ಸಹಾಯಕ ಸ್ಕೌಟ್ ಮಾಸ್ಟರರ ಸಹಾಯ ಪಡೆದು ಪೂರ್ಣ ವಿವರಗಳೊಡನೆ, ವಾರದ ಮತ್ತು ಪ್ರತಿದಿನದ ಕಾರ್ಯಕ್ರಮಗಳನ್ನೂ ರೂಪಿಸಿಕೊಳ್ಳಬಹುದು. ಈ ರೀತಿ ಮಾಡುವುದರಿಂದ ಪೆಟ್ರೋಲ್ ಲೀಡರುಗಳಿಗೂ, ಸ್ಕೌಟುಗಳಿಗೂ ಕಾರ್ಯಕ್ರಮಗಳು ಹೊಸದಾಗಿಯೂ ಆಕರ್ಷಕವಾಗಿಯೂ ಕಂಡುಬರುತ್ತದೆ, ಅಲ್ಲದೆ ಕೊನೆಯ ಘಳಿಗೆಯಲ್ಲಿ ಕಾರ್ಯಕ್ರಮವನ್ನು ಆಶ್ಚರ್ಯಚಕಿತವನ್ನಾಗಿ ರೂಪಿಸಿಕೊಳ್ಳಲು, ಸ್ಕೌಟ್ ಮಾಸ್ಟರಿಗೆ ಸಹಾಯವಾಗುತ್ತದೆ.

ಗೌರವಾನ್ವಿತ ನ್ಯಾಯ ಸಭೆಯು ಸಂಸ್ಥೆಯ ಅತಿಮುಖ್ಯ ಅಂಗವಾಗಿದೆ. ಇದರಲ್ಲಿ ಪೆಟ್ರೋಲ್ ಲೀಡರುಗಳಿಗೆ ಸರಿಯಾದ ನಾಯಕತ್ವ ಶಿಕ್ಷಣ ದೊರಕುತ್ತದೆ.

ಗೌರವಾನ್ವಿತ ನ್ಯಾಯ ಸಭೆಯು ಕ್ರಮಬದ್ಧವಾಗಿ ಸಭೆಸೇರುವುದು; ವಿಧಿವತ್ತಾಗಿ ಕಾರ್ಯಕಲಾಪಗಳನ್ನು ಜರುಗಿಸುವುದು; ಸಮಸ್ಯೆಗಳನ್ನು ಮುಕ್ತವಾಗಿ ಚರ್ಚಿಸುವುದು; ಸೂಕ್ತ ನಿರ್ಧಾರಗಳನ್ನು ಕೈಗೊಳ್ಳುವುದು ಈ ಅಂಶಗಳ ಮೇಲೆ ಆಧಾರಿತವಾಗಿ, ನಾವು ಈ ದಿಸೆಯಲ್ಲಿ ಯಶಸ್ಸನ್ನು ಸಾಧಿಸಬಲ್ಲೆವೇ? ಇಲ್ಲವೇ? ಎಂಬುದು ನಿರ್ಧಾರವಾಗುತ್ತದೆ.

ಪೆಟ್ರೋಲ್ ಲೀಡರ್‌ನ ಶಿಕ್ಷಣದಲ್ಲಿ, ಸ್ಕೌಟ್ ಮಾಸ್ಟರರ ಪಾತ್ರವನ್ನು ಸೂಕ್ತ ರೀತಿಯಲ್ಲಿ ಮೆಚ್ಚಲೇಬೇಕು. ವ್ಯಾವಹಾರಿಕ ಜಾಣ್ಮೆಯಿಂದಲೂ, ವಿಶೇಷ ಆಸಕ್ತಿವಹಿಸಿಯೂ, ಸ್ಕೌಟ್ ಮಾಸ್ಟರಾದವರು ಒಂದು ರೀತಿಯ "ಅದೃಶ್ಯ ಚಾಲನ ಶಕ್ತಿ" (ರಿಮೋಟ್ ಕಂಟ್ರೋಲ್) ಯನ್ನು ಅಳವಡಿಸಿಕೊಂಡಿದ್ದಾರೆಂದೇ ಹೇಳಬೇಕು.



## ಅಧ್ಯಾಯ–11

# ದಳದ ಸಭಾಲಯ

ಪ್ರತಿದಳಕ್ಕೂ ತನ್ನದೇ ಸಭಾಲಯವಿರಬೇಕು. ವಿಶಾಲವಾಗಿ, ಸುಸಜ್ಜಿತವಾಗಿ ಇತ್ಯಾದಿ ಇರಬೇಕೆಂದೇನೂ ಇಲ್ಲ. ಸ್ಕೌಟಿಂಗ್‌ನ ಸಚ್ಚಾರಿತ್ರ್ಯ ನಿರ್ಮಾಣ ಕಾರ್ಯದಲ್ಲಿ 'ತನ್ನದೇ' ಎನ್ನುವುದು ಪ್ರಮುಖ ಪಾತ್ರವಹಿಸುತ್ತದೆ.

ಶಾಲೆಗಳಲ್ಲಿ ಸ್ಕೌಟುಗಳ ಉಪಯೋಗಕ್ಕಾಗಿ, ಅವರದೇ ಆದ ಸಣ್ಣ ಕೋಣೆಯನ್ನು ಒದಗಿಸುವುದೇನೂ ಕಷ್ಟವಾಗುವುದಿಲ್ಲ. ಆದರೆ ಮುಕ್ತದಳಗಳಿಗೆ ಇದೊಂದು ಸಮಸ್ಯೆಯೇ. ಒಂದು ಸಣ್ಣ ಕಟ್ಟಡವನ್ನು ಬಾಡಿಗೆಗೆ ತೆಗೆದುಕೊಳ್ಳಬೇಕು. ಅದಕ್ಕೆ ಹಣದ ಸಮಸ್ಯೆ. ಪರಿಹಾರವಂತೂ ಬೇಕು.

ಮನಸ್ಸಿದ್ದರೆ ಮಾರ್ಗ. ಛಲವಿದ್ದರೆ ಸಾಧನೆ. ಉದಾ: 1918ರಲ್ಲಿ ಪ್ರಾರಂಭವಾದ ಬೆಂಗಳೂರಿನ ಶ್ರೀ ಚಾಮುಂಡಿ ಸ್ಕೌಟ್ ಗ್ರೂಪ್ ಒಂದು ಮುಕ್ತ ದಳ. ಚಿರಯೌವನದ ಆ ದಳಕ್ಕಿಂದು 99 ವರ್ಷ ಪ್ರಾಯ ಅಷ್ಟೆ. ಅದಕ್ಕೆ ಬೆಂಗಳೂರು ನಗರ ಮಧ್ಯದಲ್ಲಿ ಅದರದೇ ಆದ ನಿವೇಶನ, ಭವ್ಯಕಟ್ಟಡ. ಆಟದ ಮೈದಾನ ಎಲ್ಲಾ ಇದೆ. ಆ ಗುಂಪಿನದೇ ಆದ ಶಿಬಿರ ಕೇಂದ್ರವೂ ಸಹ ನಗರದ ಹೊರವಲಯದಲ್ಲಿದೆ.

ದಳಗಳಿಗೆ 'ಸಭಾಲಯ'ವಾಗಿ ಉಪಯೋಗಿಸಲು ಸುಮಾರು ವಿಶಾಲವಾದ ಕೋಣೆಯೇ ಇರಬೇಕು. ಗಾಳಿ ಬೆಳಕು ಚೆನ್ನಾಗಿರಬೇಕು. ಈ ಕಟ್ಟಡ ಅಥವಾ ಕೋಣೆಯು ಅದರ ಕಾರ್ಯಾಲಯವಾಗುತ್ತದೆ. ದಳಕ್ಕೆ ಸಂಬಂಧಪಟ್ಟ ಎಲ್ಲಾ ಕಾಗದ, ಪತ್ರಗಳೂ, ಪುಸ್ತಕಗಳೂ ಇಲ್ಲಿರುತ್ತದೆ. ಸ್ಕೌಟುಗಳು ಇದನ್ನು ತಮ್ಮ ದಳದ ಅಧಿಕೃತ ಕಾರ್ಯಸ್ಥಾನವಾಗಿ ಪರಿಗಣಿಸಿ, ಆಟ, ಅಭ್ಯಾಸಗಳಿಗೆ ಉಪಯೋಗಿಸುತ್ತಾರೆ.

ಕೋಣೆಯ ಗೋಡೆಯ ಮೇಲೆ ದಳದ, ಪೆಟ್ರೋಲುವಾರು ಸದಸ್ಯರ ಪ್ರಗತಿ ತಃಖ್ತೆಯನ್ನು ಪ್ರದರ್ಶಿಸಲಾಗಿರುತ್ತದೆ. ಇದರಿಂದ ಪ್ರತಿ ಸ್ಕೌಟೂ, ಸ್ಕೌಟ್ ಕೌಶಲಗಳಲ್ಲಿ ಸಾಧಿಸಿರುವ ಪ್ರಗತಿಯೂ ಸೂಚಿತವಾಗಿರುತ್ತದೆ. ದಕ್ಷತೆಯ ಮೆಟ್ಟಲನ್ನೇರುತ್ತಿರುವುದು

ಕಂಡು ಬರುತ್ತದೆ. ಗೋಡೆಯ ಇನ್ನೊಂದೆಡೆ ದಳದ ಪ್ರಕಟಣಾ ಹಲಗೆ ಇರುತ್ತದೆ. ಇದರಲ್ಲಿ ಸುದ್ದಿ ಸಮಾಚಾರಗಳನ್ನು, ಇತ್ತೀಚಿನವರೆಗೂ ಇರುವಂತೆ, ಆಗಾಗ್ಗೆ ಬದಲಾಯಿಸಲಾಗುತ್ತಿರುತ್ತದೆ.

ದಳದ ಪುಸ್ತಕಾಲಯ, ಶೈಕ್ಷಣಿಕ ಸರಂಜಾಮು, ಆಟಗಳಿಗೆ ಸಂಬಂಧಪಟ್ಟ ವಸ್ತುಗಳು ಇತ್ಯಾದಿ ಬೇರೆ ಬೇರೆಯಾಗಿ, ಅಂದವಾಗಿ, ಕ್ರಮಬದ್ಧವಾಗಿ ಜೋಡಿಸಿರಲಾಗುತ್ತದೆ.

ಸಂಸ್ಥಾಪಕರಾದ ಬಿ.ಪಿ. ಮತ್ತು ಅವರ ಪತ್ನಿ ಲೇಡಿ ಬಿ.ಪಿ. ಇವರುಗಳ ಚಿತ್ರಪಟಗಳು ಕೋಣೆಯ ಗೋಡೆಯ ಪ್ರಮುಖ ಸ್ಥಳದಲ್ಲಿ ದೇದಿಪ್ಯಮಾನವಾಗಿ, ಶೋಭಿಸುತ್ತವೆ. ದಳದ ಚಟುವಟಿಕೆಗಳಿಗೆ ದಳದ ಚರಿತ್ರೆಗೆ ಸಂಬಂಧಪಟ್ಟ ಬಿಂಬಚಿತ್ರಗಳನ್ನೂ ಸಹ ಪ್ರದರ್ಶಿಸಬಹುದು. ಇವೆಲ್ಲವುಗಳ ಜೊತೆಗೆ ಸ್ಕೌಟ್ ನಿಯಮ ಮತ್ತು ರಾಷ್ಟ್ರಪತಿ ಪ್ರಶಸ್ತಿ ವಿಜೇತರುಗಳ ಗೌರವ ಸೂಚಕ ಫಲಕಗಳನ್ನೂ ಬೇರೆ ಬೇರೆಯಾಗಿ ಪ್ರದರ್ಶಿಸಬಹುದು. ಇವೆಲ್ಲವುಗಳಿಗೂ ಹೊಂದಿಕೊಂಡಂತೆ ದಳದ (ಗುಂಪಿನ) ಪ್ರಾರಂಭದಿಂದ ಇಲ್ಲಿನ ವರೆಗಿನ ಸ್ಕೌಟರುಗಳ ಪಟ್ಟಿಯನ್ನೂ (ಅವರವರ ಅವಧಿಯನ್ನು ಸೂಚಿಸಿ) ಪ್ರದರ್ಶಿಸಬೇಕು. ಸಾಧ್ಯವಾದರೆ ಪೆಟ್ರೋಲ್ ಲೀಡರುಗಳ ಪಟ್ಟಿಯೂ ಪ್ರದರ್ಶಿತವಾಗುವುದಾದರೆ ಆದರ್ಶವಾಗಿರುತ್ತದೆ.

ಸಾಧ್ಯವಾದರೆ ಬೇರೆ ಕೋಣೆಯಲ್ಲಿ, ಇಲ್ಲದಿದ್ದರೆ ಕೋಣೆಯ ಒಂದು ಮೂಲೆಯಲ್ಲಿ, ಗೌರವಾನ್ವಿತ ನ್ಯಾಯ ಸಭೆಯ ಸ್ಥಾಯೀ ವ್ಯವಸ್ಥೆ ಇರಬೇಕು. ಇದರಲ್ಲಿ ಸ್ಕೌಟ್ ಮಾಸ್ಟರರಿಗೂ, ಪೆಟ್ರೋಲ್ ಲೀಡರುಗಳಿಗೂ ಕೂಡಲು, ಬರೆಯಲು ಕುರ್ಚಿ, ಮೇಜುಗಳ ವ್ಯವಸ್ಥೆ ಇದ್ದರೆ ಒಳ್ಳೆಯದು. ಈ ವ್ಯವಸ್ಥೆಯಲ್ಲಿ ಗೌರವ ನ್ಯಾಯ ಸಭೆಗೆ ಮಾತ್ರ ಅವಕಾಶವಿದ್ದು, ಇತರೆಯ ಕಾರ್ಯಕ್ರಮಕ್ಕೆ ಅವಕಾಶ ಕೊಡಬಾರದು. ಪ್ರತಿ ಪಟಾಲಂಗೂ ಸ್ಥಾಯಿಯಾಗಿ ಒಂದೊಂದು ಮೂಲೆಯನ್ನು ನಿಗದಿಪಡಿಸಬೇಕು. ಇಲ್ಲಿ ಪಟಾಲಂಗಳು ತಮ್ಮ ಲಾಂಛನ ಹಾಗೂ ಧ್ಯೇಯ ವಾಕ್ಯಗಳನ್ನು ಪ್ರದರ್ಶಿಸಬೇಕು. ಅವರದೇ ಪೆಟ್ಟಿಗೆ/ಬೀರುಗಳಲ್ಲಿ ಪೆಟ್ರೋಲ್‌ನ ಕಾಗದಪತ್ರಗಳು, ರಿಜಿಸ್ಟರುಗಳು, ಸಾಮಾನುಗಳನ್ನು ಇಟ್ಟುಕೊಳ್ಳಬೇಕು. ಈ ಸ್ಥಳವನ್ನು ಪಟಾಲಂನ ಒಳಾಂಗಣ ಚಟುವಟಿಕೆಗಳಿಗೂ, ಅವಶ್ಯಕತೆ ಬಿದ್ದಾಗ ಪೆಟ್ರೋಲ್ ಸಭೆಗಳಿಗೂ ಉಪಯೋಗಿಸಬಹುದು.

ಈ ವಿವಿಧ ರೀತಿಯ ಉಪಯೋಗವೇ ಅಲ್ಲದೆ, ದಳದ ಸಭೆಗಳಿಗೆ ಮುಂಚೆ ಮತ್ತು ಆ ಬಳಿಕ, ದಳದ ಸ್ಕೌಟರುಗಳು, ಸ್ಕೌಟುಗಳು ಅನೌಪಚಾರಿಕವಾಗಿ (informal) ಒಟ್ಟು ಸೇರಲೂ, ಕರಕುಶಲ ಚಟುವಟಿಕೆಗಳಿಗೂ, ಪ್ರಾರ್ಥನಾ ಸಭೆಗಳನ್ನು ನಡೆಸಲೂ, ಈ ಸಭಾಲಯವನ್ನು ಉಪಯೋಗಿಸಬಹುದು.

ದಳದ ಸಭೆಗಳನ್ನು ಕೋಣೆಗಳೊಳಗೆ ನಡೆಸಬಾರದು. ಪ್ರಾರಂಭ ಮತ್ತು ಅಂತ್ಯದಲ್ಲಿ ಒಳಸೇರಬಹುದಾದರೂ, ದಳದ ಎಲ್ಲಾ ಕಾರ್ಯಕ್ರಮಗಳೂ, ಆಟಪಾಠಗಳೂ ಹೊರಾಂಗಣದಲ್ಲಿ, ಈ ಸಭಾಲಯಕ್ಕೆ ಅನತಿದೂರದಲ್ಲಿ ನಡೆಯಬೇಕು. ಸಭೆಯ ಸಮಾಪ್ತಿಯ ವೇಳೆ ಕೋಣೆಯ ಒಳ ಸೇರಿದರೂ, ಅದಾದ ಕೂಡಲೇ ಜಾಗ ಖಾಲಿ ಆಗಬೇಕು.



## ಅಧ್ಯಾಯ–12

# ದಳವನ್ನು ನಡೆಸುವುದು ಹೇಗೆ?

ದಳವನ್ನು ಪ್ರಾರಂಭಿಸಲು ಹೂಡಿದ ತಂತ್ರವೊಂದಾದರೆ, ದಳವನ್ನು ನಡೆಸಿಕೊಂಡು ಹೋಗಲು ಬೇರೆಯೇ ತಂತ್ರವನ್ನನುಸರಿಸಬೇಕು. ವ್ಯವಸ್ಥಿತವಾದ ಸ್ಕೌಟ್ ದಳದಲ್ಲಿ, ಕಾರ್ಯಕ್ರಮಗಳು ವೈವಿಧ್ಯಮಯವಾಗಿರಬೇಕು, ಕ್ರಮಬದ್ಧವಾಗಿರಬೇಕು ಮತ್ತು ಪ್ರಗತಿಪರವಾಗಿರಬೇಕು. ಬಾಲಕರಲ್ಲಿ ತಾವು ಪ್ರಗತಿ ಹೊಂದುತ್ತಿರುವ ಭಾವನೆಯು ಬೇರೂರಬೇಕು. ಪ್ರತಿದಿನವೂ ಮತ್ತೆ ಮತ್ತೆ ಒಂದೇ ಕಾರ್ಯಕ್ರಮವಾದರೆ, ಆ ಬಗ್ಗೆ ಅವರಿಗೆ ಬೇಸರ ಹುಟ್ಟಿ ಸುಲಭವಾಗಿ ಆಲಸ್ಯ ಹೊಂದುತ್ತಾರೆ.

"ಮಾಡುತ್ತಾ ಕಲಿಯುವುದು" ಸ್ಕೌಟಿಂಗ್‌ನ ವಿಧಾನವಾಗಿದೆ. ಆ ಕಾರಣ ಸ್ಕೌಟಿಂಗನ್ನು ಆದಷ್ಟೂ ಪ್ರಾಯೋಗಿಕವಾಗಿ ನಡೆಸಬೇಕಾಗುತ್ತದೆ. ತಿಳಿಯದವರು ತಿಳಿದವರಿಂದ ಕಲಿಯಬೇಕು. ಪೆಟ್ರೋಲ್ ಲೀಡರನು ಇತರರಿಗಿಂತಲೂ ಮುಂದಿರಬೇಕು. ಅವನು ಹಾಗಿರುವಂತೆ ಮಾಡಬೇಕು. ಹಾಗಿದ್ದಾಗಅವನು ಇತರರಿಗೆ ಹೇಳಿಕೊಡಲು ಸಹಾಯವಾಗುತ್ತದೆ. ಆದರೆ ಅವನು ಭಾಷಣ ಮಾಡುವುದಕ್ಕಿಂತಲೂ ಹೆಚ್ಚಾಗಿ ಪ್ರಾಯೋಗಿಕವಾಗಿ ಕಲಿಸುತ್ತಾನೆ. ಅವನ ಕಲಿಕೆಯು ಒಂದು ರೀತಿಯ ನಾಯಕತ್ವದ ಉಮೇದುವಾರಿಕೆ ಎನ್ನಬೇಕು.

ಸ್ಕೌಟ್ ಮಾಸ್ಟರರು ಮತ್ತು ಸಹಾಯಕ ಸ್ಕೌಟ್ ಮಾಸ್ಟರರುಗಳಿಗೆ ತಮ್ಮ ಪೆಟ್ರೋಲ್ ಲೀಡರುಗಳು ಸ್ಕೌಟಿಂಗ್‌ನ ಪರಿಜ್ಞಾನ ಮತ್ತು ಕೌಶಲಗಳ ವಿಷಯದಲ್ಲಿ, ಇತರ ಸ್ಕೌಟುಗಳಿಗಿಂತಲೂ ಮುಂದಿರುವಂತೆ ಶ್ರಮಿಸಬೇಕು. ಅವರಿಗೆ ವಿಶೇಷ ಗಮನನೀಡಿ, ಬೋಧಿಸಬೇಕು. ಶಿಕ್ಷಣ ನೀಡಬೇಕು. ಅವರಿಗೆ ಕೆಲವು ವಿಶೇಷ ಸೌಲಭ್ಯಗಳನ್ನು ಕಲ್ಪಿಸಬೇಕು, ಪೆಟ್ರೋಲ್ ಲೀಡರುಗಳ ಪೆಟ್ರೋಲಿಗೆ ತಾನು ಪೆಟ್ರೋಲ್ ಲೀಡರು ಎಂದು ಸ್ಕೌಟ್ ಮಾಸ್ಟರರು ಭಾವಿಸಿಕೊಳ್ಳಬೇಕು. ಗೌರವಾನ್ವಿತ ನ್ಯಾಯ ಸಭೆಗಳ ಬಳಿಕ ಅಥವಾ ದಳದ ಸಭೆಗಳ ಸಮಯದಲ್ಲಿ, ಸ್ಕೌಟ್ ಮಾಸ್ಟರು ಮತ್ತು ಸಹಾಯಕ ಸ್ಕೌಟ್ ಮಾಸ್ಟರು ವಿಶೇಷ ಬೋಧನೆ ಮತ್ತು ಶಿಕ್ಷಣ ನೀಡುವುದಾದರೆ, ಆ ಅವಧಿಯಲ್ಲಿ ಸಹಾಯಕ ಪೆಟ್ರೋಲ್ ಲೀಡರುಗಳು ಪಟಾಲಂನ ಜವಾಬ್ದಾರಿ ವಹಿಸುತ್ತಾರೆ.

ಇಷ್ಟಲ್ಲದೆ ಪೆಟ್ರೋಲ್ ಲೀಡರುಗಳಿಗೆ ಇತರ ರೀತಿಯ ಸಹಾಯ ಮತ್ತು ಸೌಲಭ್ಯಗಳನ್ನು ನೀಡಬೇಕು. ಉದಾ: ದಳದ ಕಾರ್ಯಕ್ರಮಗಳ ಬಗ್ಗೆ, ವಿವರವಾಗಿ ಯಲ್ಲದಿದ್ದರೂ ಸ್ಥೂಲವಾಗಿ, ಮುಂಚಿತವಾಗಿಯೇ ತಿಳಿಸುವುದು. ಅವರ ಪೆಟ್ರೋಲ್‌ನ ಚಟುವಟಿಕೆಗಳು ಮತ್ತು ಸಭೆಗಳ ಬಗ್ಗೆ ಅವಶ್ಯಕವೆನಿಸಿದಾಗ, ಬೇಕಾದ ಸಲಹೆಗಳನ್ನು ಪಡೆಯಲು, ಅವರಿಗೆ, ಸುಲಭವಾಗಿ ಸ್ಕೌಟ್ ಮಾಸ್ಟರರು ದೊರಕುವಂತಿರಬೇಕು. ಪೆಟ್ರೋಲ್‌ನ ಶಿಬಿರಗಳು, ಚಾರಣಗಳು, ವಿಶೇಷ ಸಭೆಗಳನ್ನು ನಡೆಸಲು ಅವಕಾಶಗಳೂ, ಅನುಕೂಲಗಳೂ ದೊರಕಬೇಕು.

ಸಾಮಾನ್ಯವಾಗಿ ಸ್ಕೌಟ್ ಮಾಸ್ಟರರು ಸ್ಕೌಟ್‌ಗಳಿಗೆ ನೇರವಾಗಿ ಕಲಿಸಬಾರದು. ಏನಿದ್ದರೂ ಸ್ಕೌಟುಗಳಿಗೆ ಕಲಿಸುವ ಕೆಲಸವು ಪೆಟ್ರೋಲ್ ಲೀಡರುಗಳ ಮೂಲಕವೇ ಆಗಬೇಕು.

ಶ್ರವಣ ವೀಕ್ಷಣ ವಿಧಾನದಲ್ಲಿ ತಿಳಿಸಿದ ಬಳಿಕ ಬೋಧಿಸಬೇಕು. ಉದಾ: ದಿಕ್ಕುಗಳನ್ನು ತಿಳಿಸಲು ದಿಕ್ಸೂಚಿಯ ಉಪಯೋಗ; ಗಂಟುಗಳನ್ನು ಕಲಿಸಲು ಗಂಟುಗಳ ಚಿತ್ರಪಟ/ಗಂಟುಗಳ ಚೌಕಟ್ಟು; ಪ್ರಾತ್ಯಕ್ಷಿಕೆ ಉಪಯೋಗ; 'ಕಿಮ್'ನ ಆಟಕ್ಕೆ ವಿವಿಧ ವಸ್ತುಗಳ ಜೋಡಣೆ; 'ಕಿಮ್' ಆಟದ ಮಾರ್ಪಾಟು ಉದಾ: ಓಡುತ್ತಿರುವ ಕಿಂ; ಮತ್ತೆ ಬಂದ ಕಿಂ; ಮಾರ್ಗ ಶೋಧನೆಗೆ ಪ್ರಾಂಗಣ ಇತ್ಯಾದಿ, ಈ ರೀತಿಯ ಮಾರ್ಪಾಟುಗಳು ಹಾಗೂ ಶ್ರವಣ, ವೀಕ್ಷಣ ಸಾಧನಗಳು ವಿಡಿಯೋ ಕ್ಯಾಸೆಟ್‌ಗಳು, ಸಿ.ಡಿ.ಗಳು ಇತ್ಯಾದಿ., ಉಪಯೋಗದಿಂದ ಸ್ಕೌಟ್ ಕೌಶಲಗಳ ಕಲಿಕೆಯು ಹೆಚ್ಚು ಪ್ರಾಯೋಗಿಕವೂ, ಸ್ವಾರಸ್ಯಕರವೂ ಪ್ರಭಾವಶಾಲಿಯೂ ಆಗಿರುತ್ತದೆ.

ದಳವನ್ನು ನಡೆಸುವುದು ಎಂದರೆ, ಕ್ರಮತಪ್ಪದೆ ದಳದ ಸಭೆಗಳನ್ನು ನಡೆಸುವುದು, ಅಂತಹ ಸಭೆಗಳ ಮೂಲಕ ಸ್ಕೌಟುಗಳ ಸ್ಕೌಟಿಂಗ್ ಸಾಮರ್ಥ್ಯದ ಏಣಿಯನ್ನು ಮೆಟ್ಟಲು ಮೆಟ್ಟಲಾಗಿ ಮೇಲೇರಲು ಅನುಕೂಲ ಮಾಡಿಕೊಡುವುದು. ದಿನಗಳೆದಂತೆ ಅವರ ಸಚ್ಚಾರಿತ್ರ್ಯವನ್ನು ಉತ್ತಮ ಪಡಿಸುತ್ತಾ ಹೋಗುವುದು. ಇದರಿಂದ ಹೊರಾಂಗಣ ಕಾರ್ಯಕ್ರಮಗಳು ಮತ್ತು ಪರಿಶೋಧನಾ ಯಾತ್ರೆಗಳಿಗೂ ಅವಕಾಶಗಳನ್ನು ಒದಗಿಸಿದಂತಾಗುತ್ತದೆ.

ಪ್ರವೇಶ್, ಪ್ರಥಮ ಸೋಪಾನ್ ದ್ವಿತೀಯ ಸೋಪಾನ್ ಇತ್ಯಾದಿ ಪದಕಗಳ ಅವಶ್ಯಕತೆಗಳನ್ನು ದೃಷ್ಟಿಯಲ್ಲಿಟ್ಟುಕೊಂಡು, ಸ್ಕೌಟ್ ಮಾಸ್ಟರರು ದಳದ ವರ್ಷದ ಕಾರ್ಯಕ್ರಮಗಳನ್ನು ರೂಪಿಸಬೇಕಾಗುತ್ತದೆ. ಸ್ಕೌಟುಗಳನ್ನು ಉಪಯುಕ್ತ ರೀತಿಯಲ್ಲಿ ಚುರುಕಾಗಿ, ಕಾರ್ಯಶೀಲರನ್ನಾಗಿ ಮಡುವ ಬಗ್ಗೆ, 'ಗಿಲ್ ಕ್ರಾಫ್ಟ್' ಪುಸ್ತಕಮಾಲೆಯ

"How to run a troop" ಮತ್ತು "Gilwell Projects" ಎಂಬ ಎರಡು ಪುಸ್ತಕಗಳಲ್ಲಿ ವಿವರವಾದ ಸಲಹೆಗಳನ್ನು ನೀಡಲಾಗಿದೆ.

ಪ್ರಾರಂಭ ದೆಶೆಯಿಂದಲೇ ಗೌರವ ನ್ಯಾಯ ಸಭೆಯನ್ನು ಕಾರ್ಯರಂಗಕ್ಕಿಳಿಸಿ ಬಿಡಬೇಕು. ಸ್ಕೌಟಿಂಗ್ ಎಂದರೆ "ಸ್ವಶಾಸಕತೆ" (ಸ್ವರಾಜ್ಯ)ಯ ಬಗ್ಗೆ ಶಿಕ್ಷಣ ನೀಡುವುದು ಎಂದು ಹೇಳಲಾಗುತ್ತದೆ. ಇದೊಂದು ಬಾಲಕರಿಂದ, ಬಾಲಕರಿಗಾಗಿ ನಡೆಸುವ ಬಾಲಕರ ಸ್ವಯಂಪ್ರಭುತ್ವ. ಹಾಗಾದುದರಿಂದ ಎಲ್ಲಾ ಚಟುವಟಿಕೆಗಳನ್ನೂ ಸ್ಕೌಟುಗಳೇ ರೂಪಿಸಿಕೊಂಡು ನಡೆಸಬೇಕಾಗುತ್ತದೆ. ಚಟುವಟಿಕೆಗಳ ಆಯ್ಕೆಯ ಬಗ್ಗೆ, ಗೌರವಾನ್ವಿತ ನ್ಯಾಯ ಸಭೆಯಲ್ಲಿ ಬಾಲಕರೇ ವ್ಯಕ್ತಪಡಿಸುತ್ತಾರೆ. ಗೌರವಾನ್ವಿತ ನ್ಯಾಯ ಸಭೆಯು ವಾರಾಂತ್ಯದಲ್ಲಿ ಸಭೆ ಸೇರುತ್ತದೆ. ಮುಂದಿನ ಸಭೆಯ ಬಗ್ಗೆ ಸಹ ನಿರ್ಧಾರ ತೆಗೆದುಕೊಳ್ಳುತ್ತದೆ.

ಗೌರವಾನ್ವಿತ ನ್ಯಾಯ ಸಭೆಯಲ್ಲಿ ದಳದ ಕಾರ್ಯಕ್ರಮವನ್ನು ಸ್ಥೂಲವಾಗಿ ರೂಪಿಸಲಾಗುತ್ತದೆ. ಮುಂದೆ ವಿವರವಾಗಿ ಸೂಕ್ಷ್ಮ ಯೋಜನೆಯನ್ನು ಸ್ಕೌಟ್ ಮಾಸ್ಟರರು ತಯಾರಿಸಿಕೊಳ್ಳುತ್ತಾರೆ. ಇದರಿಂದ ಕಾರ್ಯಕ್ರಮದಲ್ಲಿ ಅಚ್ಚರಿತರುವಂತಹ ಚಟುವಟಿಕೆಗಳನ್ನು ಸೇರಿಸಲು ಅನುಕೂಲವಾಗುತ್ತದೆ.

ಕಾರ್ಯಕ್ರಮದಲ್ಲಿ ಸೇರಿಸುವ ಆಟಗಳು, ಚಟುವಟಿಕೆಗಳು ಹೊಸದಾಗಿ, ಸ್ವಾರಸ್ಯಕರವಾಗಿ ಕಾಣುವುದರಿಂದ, ಕಾರ್ಯಕ್ರಮದಲ್ಲಿ ಭಾಗವಹಿಸುವ ಸ್ಕೌಟುಗಳಿಗೆ ಎಲ್ಲವೂ ನವೀನತೆಯಿಂದ ಕೂಡಿ, ಲವಲವಿಕೆಯನ್ನುಂಟುಮಾಡುತ್ತದೆ.

ಸ್ಕೌಟ್ ಸಭೆಗಳನ್ನು ಹೊರಾಂಗಣದಲ್ಲಿ, ಸ್ವಾಭಾವಿಕಪರಿಸರದಲ್ಲಿ, ದೇವರ ಅಮೂಲ್ಯ ಕೊಡುಗೆಯಾದ ಸ್ವಚ್ಛವಾದ ಗಾಳಿ ಬೆಳಕಿರುವ ವಾತಾವರಣದಲ್ಲಿ ನಡೆಸಬೇಕು. ಪ್ರಥಮ ಮತ್ತು ದ್ವಿತೀಯ ಸೋಪಾಸ್ ಪದಕಗಳಿಗೆ ಸಂಬಂಧಿಸಿದ ಕಾರ್ಯಕ್ರಮಗಳನ್ನು ನಡೆಸಬೇಕು. ಕಾರ್ಯಕ್ರಮಗಳು ಆಟಗಳು ಮತ್ತು ಅಭ್ಯಾಸಗಳಿಂದ ಕೂಡಿದ್ದು, ಸ್ಕೌಟ್ ಕೌಶಲಗಳನ್ನು ಕಲಿಯಲು ಸಹಾಯಕವಾಗಿರಬೇಕು.

ದಳದ ಸಭೆಗಳಿಗೆ ಬಂದ ಕೂಡಲೇ ಸ್ಕೌಟುಗಳಿಗೆ ಚುರುಕಾದ, ಹುರುಪುಗೊಳಿಸುವ, ಚಟುವಟಿಕೆ ಇರಬೇಕು. ಚಳಿ, ಗಾಳಿ, ಮಳೆ ಮುಂತಾದ ವಾತಾವರಣ ವೈಪರೀತ್ಯ ಅಥವಾ ಇನ್ನಾವುದೇ ಕಾರಣಗಳಿಂದ ಸೂಕ್ತರೀತಿಯ ಒಳಾಂಗಣದ ಆಟಗಳನ್ನು ನಡೆಸಬೇಕಾಗಿ ಬಂದರಂತೂ, ಇದು ಅತ್ಯವಶ್ಯಕ. ಸೂಕ್ತ ರೀತಿಯ ಒಳಾಂಗಣದ ಆಟಗಳನ್ನೂ ಸಹ ಎಚ್ಚರಿಕೆಯಿಂದ ಆರಿಸಿಕೊಳ್ಳ ಬೇಕಾಗುತ್ತದೆ. ಪಿಯರ್ಸನ್ ಅವರ ಪ್ರಕಟಣೆಗಳಾದ ಇಂಡೋರ್ ಗೇಮ್ಸ್ ಫಾರ್

ಸ್ಕೌಟ್ಸ್ ಮತ್ತು ಔಟ್ ಡೋರ್ ಗೇಮ್ಸ್ ಫಾರ್ ಸ್ಕೌಟ್ಸ್ ದಿ॥ ಎಂ.ಹೆಚ್.ಆರ್. ಅವರ 'ಸ್ಕೌಟ್ ಆಟಗಳು' ಪುಸ್ತಕಗಳು, ಮತ್ತಿತರ ಆಟದ ಪುಸ್ತಕಗಳು, ಈ ದಿಶೆಯಲ್ಲಿ ಉಪಯುಕ್ತವಾಗಿವೆ. ಶಾಲಾ ದಳದಳಿಗೂ, ಇತರ ದಳಗಳಿಗೂ, ಒಂದು ಮುಖ್ಯ ವ್ಯತ್ಯಾಸವಿದೆ. ಅದು ಪರಿಸ್ಥಿತಿಗೆ ಅನುಗುಣವಾದದ್ದು. ಉದಾ: ಮೇಲೆ ಮೇಲೆ ಬರುವ ಪರೀಕ್ಷೆಗಳು ಇತ್ಯಾದಿ. ಜನವರಿ ವೇಳೆಗೆ ಚಟುವಟಿಕೆಗಳು ಕೆಳಗಿಳಿದು, ಫೆಬ್ರುವರಿಯಿಂದ ಜೂನ್ ವರೆಗೆ ಏನೂ ಇಲ್ಲವೆಂದೇ ಹೇಳಬೇಕು. ಈ ಪರಿಸ್ಥಿತಿಗೆ ಹೊಂದಿಕೊಳ್ಳಲೇಬೇಕಾಗುತ್ತದೆ. ಹಾಗಾಗಿ ಈ ಅವಧಿಯಲ್ಲಿ ಬಹುತೇಕ ಶಾಲಾ ದಳಗಳು ನಿಷ್ಕ್ರಿಯವಾಗಿದ್ದು, ಉಳಿದ ವೇಳೆ ಜೀವಕಳೆಯಿಂದ ತುಂಬಿರುತ್ತದೆ. ಈ ರೀತಿಯ ಪರಿಸ್ಥಿತಿಯನ್ನು ಸರಿಪಡಿಸಬೇಕು. ಇಲ್ಲವಾದಲ್ಲಿ ಸ್ಕೌಟಿಂಗ್‌ನ ಪ್ರಾಯೋಜಕತೆಯು ಕುಂಠಿತವಾಗುತ್ತದೆ.

ಯಾವುದೇ ಕಾರ್ಯಕ್ರಮವಾದರೂ ನಿರಂತರವಾಗಿ ನಡೆಯುತ್ತಿದ್ದರೇ, ಅದರಿಂದ ಉಪಯೋಗವಾಗುವುದು. ಸ್ಕೌಟಿಂಗ್ ಸಹ ಅಷ್ಟೇ. ಎಡೆಬಿಡದೆ ನಡೆದು ಬಂದಾಗ, ಸಚ್ಚಾರಿತ್ರ್ಯ ನಿರ್ಮಾಣ ಮಾಡುವ ಶೈಕ್ಷಣಿಕ ಸಂಸ್ಥೆ ಆಗುತ್ತದೆ. ಈ ನ್ಯೂನತೆಯ ಪರಿಹಾರಕ್ಕಾಗಿ ಎಲ್ಲಾ ಸ್ಕೌಟ್ ಮಾಸ್ಟರರುಗಳೂ, ಶಾಲಾ ಮುಖ್ಯ ಉಪಾಧ್ಯಾಯರುಗಳೂ ಶ್ರಮಿಸಬೇಕು. ಪ್ರಾರಂಭದಿಂದಲೂ ಎಚ್ಚರಿಕೆ ವಹಿಸಿ ಕಾರ್ಯಕ್ರಮಗಳನ್ನು ರೂಪಿಸಿಕೊಂಡರೆ, ಶಾಲಾ ಕಾರ್ಯಗಳಿಗೂ, ಸ್ಕೌಟ್ ಕಾರ್ಯಕ್ರಮ ಗಳಿಗೂ, ಘರ್ಷಣೆ ಆಗುವುದಿಲ್ಲ. ಬಾಲಕರಾದರೂ ತಮ್ಮ ಅಧ್ಯಯನ ಕಾರ್ಯದಲ್ಲಿ ಮೊದಲಿನಿಂದೂ ಜಾಗೃತರಾಗಿದ್ದು, ತಮ್ಮ ಜವಾಬ್ದಾರಿಯನ್ನರಿತು, ಕ್ರಮಬದ್ಧವಾಗಿ, ಹಿಂದೆ ಬೀಳದಂತೆ ಓದಿಕೊಂಡರೆ, ಜನವರಿ–ಮಾರ್ಚ್ ತಿಂಗಳುಗಳಲ್ಲಿ ಸಹ, ಅಷ್ಟೋ ಇಷ್ಟೋ ಸ್ಕೌಟ್ ಚಟುವಟಿಕೆಗಳಲ್ಲಿ ಭಾಗವಹಿಸಬಹುದು. ಅವರು ಶಿಸ್ತಿನಿಂದ ನಡೆದುಕೊಂಡರೆ, ಧೈರ್ಯದಿಂದ ಸವಾಲನ್ನೆದುರಿಸಿ, ವಿಜಯೋತ್ಸಾಹದಿಂದ ಬೀಗಬಹುದು.

ಸ್ಕೌಟ್ ಮಾಸ್ಟರರೂ, ಶಾಲಾ ಮುಖ್ಯೋಪಾಧ್ಯಾಯರೂ ಆಸಕ್ತಿವಹಿಸಿ, ಸ್ಕೌಟ್ ಚಟುವಟಿಕೆಗಳು, ನಿರಂತರವಾಗಿ ನಡೆದುಕೊಂಡು ಹೋಗುವಂತೆ ನೋಡಿಕೊಳ್ಳಬೇಕು. ಒಂದು ಶಾಲಾ ವರ್ಷದಿಂದ ಮುಂದಿನ ಶಾಲಾವರ್ಷಕ್ಕೂ ಈ ನಿರಂತರತೆಯನ್ನು ಕಾಪಾಡಿಕೊಳ್ಳಬೇಕು. ಪ್ರತಿಬಾರಿಯೂ ಜನವರಿಯಲ್ಲಿ ಕೊನೆಗಾಣಿಸಿ, ಜೂನ್ ಜುಲೈನಲ್ಲಿ ಪುನರಾರಂಭಿಸುವುದೆಂದರೆ, ಸಚ್ಚಾರಿತ್ರ್ಯ ಶಿಕ್ಷಣ ನೀಡುವ ಸಂಸ್ಥೆಯೆಂಬ ಹೆಸರಿಗೆ ಧಕ್ಕೆಯುಂಟಾಗಿ, ಸ್ಕೌಟಿಂಗ್‌ನ ಪ್ರಾಯೋಜಕತೆಯು ಏಟು ತಿನ್ನುತ್ತದೆ. ಈ ವಿಷಯವನ್ನು ಗಂಭೀರವಾಗಿ ಯೋಚಿಸಬೇಕಾಗಿದೆ.



ಅಧ್ಯಾಯ–13

# ದಳದ ಕಾರ್ಯಕ್ರಮಗಳು

ವರ್ಷದ ಪ್ರಾರಂಭದಲ್ಲಿ ಗೌರವಾನ್ವಿತ ನ್ಯಾಯ ಸಭೆಯು ಸಭೆಸೇರಬೇಕು. ಆ ವರ್ಷದಲ್ಲಿ ನಡೆಸಲಿರುವ ಕಾರ್ಯಕ್ರಮಗಳನ್ನು ಸ್ಥೂಲವಾಗಿ ಚರ್ಚಿಸಿ, ನಿರ್ಧಾರ ತೆಗೆದುಕೊಳ್ಳಬೇಕು. ಈ ನಿರ್ಧಾರದ ಪ್ರಕಾರ ಯಾವ ತಿಂಗಳಿನಲ್ಲಿ ಯಾವ ಕಾರ್ಯಕ್ರಮ ನಡೆಸಲಾಗುತ್ತದೆ ಎಂದು ತಿಳಿದು ಬರುತ್ತದೆ. ಆದರೆ ಅದನ್ನು ನಡೆಸುವ ತಾರೀಕು ಮತ್ತು ಇತರ ವಿವರಗಳು ಇರುವುದಿಲ್ಲ. ಈ ಸ್ಥೂಲವಾದ ವೇಳಾಪಟ್ಟಿಯ ನಿರ್ಧಾರದ ಸಮಯದಲ್ಲಿ, ಗೌರವಾನ್ವಿತ ನ್ಯಾಯ ಸಭೆಯು, ಶಾಲಾ ರಜಾದಿನಗಳನ್ನೂ, ಬಿಡುವಿರುವ ದಿನಗಳನ್ನೂ, ಅವಿಶ್ರಾಂತವಾಗಿ ಕಾರ್ಯ ನಿರತವಾಗಿರುವ ದಿನಗಳನ್ನೂ, ಗಣನೆಗೆ ತೆಗೆದುಕೊಳ್ಳಬೆಕು. (ಏಕೆಂದರೆ ಅಂತಹ ಅವಿಶ್ರಾಂತ ದಿನಗಳಲ್ಲಿ ಸ್ಕೌಟುಗಳೂ ಸಹ ತಮ್ಮ ಪಾಠ, ಪ್ರವಚನಗಳು, ಪರೀಕ್ಷೆಗಳ ಬಗ್ಗೆ ಹೆಚ್ಚು ಗಮನ ನೀಡಬೇಕಾಗುತ್ತದೆ) ಸ್ಥೂಲವಾದ ಈ ವೇಳಾಪಟ್ಟಿಯಲ್ಲಿ ದಳದ ವಾರ್ಷಿಕ ಶಿಬಿರ, ವಾರಾಂತ್ಯ ಶಿಬಿರಗಳು, ದ್ವಿತೀಯ ಸೋಪಾನ್ ಇಂದ ರಾಷ್ಟ್ರಪತಿ ಪ್ರಶಸ್ತಿವರೆಗೆ ವಿಶೇಷ ತರಬೇತಿ ಶಿಬಿರಗಳು ಇತ್ಯಾದಿ ಕಾರ್ಯಕ್ರಮಗಳನ್ನು ಅಳವಡಿಸಿರಬೇಕು. ಈ ರೀತಿ ಪ್ರಾರಂಭದಲ್ಲಿಯೇ ವಾರ್ಷಿಕ ಕಾರ್ಯಕ್ರಮವನ್ನು ರೂಪಿಸಿಕೊಳ್ಳುವುದರಿಂದ, ದಳವು ತನ್ನ ಕಾರ್ಯಕ್ರಮಗಳನ್ನು "ವ್ಯಾವಹಾರಿಕ ದಕ್ಷತೆ" ಇಂದ ನಿರ್ವಹಿಸಲು ಸಾಧ್ಯವಾಗುತ್ತದೆ.

ಬೇಸಿಗೆ ಬಿಡುವಿನ ಬಳಿಕ ಸಾಮಾನ್ಯವಾಗಿ, ಶಾಲೆಗಳು ಜೂನ್ ತಿಂಗಳಿನಲ್ಲಿ ತೆರೆಯುತ್ತವೆ. ಆ ಕೂಡಲೇ ಸ್ಕೌಟ್ ಕಾರ್ಯಕ್ರಮಗಳನ್ನು ಪ್ರಾರಂಭಿಸಲು ಪ್ರಶಸ್ತವಾದ ಕಾಲ. ಎಲ್ಲವನ್ನೂ ಹೊಸದಾಗಿ ಪ್ರಾರಂಭಿಸುವ ಬದಲು ರಜೆಗೆ ಮುನ್ನ, ಹಿಂದಿನ ವರ್ಷದಲ್ಲಿ ಬಿಟ್ಟ ಸ್ಥಳದಿಂದ ಪ್ರಾರಂಭಿಸುವುದು ಒಳ್ಳೆಯದು.

ಶಾಲೆಯ ಕಾರ್ಯಕ್ರಮಗಳ ಪ್ರಭಾವದಿಂದ ದಳದ ಕಾರ್ಯಕ್ರಮಗಳಲ್ಲಿ ಸಹಜವಾಗಿ ಏರು ಪೇರಾಗುತ್ತದೆ, ಇದು ಅನಿವಾರ್ಯ. ಉಂಟಾಗಬಹುದಾದ ಅಡೆತಡೆಗಳನ್ನು ಸ್ಕೌಟ್ ಮಾಸ್ಟರರು ತಮ್ಮ ಜಾಣತನದಿಂದ ನಿವಾರಿಸಿಕೊಂಡು ದಳದ ಪ್ರಗತಿಯು ಕುಂಠಿತವಾಗದಂತೆ ನೋಡಿಕೊಳ್ಳುತ್ತಾರೆ. ಒಮ್ಮೆ ಪ್ರಾರಂಭವಾದ ದಳದ ಕಾರ್ಯಕ್ರಮಗಳು, ಯಾವುದೇ ಪ್ರತಿಬಂಧಕಗಳಿಗೂ ಸಗ್ಗದೆ, ನಿರಂತರವಾಗಿ ನಡೆದು

ಕೊಂಡು ಹೋಗಬೇಕು, ಪೆಟ್ರೋಲ್‌ನ ಜೀವನವೂ, ಆ ಮೂಲಕ ದಳದ ಜೀವನವೂ ಏಕಪ್ರಕಾರವಾಗಿ, ಪ್ರಗತಿ ಪಥದಲ್ಲಿ ಸಾಗಬೇಕು.

ಪೆಟ್ರೋಲುಗಳು ಶಾಶ್ವತ ಘಟಕಗಳು, ಅದರ ಸದಸ್ಯ ಸ್ಕೌಟುಗಳೂ ಶಾಶ್ವತರು. ಅವರುಗಳು ಒಟ್ಟಾಗಿ ಕಲಿಯುತ್ತಾರೆ. ಒಟ್ಟಾಗಿ ಅಭ್ಯಾಸ ಮಾಡುತ್ತಾರೆ. ಆಟವಾಡುತ್ತಾರೆ. ಪ್ರಗತಿ ಸಾಧಿಸುತ್ತಾರೆ. ತಾವೆಲ್ಲರೂ ಒಂದೇ ಎಂಬ "ತಂಡಸ್ಪೂರ್ತಿ"ಯನ್ನು (e-spirit-de-corps=Team spirit) ಬೆಳೆಸಿಕೊಳ್ಳುತ್ತಾರೆ. ಇದನ್ನು "ಪೆಟ್ರೋಲ್ ಮನೋಭಾವನೆ" (Patrol Spirit) ಎಂದರೂ ಸರಿ ಹೋದೀತು. ಪೆಟ್ರೋಲ್ ಗಳನ್ನೊಳಗೊಂಡ ದಳವೂ ಸಹ ಒಂದು ಶಾಶ್ವತ ಘಟಕವಾಗಿ, ಪೆಟ್ರೋಲುಗಳ ಮಧ್ಯೆ ಅನ್ಯೋನ್ಯತೆಯನ್ನು ಕಾಪಾಡಿಕೊಂಡು, "ದಳದ ಮನೋಭಾವನೆ"ಯನ್ನು (Troop Spirit) (ದಳದವರೆಲ್ಲರೂ ಒಂದೇ ಎಂಬ ಭಾವನೆ) ಬೆಳೆಸಿಕೊಳ್ಳುತ್ತಾರೆ. ಈ ಪೆಟ್ರೋಲ್ ಮತ್ತು ದಳದ ಮನೋಭಾವನೆಗಳು ನೈಜವಾಗಿದ್ದು, ಅವುಗಳ ಬೆಳೆವಣಿಗೆಗೆ ಎಲ್ಲ ಕಾಲಗಳಲ್ಲಿಯೂ ಉತ್ತೇಜನ ನೀಡಬೇಕು.

ಈ ಎಲ್ಲಾ ಅಂಶಗಳಿಂದ ಒಂದು ಅಭಿಪ್ರಾಯವು ಸ್ಫುಟವಾಗುತ್ತದೆ. ಜೂನ್ ನಲ್ಲಿ ಪುನಃ ಪ್ರಾರಂಭಿಸುವ 'ಸ್ಕೌಟ್ ಚಟುವಟಿಕೆಗಳು', ಅದೇ ತಾನೆ ಪ್ರಾರಂಭಿಸುವ, ಹೊಸ ಚಟುವಟಿಕೆ ಆಗಬಾರದು. ಅದು ಈ ಹಿಂದೆ ಬಿಟ್ಟಲ್ಲಿನಿಂದ ಮುಂದುವರಿಸುವ ಎಡೆಬಿಡದ ಚಟುವಟಿಕೆ ಆಗಬೇಕು.

ಏನಾದರೇನು? ಜೂನ್ ನಲ್ಲಿ ಸಾಮಾನ್ಯವಾಗಿ ಎಲ್ಲಾ ಶಾಲಾ ದಳಗಳಲ್ಲಿ ಅಲ್ಪಸ್ವಲ್ಪ ಬದಲಾವಣೆ ಆಗುತ್ತದೆ. ಕೆಲವು ಸ್ಕೌಟುಗಳು ಉತ್ತೀರ್ಣರಾಗಿ ಶಾಲೆಯನ್ನು ಬಿಟ್ಟು ಕಾಲೇಜಿಗೋ ಇತರೆಡೆಗೋ, ಸೇರಲು ಹೋಗಬಹುದು, ಅಂತಹ ಖಾಲಿ ಸ್ಥಳಗಳನ್ನು ಭರ್ತಿ ಮಾಡಬೇಕಾಗುತ್ತದೆ. ಕೆಲವು ಪೆಟ್ರೋಲ್ ಲೀಡರುಗಳೂ ಬಿಡಬಹುದು. ಆ ಖಾಲಿ ಸ್ಥಾನಗಳಿಗೆ ದ್ವಿತೀಯಕರು ಬರುತ್ತಾರೆ. ಅಥವಾ ಇತರೇ ಅನುಭವೀ ಸ್ಕೌಟ್‌ಗಳು ಬರಬಹುದು. ಇಂತಹ ಅನೇಕ ಸಮಸ್ಯೆಗಳನ್ನು ಆದಷ್ಟೂ ಜಾಗ್ರತೆ ಇತ್ಯರ್ಥ ಮಾಡಬೇಕು. ಆಕಾರಣ ಗೌರವಾನ್ವಿತ ನ್ಯಾಯ ಸಭೆಯು, ಮೊದಲು ಪುನಸ್ಸಂಘಟಿತವಾಗಬೇಕು, ತುರ್ತು ಸಮಸ್ಯಾ ಪರಿಹಾರಗಳ ಜೊತೆಗೆ, ವಾರ್ಷಿಕ ಕಾರ್ಯಕ್ರಮಗಳ ಬಗ್ಗೆಯೂ ಅವಲೋಕಿಸಬೇಕಾಗುತ್ತದೆ.

ಯಾವ ತಿಂಗಳುಗಳಲ್ಲಿ, ವಾರಕ್ಕೆರಡು ಬಾರಿ ಸಭೆ ಸೇರಿ, ಹೆಚ್ಚುವರಿ ಸ್ಕೌಟಿಂಗ್ ನಡೆಸಬೇಕೆಂಬುದು, ದಳದ ಕಾರ್ಯಕ್ರಮಗಳ ಬಗ್ಗೆ ಕೈಗೊಳ್ಳಬೇಕಾದ ಅತೀ ಮುಖ್ಯವಾದ

ಅಂಶವಾಗಿದೆ. ಸಾಮಾನ್ಯವಾಗಿ ಜೂನ್‌ನಿಂದ ಡಿಸೆಂಬರ್ ಕೊನೆಯವರೆಗೆ, ಈ ರೀತಿ ಮಾಡಲು ಅನುಕೂಲವಾಗಬಹುದು. ಜನವರಿ ಯಿಂದಾಚೆಗೆ ಪರೀಕ್ಷೆಗಳು ಹತ್ತಿರವಾಗುವುದರಿಂದ ವಾರಕ್ಕೆರಡು ಬಾರಿ ಹಾಗಿರಲಿ, ವಾರಕ್ಕೊಂದು ದಿನದ 75 ನಿ. ಗಳ ಸಾಮಾನ್ಯ ಕಾರ್ಯಕ್ರಮ ನಡೆಸಲೂ ಕಷ್ಟವಾಗಬಹುದು. ಜನವರಿ ಏಪ್ರಿಲ್ ಅವಧಿಯಲ್ಲಿ ದಳದ ಸಭೆಗಳು ಅಸ್ತವ್ಯಸ್ತಗೊಂಡು, ಆಗೊಂದು ಈಗೊಂದೇ ಅಲ್ಲದೆ, ಸೇರಿದ ಸಭೆಯನ್ನೂ ಸಹ ಬಹಳ ಕಡಿಮೆ ಸಮಯದಲ್ಲಿ ಮುಗಿಸಬೇಕಾಗುತ್ತದೆ. ಅನೇಕ ಶಾಲಾದಳಗಳು, ಈ ಅವಧಿಯಲ್ಲಿ ತಮ್ಮ ಚಟುವಟಿಕೆಗಳನ್ನು ಸ್ಥಗಿತಗೊಳಿಸಿ, ಶಾಲೆಯು ತೆರೆದ ನಂತರ ಮೊದಲಿನಿಂದ ಪ್ರಾರಂಭಿಸುತ್ತವೆ. ಹೀಗೆ ನಿಲ್ಲಿಸುವುದು ಒಳ್ಳೆಯದಲ್ಲ. ಇದರಿಂದ ಬಾಲಕರಿಗೆ ಸ್ಕೌಟಿಂಗ್‌ನಿಂದ ಒಳ್ಳೆಯದಾಗುವುದಕ್ಕಿಂತಲೂ ಕೆಡುಕೇ ಹೆಚ್ಚು. ಪುನಃ ಮೊದಲಿನಿಂದ ಪ್ರಾರಂಭಿಸುವುದೂ ಒಳ್ಳೆಯದಲ್ಲ. ಶಾಲಾ ದಳಗಳು ಈ ಎರಡನ್ನೂ ಮಾಡದೆ ಪುನಃ ಕಾರ್ಯಕ್ರಮಗಳು ನಿರಂತರವಾಗಿ ನಡೆಯುವಂತೆ ಶ್ರಮಿಸಬೇಕು. ಇನ್ನೊಂದು ಮುಖ್ಯವಾದ ಕಿವಿಮಾತು. ಎಲ್ಲಾ ಸ್ಕೌಟ್ ದಳಗಳೂ ಯಾವ ತಿಂಗಳುಗಳಲ್ಲಿ (i) ವಾರಾಂತ್ಯ ಶಿಬಿರವನ್ನು ನಡೆಸಬೇಕು. (ii) ದಳದ ವಾರ್ಷಿಕ ಶಿಬಿರಗಳು ಮತ್ತು ಪೆಟ್ರೋಲ್ ಶಿಬಿರಗಳನ್ನು ನಡೆಸಬೇಕು ಎಂಬ ಬಗ್ಗೆ ಮುಂದಾಗಿ ನಿಗದಿಪಡಿಸಿಕೊಳ್ಳಬೇಕು.

ದ್ವಿತೀಯ ಸೋಪಾನದಿಂದ ಹಿಡಿದು ರಾಷ್ಟ್ರಪತಿ ಪ್ರಶಸ್ತಿಯ ವರೆಗೆ ಇರುವ ಪದಕಗಳ ಬಗ್ಗೆ ಯಾವ ತಿಂಗಳುಗಳಲ್ಲಿ ಗಾಢವಾದ ಅಭ್ಯಾಸಗಳನ್ನಿಟ್ಟುಕೊಳ್ಳ ಬೇಕೆಂಬುದನ್ನು ನಿರ್ಧರಿಸುವುದು ಮತ್ತೊಂದು ಮುಖ್ಯವಾದ ಅಂಶವಾಗಿದೆ. ರಾಷ್ಟ್ರಪತಿ ಪ್ರಶಸ್ತಿ ಎಂದೊಡನೆ ಕೆಲವು ಪ್ರವೀಣತಾ ಪದಕಗಳಿಗೂ ಶಿಕ್ಷಣ ನೀಡಬೇಕಾಗುತ್ತದೆ. ಈ ಎಲ್ಲಾ ಅಂಶಗಳ ಬಗ್ಗೆ ಶಾಲಾವರ್ಷದ ಪ್ರಾರಂಭದಲ್ಲೇ ಗಮನಹರಿಸಬೇಕಾಗುತ್ತದೆ. ಬಹುಶಃ ಆಗಸ್ಟ್-ಸೆಪ್ಟೆಂಬರ್ ತಿಂಗಳುಗಳು ಈ ಕೆಲಸಕ್ಕೆ ಪ್ರಶಸ್ತವೆನ್ನಬಹುದು. ಈ ಕೆಲಸವನ್ನು ದಳಗಳೇ ಕೈಗೊಳ್ಳಬಹುದು. ಜಿಲ್ಲಾ ಮಟ್ಟದಲ್ಲಿ ಸಂಘಟಿಸುವುದಾದರೆ (ಜಿಲ್ಲಾ ಆಯುಕ್ತರು ಇತ್ಯಾದಿ) ಪ್ರಾದೇಶಿಕವಾಗಿಯೂ ನಡೆಸಬಹುದು. ವರ್ಷದ ಇತರ ಕಾರ್ಯಕ್ರಮಗಳಲ್ಲಿ ದಳದ ವಾರ್ಷಿಕೋತ್ಸವ, ಜಿಲ್ಲಾ ಮತ್ತು ರಾಜ್ಯಮಟ್ಟದ ಮೇಳಗಳಲ್ಲಿ ಭಾಗವಹಿಸುವಿಕೆ, ಸ್ಕೌಟ್ ಸಪ್ತಾಹ, ಸಂಸ್ಥಾಪಕರ ಜನ್ಮದಿನ, ಹಬ್ಬಹರಿದಿನಗಳು, ರಾಷ್ಟ್ರೀಯ ಸಮಾರಂಭಗಳ ಆಚರಣೆ ಹೀಗೆ ಇರುತ್ತವೆ. ಇವೆಲ್ಲವೂ ಸ್ಥೂಲ ರೇಖೆಗಳಾಯಿತು. ಸ್ಕೌಟ್ ಮಾಸ್ಟರರು ಗೌರವಾನ್ವಿತ ನ್ಯಾಯ ಸಭೆಯೊಡನೆ ಆಲೋಚಿಸಬೇಕಾದ ವಿವರಗಳನ್ನು ಸೇರಿಸುತ್ತಾ ಹೋಗಬಹುದು.

ದಳದ ತಿಂಗಳ ಕಾರ್ಯಕ್ರಮವನ್ನು ಸ್ಥೂಲವಾಗಿ ರೂಪಿಸಿಕೊಂಡು, ವಾರ ವಾರದ ಕಾರ್ಯಕ್ರಮಗಳನ್ನು 3–4 ದಿನಗಳಿಗೆ ಮುಂಚಿತವಾಗಿ, ವಿವರವಾಗಿ ರೂಪಿಸುತ್ತಾ ಹೋಗಬೇಕು. ಸ್ಕೌಟ್ ಮಾಸ್ಟರರು ಸಹಾಯಕ ಸ್ಕೌಟ್ ಮಾಸ್ಟರರು ಈ ವಿವರಗಳನ್ನು ರೂಪಿಸಿಕೊಳ್ಳಬಹುದು. ಇಷ್ಟಪಟ್ಟಲ್ಲಿ ಪೆಟ್ರೋಲ್ ಲೀಡರ್ ಗಳನ್ನು ಈ ಕೆಲಸದಲ್ಲಿ ಸೇರಿಸಿಕೊಳ್ಳಬಹುದು. ಹಾಗೆ ಸೇರಿಸಿಕೊಂಡಾಗ ಎಲ್ಲಾ ವಿವರಗಳೂ ತಿಳಿಯದಂತೆ ಎಚ್ಚರವಹಿಸಬೇಕು. ಹಾಗೇನಾದರೂ ತಿಳಿದರೆ, ಕಾರ್ಯಕ್ರಮಗಳ ನವೀನತೆಯು ಕೆಡುತ್ತದೆ. ನವೀನತೆಯನ್ನು ಉಳಿಸಿಕೊಳ್ಳಲಾದರೂ, ಕಾರ್ಯಕ್ರಮಗಳಲ್ಲಿ ಅಲ್ಪಸ್ವಲ್ಪ ಗೋಪ್ಯತೆಯನ್ನು ಕಾಯ್ದುಕೊಳ್ಳಬೇಕು.

ದಳದ ಸಾಮಾನ್ಯ, ವಿಶೇಷ ಸಭೆಗಳ ಜೊತೆಗೆ, ದಳದ ವಾರ್ಷಿಕ ಶಿಬಿರ, ವಾರ್ಷಿಕ ಚಂದಾ ಎತ್ತುವ ಸಪ್ತಾಹ, ವಾರ್ಷಿಕ ಸ್ಕೌಟ್ ದಿನಾಚರಣೆ ಮುಂತಾದುವುಗಳ ಬಗ್ಗೆ ಸಾಕಷ್ಟು ಗಮನ ಹರಿಸಬೇಕು.

ಬೇಸಿಗೆ ಬಿಡುವು ವಾರ್ಷಿಕ ಶಿಬಿರಗಳಿಗೆ ಪ್ರಶಸ್ತವಾದ ಕಾಲ. ಆ ಶಿಬಿರವು ಒಂದು ವಾರದ ಕಾಲವಾದರೂ ಇರಬೇಕು. ಸ್ಕೌಟಿಂಗ್‌ನ ಗುಣಮಟ್ಟದ ಜೊತೆಗೆ, ಶಿಬಿರವಾಸದ ಗುಣಮಟ್ಟವನ್ನೂ ಕಾಯ್ದುಕೊಳ್ಳಬೇಕು. ಶಿಬಿರ ಹೂಡುವ ಸ್ಥಳವನ್ನು ಎಚ್ಚರಿಕೆಯಿಂದ ಆಯ್ಕೆ ಮಾಡಬೇಕು. ಸಾಕಷ್ಟು ಮುಂಚಿತವಾಗಿ ಆ ಬಗ್ಗೆ ತಿಳಿಸಬೆಕು. ಸ್ಕೌಟಿಂಗ್‌ನ್ನು ಜೀವನದ ರೀತಿಯನ್ನಾಗಿ ಅಭ್ಯಾಸ ಮಾಡುವುದು ಶಿಬಿರದ ಉದ್ದೇಶವಾಗಿರಬೇಕು. ಭಾರತೀಯ ಸಂಪ್ರದಾಯಗಳಿಗನುಗುಣವಾಗಿ, ತುಂಬು ಜೀವನವನ್ನು ನಡೆಸಲೂ, ಆದರ್ಶಗಳನ್ನು ಅಳವಡಿಸಿಕೊಳ್ಳಲೂ, ಅವಕಾಶವಿರ ಬೇಕಾದುದು ಶಿಬಿರದ ಗುರಿಯಾಗಿರಬೇಕು. ಪ್ರಕೃತಿ ವೀಕ್ಷಣೆ, ಪ್ರಮುಖ ಸ್ಥಳಗಳ ಭೇಟಿ ಇವುಗಳನ್ನೂ ಸೇರಿಸಿಕೊಳ್ಳಬೇಕು.

ಚಂದಾ ಎತ್ತುವುದು ಗುಂಪಿಗಾಗಿ ಮಾತ್ರವಿರಬಹುದು ಅಥವಾ ಇನ್ನಾವುದೇ ಸತ್ಕಾರ್ಯಕ್ಕಿರಬಹುದು ಅಥವಾ ಎರಡೂ ಆಗಬಹುದು. ಇವೆಲ್ಲವನ್ನೂ ಎಚ್ಚರಿಕೆ ವಹಿಸಿ ಯೋಜಿಸಬೇಕು. ಈ ಕಾರ್ಯದಲ್ಲಿ ಹಿರಿಯರ ಸಹಕಾರವು ಅತ್ಯವಶ್ಯಕ. ವಸ್ತುಗಳ ಮಾರಾಟ, ಕರಕುಶಲ ವಸ್ತುಗಳ ಪ್ರದರ್ಶನ ಮತ್ತು ಮಾರಾಟ ಇವುಗಳನ್ನೂ ಸಂಘಟಿಸಬಹುದು.

ವರ್ಷದ ಕೊನೆಯಲ್ಲಿ ವಾರ್ಷಿಕ ಸ್ಕೌಟ್ ದಿನಾಚರಣೆ ಬರುತ್ತದೆ. ಸಾರ್ವಜನಿಕರು, ಗುಂಪಿನ ಮುಖ್ಯ ಚಟುವಟಿಕೆಗಳ ಬಗ್ಗೆ ತಿಳಿಯಲೂ, ಗುಂಪಿನ ಸಾಧನೆಗಳನ್ನು ವೀಕ್ಷಿಸಲೂ ಸಹಾಯವಾಗುತ್ತದೆ.



## ಅಧ್ಯಾಯ–14

# ದಳದ ಸಭೆ

ದಳದ ಸಭೆ ಎಂದರೆ ಸ್ಕೌಟ್ ಮಾಸ್ಟರರು ವಾರಕ್ಕೊಮ್ಮೆ ಅಥವಾ ಎರಡು ಬಾರಿ ದಳದ ಸದಸ್ಯರ ಜೊತೆಯಲ್ಲಿ ಕಳೆಯುವ ಅಲ್ಪಾವಧಿ ಸಮಯಕ್ಕೆ ಅನ್ವಯಿಸುತ್ತದೆ. ಈ ಸಮಯದಲ್ಲಿ ಅವರು ಪೂರ್ವ ನಿರ್ಧಾರಿತವಾದ ನಿಗದಿತ ಸ್ಕೌಟ್ ಚಟುವಟಿಕೆಗಳನ್ನು ನಡೆಸುತ್ತಾರೆ. ಪೆಟ್ರೋಲ್‌ಗಳು ಕಾರ್ಯಶೀಲವಾಗಿ ಕೆಲಸ ಮಾಡುವಂತೆ ನೋಡಿಕೊಳ್ಳುತ್ತಾರೆ ಮತ್ತು ಸ್ಕೌಟುಗಳಿಗೆ ಕ್ರಮವರಿತ ಬೋಧನೆ ಹಾಗೂ ಶಿಕ್ಷಣವು ದೊರಕುವಂತೆ ಮಾಡುತ್ತಾರೆ.

ವಾರದಲ್ಲಿ ಎರಡು ಸಭೆಗಳು ಜರುಗಬೇಕು. ಒಂದು ಸ್ಕೌಟ್ ಮಾಸ್ಟರರ ನೇತೃತ್ವದಲ್ಲಿ ಇನ್ನೊಂದು ಪೆಟ್ರೋಲ್ ಲೀಡರುಗಳ ನಾಯಕತ್ವದಲ್ಲಿ. ಸಾಮಾನ್ಯವಾಗಿ ಪ್ರತಿ ಸಭೆಯ ಅವಧಿ 90 ನಿಮಿಷಗಳು. ಹಾಗೆ ವಾರದಲ್ಲಿ ಎರಡು ಬಾರಿ ಸಭೆಗಳನ್ನು ನಡೆಸಲಾಗದಿದ್ದರೆ ಎರಡು ಗಂಟೆಗಳಿಗೂ ಹೆಚ್ಚು ಅವಧಿಯ ಒಂದು ಸಭೆಯನ್ನು ನಡೆಸಬೇಕು. ಈ ಸಭೆಗಳಿಗೆ ಸ್ಕೌಟ್ ಮಾಸ್ಟರರು ನಾಯಕತ್ವ ವಹಿಸಬೇಕು. ಈ ಸಭೆಗಳಲ್ಲಿ ಸ್ಕೌಟುಗಳು ಸಮವಸ್ತ್ರ ಧರಿಸಿರಬೇಕು ಅಥವಾ 15 ದಿನಗಳಿಗೊಮ್ಮೆ ಯಾದರೂ ಸಮವಸ್ತ್ರ ಧರಿಸಿ ಹಾಜರಾಗಬೇಕು.

ದಳದ ಸಭೆಗಳನ್ನು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಧ್ವಜವನ್ನು ಹಾರಿಸಿ ಅಧಿಕೃತವಾಗಿ ನಡೆಸಬೇಕು, ವಾರದ ನಿಗದಿತ ದಿನದಲ್ಲಿ ನಿಗದಿತ ಕಾಲಕ್ಕೆ ಸರಿಯಾಗಿ ಪ್ರಾರಂಭಿಸಿ, ನಿಗದಿತ ಅವಧಿಯಲ್ಲಿ ಕಾರ್ಯಕ್ರಮ ನಡೆಸಿ, ನಿಗದಿತ ವೇಳೆಗೆ ಸರಿಯಾಗಿ ಕಾರ್ಯಕ್ರಮವನ್ನು ಮುಗಿಸಬೇಕು. ಕಾಲ ಪ್ರಜ್ಞೆಯು ಬಹು ಮುಖ್ಯವಾದುದು.

ಎಲ್ಲಾ ವೇಳೆಗಳಲ್ಲಿಯೂ ದಳದ ಸಭೆಗಳು ಹೊರಾಂಗಣದಲ್ಲಿಯೇ ನಡೆಯಬೇಕು. ದಳದ ಸಭಾಲಯವನ್ನು, ಸಭೆಗೆ ಮುನ್ನ ಒಟ್ಟು ಸೇರಲು ಮತ್ತು ಸಭೆಯ ವಿಸರ್ಜನೆಗೆ ಮುನ್ನ ಸೇರಲು ಉಪಯೋಗಿಸಬಹುದು. ಅಷ್ಟೇ ಅಲ್ಲದೆ ಇದ್ದಕ್ಕಿದ್ದಂತೆ ಮಳೆ ಬಂದರೆ ಅದರ ಉಪಯೋಗ ಅನಿವಾರ್ಯ.

ಸ್ಕೌಟುಗಳು ದಳದ ಎಲ್ಲಾ ಸಭೆಗಳಿಗೂ ಸಮವಸ್ತ್ರದಲ್ಲಿ ಹಾಜರಾಗಲು ಆಗದಿರಬಹುದು. ಅದರ ಅವಶ್ಯಕತೆಯೂ ಇರುವುದಿಲ್ಲ. ತಿಂಗಳಿನ 8 ಸಭೆಗಳಲ್ಲಿ 2 ಸಭೆಗಳಿಗಾದರೂ ಅವರು ಸಮವಸ್ತ್ರದಲ್ಲಿರಬಹುದಾದರೆ ಅದೆಷ್ಟೋ ಮೇಲು. ನಿಗದಿತ ಸಭೆಗಳಿಗೆ (ಉದಾ 1 ಮತ್ತು 5) ಸಮವಸ್ತ್ರದಲ್ಲಿರಲೇಬೇಕೆಂದು ಹೇಳಿದರಾಯಿತು. ಆ ರೀತಿ ಆಗಾಗ್ಗೆ ಸಮವಸ್ತ್ರದಲ್ಲಿ ಸಭೆ ಸೇರುವುದರಿಂದ ದಳವು ಚೂಟಿಯಾಗಿರಲು (smart) ಸಹಾಯವಾಗುತ್ತದೆ. ನಿಗದಿತ ಸಭೆಗಳಲ್ಲಿ ಸಮವಸ್ತ್ರವು ಕಡ್ಡಾಯವಾಗಿದ್ದು, ಉಳಿದ ಸಭೆಗಳಲ್ಲಿ ಐಚ್ಛಿಕ ಮಾಡಬಹುದು. ಸ್ಕೌಟರುಗಳು ಮಾತ್ರ ಎಲ್ಲಾ ಸಭೆಗಳಲ್ಲಿಯೂ ಸರಿಯಾದ ರೀತಿಯಲ್ಲಿ ಸಮವಸ್ತ್ರ ಧರಿಸಿಯೇ ಹಾಜರಾಗಬೇಕು.

ಶಾಲಾ ಕ್ರೀಡಾ ಮೈದಾನವಿದ್ದರೆ, ಅದನ್ನು ದಳದ ಸಭೆಗಳಿಗೆ ಉಪಯೋಗಿಸಬಹುದು. ಫುಟ್‌ಬಾಲ್ ಮೈದಾನದ ಅರ್ಧದಷ್ಟಾದರೂ ಸಾಕು. ಸ್ಕೌಟ್ ಕಾರ್ಯಕ್ರಮಗಳಿಗೆ ಮೀಸಲಿಟ್ಟುಕೊಂಡರೆ ನಡೆದೀತು.

ಈ ಮೈದಾನದ ಒಂದು ಪಕ್ಕದಲ್ಲಿ ಧ್ವಜಾರೋಹಣ ವಿಧಿಗಾಗಿ ಕಾದಿರಿಸಿಕೊಳ್ಳಬೇಕು. ಮೈದಾನದ ಮೂಲೆಗಳನ್ನು ಪೆಟ್ರೋಲ್ ಮೂಲೆಗಳನ್ನಾಗಿ ಗುರುತಿಸಬೇಕು. ದಳದ ಸಭೆಯು ಪ್ರಾರಂಭವಾಗುವುದಕ್ಕೆ ಮುಂಚೆ ಹಾಗೂ ಸ್ಕೌಟುಗಳು ಮನೆಗಳಿಗೆ ಹಿಂತಿರುಗುವ ಮೊದಲು ಪೆಟ್ರೋಲುಗಳು ಅವರವರ ಮೂಲೆಗಳಲ್ಲಿ ಒಂದು ಗೂಡುತ್ತಾರೆ.

ದಳದ ಸಭೆಯು ಪ್ರಾರಂಭ ಆಗುವುದಕ್ಕೆ ಮುಂಚೆ ಸ್ಕೌಟುಗಳು, ಅವರವರ ಪೆಟ್ರೋಲು ಮೂಲೆಯಲ್ಲಿ ಕಲೆಯುತ್ತಾರೆ. ಪೆಟ್ರೋಲ್ ಲೀಡರು ಅವರನ್ನು ಸ್ವಾಗತಿಸುತ್ತಾನೆ. ದಳದ ಚಂದಾವಸೂಲಿ, ಸಮವಸ್ತ್ರದ ಸರಿಯಾದ ರೀತಿಯ ಧಾರಣೆಯ ಬಗ್ಗೆ ಪರೀಕ್ಷೆ, ಆದಿನದ ಅಭ್ಯಾಸಗಳ ಬಗ್ಗೆ ಬೇಕಾದ ವಸ್ತುಗಳನ್ನು ತರಲಾಗಿದೆಯೇ ಇಲ್ಲವೇ ಮುಂತಾದುವುಗಳ ಬಗ್ಗೆ ಗಮನ ಕೊಡಲಾಗುತ್ತದೆ. ದಳದ ಸಭೆಗೆ, ಇನ್ನೇನು ಒಂದೆರಡು ನಿಮಿಷಗಳಿವೆ ಎನ್ನುವಾಗ ಪೆಟ್ರೋಲ್ ಲೀಡರುಗಳು ತಮ್ಮ ಸ್ಕೌಟುಗಳನ್ನು ಧ್ವಜದ ಬಳಿಗೆ ಕರೆದೊಯ್ಯುತ್ತಾರೆ.

ಧ್ವಜದ ಬಳಿ ದಳದ ರಚನೆಯು ಕುದುರೆ ಲಾಳದ ಆಕಾರದಲ್ಲಿರುತ್ತದೆ. ನಿಲ್ಲುವಾಗ, ಸ್ಕೌಟುಗಳು ಪೆಟ್ರೋಲುವಾರು ಅವರವರ ಸ್ಥಾನಗಳಲ್ಲಿ ನಿಲ್ಲುತ್ತಾರೆ. ಪೆಟ್ರೋಲ್‌ಗಳಲ್ಲಿ, ಪೆಟ್ರೋಲ್ ಲೀಡರು ಬಲಗಡೆ (ಪ್ರಾರಂಭಕ್ಕೆ) ದ್ವಿತೀಯಕನು ಎಡಗಡೆ (ಕೊನೆಯಲ್ಲಿ) ಉಳಿದವರು ಸಂಖ್ಯಾನುಸಾರ ಮಧ್ಯದಲ್ಲಿ ನಿಲ್ಲುತ್ತಾರೆ.

ಲಾಳದ ಬುಡದ ಮಧ್ಯೆ ಧ್ವಜ ಸ್ತಂಭವಿರುತ್ತದೆ. ಧ್ವಜಸ್ತಂಭಕ್ಕೆ 3 ಹೆಜ್ಜೆ ಹಿಂದೆ ಒಂದು ನೇರ ರೇಖೆಯಲ್ಲಿ, ಲಾಳದ ಬುಡ ರೇಖೆಗೆ ಸಮಾನಾಂತರವಾಗಿ, ಸ್ಕೌಟ್ ಮಾಸ್ಟರರು ಮೊದಲು, ಬಳಿಕ ಅವರ ಎಡಕ್ಕೆ ಸಹಾಯಕ ಸ್ಕೌಟ್ ಮಾಸ್ಟರ್‌ಗಾಗಿ ಖಾಲಿ ಜಾಗ ನಂತರ ಇತರ ಸ್ಕೌಟರುಗಳು ನಿಂತಿರುತ್ತಾರೆ.

ನಿಗದಿತ ಸಮಯಕ್ಕೆ ಸರಿಯಾಗಿ ಸಹಾಯಕ ಸ್ಕೌಟ್ ಮಾಸ್ಟರರು ಇಲ್ಲವೇ ದಳದ ನಾಯಕನು ದಳದ ಜವಾಬ್ದಾರಿ ವಹಿಸಿಕೊಂಡು ಸಭೆಯನ್ನು ಸರಿಯಾಗಿ ನಿಲ್ಲಿಸುತ್ತಾರೆ. ಆ ಬಳಿಕ ಸಾವಧಾನ್‌ಗೆ ಆದೇಶಿಸಿ, ಸ್ಕೌಟ್ ಮಾಸ್ಟರರಿಗೆ ವಂದಿಸಿ, ದಳದ ಜವಾಬ್ದಾರಿಯನ್ನು ಅವರಿಗೆ ಒಪ್ಪಿಸುತ್ತಾರೆ.

ಸಹಾಯಕ ಸ್ಕೌಟ್ ಮಾಸ್ಟರರಾದರೆ ಖಾಲಿ ಇರುವ ಜಾಗಕ್ಕೆ ಮುನ್ನಡೆಯುತ್ತಾರೆ. ದಳನಾಯಕನಾದರೆ ಲಾಳದ ಬಲಕೊನೆ ಮೊದಲ ಸ್ಥಾನಕ್ಕೆ ಧಾವಿಸುತ್ತಾರೆ.

ದಳವನ್ನು ವಹಿಸಿಕೊಂಡ ಬಳಿಕ ಸ್ಕೌಟ್ ಮಾಸ್ಟರರು ದಳದ ಸಭೆಯ ವಿಧಿವತ್ತಾದ, ಕಾರ್ಯಕ್ರಮವನ್ನು ಪ್ರಾರಂಭಿಸುತ್ತಾರೆ. ಇದರಲ್ಲಿ 1) ಪ್ರಾರ್ಥನೆ 2) ಧ್ವಜಾರೋಹಣ ಮತ್ತು 3) ಪರೀಕ್ಷೆ ಬರುತ್ತವೆ. ಈ ಕಾರ್ಯಕ್ರಮವನ್ನು ಸ್ಕೌಟ್ ಮಾಸ್ಟರರೇ ನಡೆಸಬೇಕು. ಇದಿಷ್ಟಕ್ಕೆ 5 ನಿಮಿಷ ಹಿಡಿಯುತ್ತದೆ. ಇದಾದ ಬಳಿಕ ಚಂದಾ ಸಂಗ್ರಹಣೆ, ಹಾಜರಿ ಇತ್ಯಾದಿ ಮುಗಿಸಿ, ಸಭೆಯ ಮುಖ್ಯಕಾರ್ಯ ಭಾಗವನ್ನು ಮುಂದುವರೆಸಲಾಗುತ್ತದೆ.

## ದಳದ ಸಭೆಯ ಕಾರ್ಯಕ್ರಮವು ಹೆಚ್ಚು ಕಡಿಮೆ ಹೀಗಿರಬಹುದು

| | | |
|---|---|---|
| 1. ವಿಧಿವತ್ತಾದ ಪ್ರಾರಂಭ: | ಪ್ರಾರ್ಥನೆ, ದಳಪರಿಶೀಲನೆ ಧ್ವಜವಂದನೆ | 5 ನಿಮಿಷಗಳು |
| 2. ಆಟಗಳು : | ಸಾಮಾನ್ಯ ಆಟಗಳು, ತಂಡ ಆಟಗಳು ಇತರೆ | 10 ನಿಮಿಷಗಳು |
| 3. ಪೆಟ್ರೋಲ್ ಚಟುವಟಿಕೆಗಳು: | i) ತಾನಿಲ್ಲದಿರುವಾಗ ಏನು ಮಾಡಬೇಕು ಎಂಬುದನ್ನು ಬರೆದಿರುವ ಒಂದು ಕಾರ್ಡನ್ನು ಪೆಟ್ರೋಲ್ ಲೀಡರು ದ್ವಿತೀಯಕನಿಗೆ ಕೊಡುತ್ತಾನೆ. | |
| | ii) ಸಹಾಯಕ ಸ್ಕೌಟ್ ಮಾಸ್ಟರರ ಬಳಿ ಸೂಕ್ತ ಸಲಹೆಗಳನ್ನು ಪಡೆಯಲು ಹೊರಟು ಹೋಗುತ್ತಾನೆ. | |
| | iii) ದ್ವಿತೀಯಕನು ಕಾರ್ಡ್‌ನಲ್ಲಿ ನೀಡಿರುವ ತಿಳುವಳಿಕೆಯ ಪ್ರಕಾರ ಕಾರ್ಯಕ್ರಮ ನಡೆಸುತ್ತಾನೆ. | 15 ನಿಮಿಷಗಳು |

| | | |
|---|---|---|
| 4. ರಿಲೇ ಆಟಗಳು ಇತ್ಯಾದಿ: | ಸ್ಕೌಟ್ ಕೌಶಲಗಳಲ್ಲಿ ಸ್ಕೌಟುಗಳಿಗೆ ತರಬೇತಿ ನೀಡುವುದು ಇದರ ಉದ್ದೇಶವಾಗಿದೆ. | 10 ನಿಮಿಷಗಳು |
| 5. ಪೆಟ್ರೋಲ್ ಅಭ್ಯಾಸಗಳು: | i) ಪೆಟ್ರೋಲುಗಳು, ತಮ್ಮದೇ ಆದ ಮೂಲೆಯಲ್ಲಿ ಸಭೆ ಸೇರುತ್ತಾರೆ<br>ii) ಪೆಟ್ರೋಲ್ ಲೀಡರು ಸಭೆಯನ್ನು ನಿರ್ವಹಿಸುತ್ತಾನೆ.<br>iii) ದ್ವಿತೀಯಕನು ಸಹಾಯ ಮಾಡುತ್ತಾನೆ.<br>iv) ಸ್ಕೌಟಿಂಗ್‌ನ ವಿವಿಧ ಅಂಶಗಳನ್ನು ಸ್ಕೌಟುಗಳು ಕಲಿಯುತ್ತಾರೆ.<br>v) ಪೆಟ್ರೋಲ್ ಲೀಡರು ಪ್ರತಿಬಾರಿ ಹೊಸಹೊಸ ವಿಷಯಗಳನ್ನು ತಿಳಿಸುತ್ತಾನೆ. | 10 ನಿಮಿಷಗಳು |
| 6. ಆಟ ಸ್ಪರ್ಧೆ : | ಪೆಟ್ರೋಲ್ ಲೀಡರು ತಿಳಿಸಿಕೊಟ್ಟ ವಿಷಯದ ಬಗ್ಗೆ | 10 ನಿಮಿಷಗಳು |
| 7. ಸ್ಕೌಟ್ ಮಾಸ್ಟರರಿಂದ: | ಉದಂತ/ತಿಳಿವಳಿಕೆ<br>ಪದಕ ಪ್ರಧಾನ / ದೀಕ್ಷಾ ಸಮಾರಂಭ | 10 ನಿಮಿಷಗಳು. |
| 8. ಶೈಕ್ಷಣಿಕ ಆಟಗಳು: | ಹಾಡುಗಳು, ಕೂಗಾಟಗಳು | 10 ನಿಮಿಷಗಳು |
| 9. ವಿಧಿವತ್ತಾಗಿ ಸಮಾರೋಪ: | i) ಮನೆಗೆ ಹಿಂದಿರುಗುವ ಮುನ್ನ ಸ್ಕೌಟ್‌ಗಳ ಪರಿಶೀಲನೆ (ಚೊಕ್ಕಟವಾಗಿದ್ದಾರೆಯೇ ಇಲ್ಲವೇ ಇತ್ಯಾದಿ)<br>ii) ಸ್ಕೌಟ್ ಮಾಸ್ಟರರು ತಿಳಿಸಬೇಕಾಗಿರುವ ಪ್ರಕಟಣೆಗಳು<br>iii) ರಾಷ್ಟ್ರಗೀತೆ<br>iv) ಧ್ವಜಾವರೋಹಣ | 10 ನಿಮಿಷಗಳು |
| | **ಮೊತ್ತ** | **90 ನಿಮಿಷಗಳು** |

ಕಾರ್ಯಕ್ರಮದ ಪಟ್ಟಿಯನ್ನು ಅವಲೋಕಿಸಿದರೆ, ಹೇಗೆ ಆಟಗಳು, ತಿಳುವಳಿಕೆ, ಶಿಕ್ಷಣ ಅಭ್ಯಾಸ ಇವುಗಳೆಲ್ಲವೂ ಒಂದಕ್ಕೊಂದು ಪೂರಕವಾಗಿ ಬೆಸೆದುಕೊಂಡಿವೆ ಎಂಬುದು ತಿಳಿದುಬರುತ್ತದೆ.

ಕಾರ್ಯಕ್ರಮ ನಡೆಸುವಾಗ ಗಮನಿಸಬೇಕಾದ ಇತರ ಅಂಶಗಳು ಹೀಗಿವೆ.

1) ದಳದ ಸಭೆಯನ್ನು ವಿಧಿವತ್ತಾಗಿ ಪ್ರಾರಂಭಿಸುವುದು ಮತ್ತು ಕೊನೆಗೊಳಿಸುವುದು ಬಹು ಮುಖ್ಯವಾದುದು.

2) ಪ್ರಾರಂಭದಲ್ಲಿ ನೀಡುವ ಆಟಗಳು, ಸ್ಕೌಟುಗಳಿಗೆ, ದೈಹಿಕವಾಗಿ ಸಾಕಷ್ಟು ಅಲಸಿಕೆಯನ್ನುಂಟುಮಾಡಿ, ಮುಂದಿನ ತಿಳುವಳಿಕೆ ನೀಡುವ ಸಮಯದಲ್ಲಿ, ಅವರು ಮಾನಸಿಕವಾಗಿ ಜಾಗ್ರತರಾಗಿರುವಂತೆ ಮಾಡುತ್ತದೆ.

3) ಪೆಟ್ರೋಲ್ ಮೂಲೆಗಳಲ್ಲಿ ನಡೆಸುವ ಪೆಟ್ರೋಲ್ ಸಭೆ, ಕಾರ್ಯಕ್ರಮ, ಇವು ಪೆಟ್ರೋಲ್ ಪದ್ಧತಿಯ ಆಡಳಿತ ವ್ಯವಸ್ಥೆಯನ್ನು ಒತ್ತಿ ಹೇಳುವುದಲ್ಲದೆ, ನಾಯಕತ್ವ ವಹಿಸುವ ಮತ್ತು ಜವಾಬ್ದಾರಿ ಹೊರುವ ಬಗ್ಗೆ ಬಾಲಕರಿಗೆ ಶಿಕ್ಷಣ ದೊರಕುತ್ತದೆ ಎಂಬ ಅಂಶವನ್ನು ಒತ್ತಿ ಹೇಳುತ್ತದೆ.

4) ಸಹಾಯಕ ಸ್ಕೌಟ್ ಮಾಸ್ಟರರು ಪೆಟ್ರೋಲ್ ಲೀಡರುಗಳಿಗೆ ತಿಳಿವಳಿಕೆ ನೀಡುವ ಅಂಶವು, ಸ್ಕೌಟ್ ಮಾಸ್ಟರರು ತನ್ನ ಸಹಾಯಕರೊಡನೆ, ತನ್ನ ಮುಖ್ಯ ಜವಾಬ್ದಾರಿಯನ್ನು ಹಂಚಿಕೊಳ್ಳುವುದನ್ನು ತೋರಿಸುತ್ತದೆ.

5) ಸ್ಕೌಟ್ ಮಾಸ್ಟರರು ನೀಡುವ ಉದಂತವು (Yarn) ಸಾಮಾನ್ಯವಾಗಿ ಪದಕ ಪರೀಕ್ಷಾಂಶಗಳಿಗೆ ಸೀಮಿತವಾಗದೆ ಇತರೆಯ ಯಾವುದೇ ಸಾಧಾರಣ ವಿಷಯುಗಳ ಬಗ್ಗೆಯೂ ಇರುತ್ತದೆ. ಸ್ಕೌಟ್ ಮಾಸ್ಟರರು ಇಡೀ ದಳವನ್ನುದ್ದೇಶಿಸಿ ಮಾತನಾಡುತ್ತಾರೆ. ಇದರಿಂದ ಸ್ಕೌಟ್ ಮಾಸ್ಟರರು ದಳದ ಎಲ್ಲಾ ಸ್ಕೌಟುಗಳಿಗೂ ನಿಕಟವರ್ತಿಗಳಾಗುವ ಸಾಧ್ಯತೆ ಹೆಚ್ಚುತ್ತದೆ.

6) ಸಭೆಯ ಕೊನೆಯಲ್ಲಿ ನಡೆಸುವ ಪರಿಶೀಲನೆಯು, ಮನೆಗೆ ಹಿಂದಿರುಗುವಾಗ, ಸಮಯಕ್ಕೆ ಸರಿಯಾಗಿ, ಸ್ವಚ್ಛವಾಗಿ ಹಿಂದಿರುಗುವರೆಂಬುದನ್ನು ಖಚಿತಪಡಿಸುತ್ತದೆ. ಇದರಿಂದ ತಾಯಿತಂದೆಯರಿಗೆ ತಮ್ಮ ಮಕ್ಕಳ ಸುರಕ್ಷತೆಯ ಬಗ್ಗೆ ನೆಮ್ಮದಿ ಇರುತ್ತದೆ. ಪದಕ ಪ್ರದಾನ, ದೀಕ್ಷಾ ಸಮಾರಂಭ ಇವುಗಳಿಗೆ ಸ್ಕೌಟುಗಳು, ಸರಿಯಾಗಿ ಸಮವಸ್ತ್ರ ಧರಿಸುವುದು ಖಾತ್ರಿಯಾಗುತ್ತದೆ.

ಸಹಾಯಕ ಸ್ಕೌಟ್ ಮಾಸ್ಟರರ ಸಹಾಯಪಡೆದು, ಸ್ಕೌಟ್‌ಮಾಸ್ಟರರು ಕಾರ್ಯಕ್ರಮವನ್ನು ರೂಪಿಸುತ್ತಾರೆ. ಗೌರವಾನ್ವಿತ ನ್ಯಾಯ ಸಭೆಯಲ್ಲಿ ಅನುಮೋದಿತವಾದ ವಾರ್ಷಿಕ ಕಾರ್ಯಕ್ರಮ ಹಾಗೂ ಆಗಾಗ್ಗೆ ಬದಲಾಯಿಸಲಾದ ಕಾರ್ಯಕ್ರಮಕ್ಕನುಗುಣವಾಗಿ ಅದು ರೂಪಿತವಾಗಿರುತ್ತದೆ. ಸ್ಕೌಟರುಗಳೇ ಕಾರ್ಯಕ್ರಮವನ್ನು ರೂಪಿಸಬೇಕಾದುದು ಅತ್ಯವಶ್ಯಕ. ಸೂಕ್ಷ್ಮ (ವಿವರವಾದ) ಕಾರ್ಯಕ್ರಮಗಳನ್ನು ರೂಪಿಸುವಾಗ, ಪೆಟ್ರೋಲ್ ಲೀಡರುಗಳು ಜೊತೆಯಲ್ಲಿರುವುದು. ಒಳ್ಳೆಯದಲ್ಲ. ಹಾಗಾದರೆ ಮಾತ್ರ ಕಾರ್ಯಕ್ರಮವು ಸಾಕಷ್ಟು ಹೊಸತನವನ್ನುಳಿಸಿಕೊಳ್ಳುತ್ತದೆ. ಕಾರ್ಯಕ್ರಮವು ಸ್ಕೌಟುಗಳಿಗೂ, ಪೆಟ್ರೋಲ್ ಲೀಡರುಗಳಿಗೂ, ಹೊಸತಾಗಿಯೂ, ಸ್ವಾರಸ್ಯಕರವಾಗಿಯೂ, ಇರಬೇಕಾದುದು ಮುಖ್ಯ. ಕಾರ್ಯಕ್ರಮವನ್ನು ವಿವರವಾಗಿ ರೂಪಿಸುವಾಗ, ಪೆಟ್ರೋಲ್ ಲೀಡರುಗಳು ಜೊತೆಯಲ್ಲಿದ್ದರೆ ಹೊಸತನವೂ, ಸ್ವಾರಸ್ಯವೂ ಹೋಗಿಬಿಡುತ್ತದೆ ಮತ್ತು ಅದು ನಿಸ್ಸತ್ವವಾಗಿಯೂ, ನಿರುಪಯುಕ್ತವಾಗಿಯೂ ತೋರುತ್ತದೆ.

ಸಾಧಾರಣ ಆಟಗಳು, ತಂಡದ ಆಟಗಳು, ಮಜಲು (ರಿಲೇ) ಆಟಗಳು ಜಟ್ಟು ಆಟಗಳು (Partner Games) ಸ್ಪರ್ಧಾತ್ಮಕ ಆಟಗಳು ಇತ್ಯಾದಿಗಳ ಬಗ್ಗೆಯೂ, ಸ್ಕೌಟ್ ಮಾಸ್ಟರರು, ತಮ್ಮ ಸಹಾಯಕರಿಗೆ ತಿಳುವಳಿಕೆ ನೀಡಲು ಹೇಳಬಹುದಾದ ವಿಷಯುಗಳು, ಅವುಗಳ ತಯಾರಿ, ಇತ್ಯಾದಿಯಾಗಿ, ಈ ಕೆಳಗೆ ಕೆಲವು ಉದಾಹರಣೆಗಳನ್ನು ನೀಡಲಾಗಿದೆ.

**I. ಸಾಧಾರಣ ಆಟಗಳು :**

1. ಒಬ್ಬ ಸ್ಕೌಟ್‌ಗೆ ಕಣ್ಣುಗಳನ್ನು ಕಟ್ಟಿರುತ್ತಾರೆ. ಅವನ ಕೈಯಲ್ಲಿ ಕೈಗೋಲಿನಂತೆ ಸುರುಳಿ ಸುತ್ತಿದ ವಾರಪತ್ರಿಕೆ ಇರುತ್ತದೆ. ಒಂದು ಮರದ ಕೊಂಬೆಗೆ ಹಗ್ಗವನ್ನು ಕಟ್ಟಿ, ಒಂದು ನಿರ್ದಿಷ್ಟ ಪ್ರದೇಶದಲ್ಲಿ ಅವನು ಆ ಹಗ್ಗವನ್ನು ಹಿಡಿದು ಓಡಾಡುತ್ತಾ ಅದೇ ಪ್ರದೇಶದಲ್ಲಿ ಅದೇ ರೀತಿ ಹಗ್ಗ ಹಿಡಿದು ಓಡಾಡುತ್ತಿರುವ ಇತರ ಸ್ಕೌಟುಗಳನ್ನು ಹೊಡೆಯಲು ಪ್ರಯತ್ನಿಸುತ್ತಾನೆ. ಇತರ ಸ್ಕೌಟುಗಳು ಓಡಾಡುವಾಗ, ಅವನಿಗೆ ತಾವು ಇರುವುದನ್ನು ತಿಳಿಯಪಡಿಸಲು ಒಂದು (ನಿಗದಿಪಡಿಸಿದ) ಹಾಡನ್ನು ಹಾಡುತ್ತಿರುತ್ತಾರೆ. ಹೊಡೆತ ತಿಂದವರು ಆಟದಿಂದ ಹೊರಗೆ.

2. ಒಂದು ವೃತ್ತದೊಳಗೆ ಹಲವಾರು ಸಾಮಾನುಗಳನ್ನು ಹರಡಲಾಗಿರುತ್ತದೆ. ಎಲ್ಲಾ ಸ್ಕೌಟುಗಳೂ ವೃತ್ತದ ಹೊರಗೆ ನಿಂತಿರುತ್ತಾರೆ. ಒಬ್ಬ ಸ್ಕೌಟು ವೃತ್ತದ ಮಧ್ಯೆ. ಕೊನೆಯಲ್ಲಿ ಧಾನ್ಯ ತುಂಬಿದ ಕೈಚೀಲವನ್ನು ಕಟ್ಟಿದ ದಾರವನ್ನು ಹಿಡಿದು ನಿಂತಿರುತ್ತಾನೆ. ಆಟವು ಪ್ರಾರಂಭವಾಯಿತೆಂದ ಕೂಡಲೇ ಮಧ್ಯೆ ಇರುವ ಸ್ಕೌಟು ದಾರವನ್ನು ತೂಗಿ ನಿಧಾನವಾಗಿ ತಿರುಗಿಸುತ್ತಾ ನಿಂತಲ್ಲಿಯೇ ಸುತ್ತು ಹಾಕುತ್ತಾನೆ, ಹೊರಗಿರುವ ಸ್ಕೌಟುಗಳು ವೃತ್ತದ ಒಳಕ್ಕೆ ನುಗ್ಗಿ ವಸ್ತುಗಳನ್ನು ಸಂಗ್ರಹಿಸಲು ಪ್ರಯತ್ನಿಸುತ್ತಾರೆ. ಹಾಗೆ ಮಾಡುವಾಗ ತೂಗುದಾರವು ತಗುಲಿದ ಸ್ಕೌಟು ಆಟದಿಂದ ಹೊರಗೆ.

3. ಒಂದು ದೊಡ್ಡ ವೃತ್ತದ ಮಧ್ಯೆ ಒಂದು ಪೆಟ್ರೋಲ್ ಸ್ಕೌಟುಗಳಿರುತ್ತಾರೆ. ಉಳಿದ ಪೆಟ್ರೋಲ್‌ಗಳ ಸ್ಕೌಟುಗಳು ವೃತ್ತದ ಹೊರಗಿನಿಂದ ಒಳಗಿರುವವರಿಗೆ ಫುಟ್‌ಬಾಲನ್ನು ಎಸೆದು ಹೊಡೆಯಲೆತ್ನಿಸುತ್ತಾರೆ. ಒಳಗಿನ ಪೆಟ್ರೋಲ್ ಸ್ಕೌಟ್‌ಗಳು ತಪ್ಪಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ಚೆಂಡು ತಗುಲಿದ ಸ್ಕೌಟು ಆಟದಿಂದ ಹೊರಗೆ, ಎಲ್ಲಾ ಸ್ಕೌಟುಗಳೂ ಹೊರಗಾಗುವವರೆಗೂ ಆಟವು ಮುಂದುವರೆಯುತ್ತದೆ.

4. ಎಲ್ಲರೂ ಮೈದಾನದ ಒಂದು ಕಡೆ ನಿಲ್ಲುತ್ತಾರೆ. ಮಧ್ಯದ ಗೆರೆಯ ಮೇಲೆ ಒಬ್ಬ ಸ್ಕೌಟ್ ನಿಲ್ಲುತ್ತಾನೆ. ಮಧ್ಯೆ ನಿಂತ ಸ್ಕೌಟು, ಉಳಿದವರು ಎದುರುಗಡೆಗೆ ಜಾಗ ಬದಲಾಯಿಸಲು ಸವಾಲ್ ಮಾಡುತ್ತಾನೆ. ಆಗ ಸ್ಕೌಟುಗಳು ಮುನ್ನುಗ್ಗುತ್ತಾರೆ. ಮಧ್ಯರೇಖೆಯನ್ನು ಹಾಯುವಾಗ ಎಷ್ಟು ಜನರನ್ನು ಅವನು ಮುಟ್ಟುತ್ತಾನೆಯೋ, ಅವರೆಲ್ಲರೂ ಅವನ ಜೊತೆ ಉಳಿದವರಿಗೆ ಅಡ್ಡ ಹಾಕುತ್ತಾರೆ. ಹೀಗೆ ಮುಟ್ಟಿದವರು ಜೊತೆ ಸೇರುವುದು, ಕೊನೆಯಲ್ಲಿ ಒಬ್ಬ ಉಳಿಯುವವರೆಗೆ ಆಟವು ಮುಂದುವರೆಯುತ್ತದೆ.

5. ಇಬ್ಬರು ಪರಸ್ಪರ ಕೈಹಿಡಿದುಕೊಂಡು, ಒಂದು ಗೂಡನ್ನು ಮಾಡುತ್ತಾರೆ. ಆ ಗೂಡಿನೊಳಕ್ಕೆ ಒಂದು ಸಿಂಹವು (3ನೆಯ ಸ್ಕೌಟು ಸೇರಿಕೊಳ್ಳುತ್ತದೆ. ಹೀಗೆ ದಳದವರೆಲ್ಲರೂ ಸೇರಿ, ಗೂಡುಗಳು ಸಿಂಹಗಳಾಗುತ್ತಾರೆ. ಅವಶ್ಯಕತೆ ಎನಿಸಿದರೆ ಸಹಾಯಕ ಸ್ಕೌಟ್ ಮಾಸ್ಟರರೂ ಆಟಕ್ಕೆ ಸೇರಬಹುದು. ಸ್ಕೌಟ್ ಮಾಸ್ಟರು ಬದಲಿ ಕೂಗಿದ ಕೂಡಲೇ, ಸಿಂಹಗಳು ಗೂಡು ಬದಲಾಯಿಸುತ್ತವೆ. ಗೂಡನ್ನು ಸೇರದೇ ಇದ್ದ, ಸೇರಲು ವಿಳಂಬವಾದ ಸಿಂಹಗಳಿಗೆ ಒಂದು ಅಂಕ ಕಡಿಮೆ ಆಗುತ್ತದೆ. ಆಟವು ಮುಂದುವರೆದಂತೆ, ನಿಂತಿರುವ ಸ್ಕೌಟುಗಳು ಸಿಂಹಗಳಾಗುತ್ತಾರೆ. ಹೀಗೆ ಒಬ್ಬರಾದ ಮೇಲೆ ಒಬ್ಬರಂತೆ ಎಲ್ಲರೂ ಸಿಂಹಗಳಾಗುವವರೆಗೆ ಆಟವು ಮುಂದುವರೆಯುತ್ತದೆ.

6. ಇಬ್ಬರನ್ನು ಬಿಟ್ಟು ಎಲ್ಲಾ ಸ್ಕೌಟುಗಳೂ, ಎರಡೂಕಡೆ ಕೈಚಾಚಿ, ಒಬ್ಬರಿಗೊಬ್ಬರು ಹಿಡಿದುಕೊಂಡು ಚೌಕಾಕಾರದಲ್ಲಿ ನಿಲ್ಲುತ್ತಾರೆ. ಲೀಡರು ಅಥವಾ ಸ್ಕೌಟ್ ಮಾಸ್ಟರರು ಪ್ರತಿ ಬಾರಿ 'ಬದಲಿ' ಹೇಳಿದಾಗಲೂ ಬಲಗಡೆ ತಿರುಗುತ್ತಾರೆ. ಹಾಗಾಗಿ ಒಮ್ಮೆ ಕೈಹಿಡಿದು ಅಡ್ಡಬಂದಂತೆ ಒಮ್ಮೆ ತಪ್ಪಿಸಿಕೊಳ್ಳಲು ದಾರಿಮಾಡಿಕೊಟ್ಟಂತೆ ಆಗುತ್ತದೆ.

ಚೌಕಾಕಾರಕ್ಕೆ ಸೇರದಿರುವ ಇಬ್ಬರು ಸ್ಕೌಟುಗಳಲ್ಲಿ ಒಬ್ಬ ಕಳ್ಳ, ಇನ್ನೊಬ್ಬ ಪೊಲೀಸ್. ಪೊಲೀಸನು ಕಳ್ಳನನ್ನು ಹಿಡಿಯಬೇಕು. ಕೈಗಳು ಅಡ್ಡಬಂದಾಗ ಸಾಲಿನ ಪಕ್ಕದಲ್ಲಿ ಅಥವಾ ಒಳಗಡೆ ಓಡಾಡಬಹುದು. ಕೈಗಳ ಕೆಳಗೆ ತೂರುವಂತಿಲ್ಲ. ದಾರಿಮಾಡಿಕೊಟ್ಟಾಗ ಕಳ್ಳನಿಗೆ ತಪ್ಪಿಸಿಕೊಳ್ಳಲು ಅನುಕೂಲವಾಗುತ್ತದೆ. ಸ್ಕೌಟ್ ಮಾಸ್ಟರರು ವಿಚಕ್ಷಣೆಯಿಂದ ಬದಲಿ ಹೇಳಲು, ಸೀಟಿ ಊದುತ್ತಿರಬೇಕು.

**II. ತಂಡದ ಆಟಗಳು :**

1. **ಡೆಕ್ ಟೆನ್ನಿಸ್:** ಮೈದಾನದ ಮಧ್ಯೆ 5 ಅಡಿ ಎತ್ತರದಲ್ಲಿ ನೆಟ್ ಕಟ್ಟಲಾಗಿರುತ್ತದೆ. ನೆಟ್‌ನ ಎರಡೂ ಕಡೆ ಒಂದೊಂದು ತಂಡದಂತೆ, ಆಟಗಾರರು ನಿಲ್ಲುತ್ತಾರೆ. ಈಗ ಹಗ್ಗದ ಒಂದು ಸಿಂಬಿಯನ್ನು (ರೋಪ್‌ರಿಂಗ್) ಈಕಡೆಯಿಂದ ಆಕಡೆಗೆ ಎಸೆಯಬೇಕು. ಎಸೆಯುವಾಗ ಅದು ಕೆಳಗೆ ಬಿದ್ದರಾಗಲೀ, ಆಟಗಾರನ ಕಡೆಯೇ ಬಿದ್ದರಾಗಲೀ ಅಥವಾ ಎದುರು ಕಡೆ ಗುರುತಿನಿಂದ ಹೊರಗೆ ಬಿದ್ದರಾಗಲೀ ನೆಟ್‌ಗೆ ತಗುಲಿದಾರಾಗಲೀ ಆ ಆಟಗಾರನು ಆಟದಿಂದ ಹೊರಗೆ. ಯಾವ ಕಡೆ ಹೆಚ್ಚು ಆಟಗಾರರು ಹೆಚ್ಚು ಹೊತ್ತು ಆಡಬಲ್ಲರೋ ಅವರು ಗೆದ್ದಂತೆ.

2. **ರೌಂಡರ್ಸ್:** ಎರಡು ತಂಡಗಳು. ಒಂದು ತಂಡ ದಾಂಡುಗಾರರದು (Batting) ಇನ್ನೊಂದು ಆಟ ಕಾಯುವವರದು (fielding) ದಾಂಡುಗಾರರು ಮೂಲತಾಣದಲ್ಲಿ ಸಾಲಾಗಿ ನಿಲ್ಲುತ್ತಾರೆ. ಒಂದು ಷಟ್ಕೋನಾಕೃತಿಯ ಕ್ಷೇತ್ರದಲ್ಲಿ 30 ಮೀಟರ್‌ಗಳ ಅಂತರದಲ್ಲಿ ಇನ್ನು 4 ತಾಣಗಳನ್ನು ಸ್ಥಳಾವಕಾಶ ಮತ್ತು ಆಟಗಾರರ ಆಧಾರದ ಮೇಲೆ ಗುರುತಿಸಲಾಗಿರುತ್ತದೆ. ಚೆಂಡನ್ನೆಸೆಯುವಾಗ ಭುಜಕ್ಕೂ, ಮೊಣಕಾಲಿಗೂ ಮಧ್ಯದ ಅಂತರದಲ್ಲಿರುವಂತೆ ಎಸೆಯಬಹುದು. ಒಮ್ಮೆಗೆ 3 ಬಾರಿ ಎಸೆಯಬಹುದು. ಚೆಂಡನ್ನು ಹೊಡೆದ ಕೂಡಲೇ, ದಂಡುಗಾರನು ಮೂಲತಾಣದಿಂದ ಓಡುತ್ತಾ ವರ್ತುಲಾಕಾರದಲ್ಲಿ ಇತರ 4 ತಾಣಗಳನ್ನು ಕ್ರಮಿಸುತ್ತಾನೆ. ಎರಡು ತಾಣಗಳ ಮಧ್ಯೆ ಇರುವಾಗ ಅವನಿಗೆ ಚೆಂಡು ತಗುಲುವಂತೆ ಹೊಡೆದರೆ ಅವನು ಆಟದಿಂದ ಹೊರಗೆ. ಯಾರು ಇತರ 5 ತಾಣಗಳನ್ನು ಕ್ರಮಿಸಿ ಮೂಲತಾಣಕ್ಕೆ ಬರುತ್ತಾರೆಯೋ ಅವರು ಒಂದು ರೌಂಡರ್ ಸಾಧಿಸಿದಂತೆ.

   ಅಕಸ್ಮಾತ್ ಆಟಗಾರನಿಗೆ ಚೆಂಡು ತಗುಲಿ, ಅವನು ಆಟದಿಂದ ಹೊರಗಾದರೆ ಅವನ ತಂಡದಲ್ಲಾರಾದರೂ ರೌಂಡರ್ ಸಾಧಿಸಿದ್ದರೆ, ಆ ಬಲದ ಮೇಲೆ ಅವನು ಆಟಕ್ಕೆ ವಾಪಸ್ಸಾಗಬಹುದು. ಒಂದು ತಾಣದಲ್ಲಿ ಒಮ್ಮೆಗೆ ಒಬ್ಬ ದಾಂಡುಗಾರನು ಮಾತ್ರ ಇರಬಹುದು. ಹಾಗೇನಾದರೂ ಹೆಚ್ಚಾದರೆ ಕೊನೆಯಲ್ಲಿ ಬಂದವನನ್ನು ಬಿಟ್ಟು ಉಳಿದವರು ಆಟದಿಂದ ಹೊರಗಾಗುತ್ತಾರೆ. ಚೆಂಡು ಎಸೆಯುವನ ಕೈ ಸೇರುತ್ತಿದ್ದಂತೆಯೇ, ಅದಕ್ಕೆ ದಾಂಡುಗಾರನಿಗೆ ಹೊಡೆಯುವ ಶಕ್ತಿ ಹೋಗಿಬಿಡುತ್ತದೆ. ಹಾಗೇನಾದರೂ

ಆದರೆ ದಾಂಡುಗಾರರು ಯಾವ ತಾಣದಲ್ಲಿದ್ದಾರೆಯೋ, ಅಲ್ಲೇ ನಿಲ್ಲಬೇಕು. ಪುನಃ ಮೂಲತಾಣದಿಂದ ಮತ್ತೊಬ್ಬ ದಾಂಡುಗಾರನು ಓಡಲು ಪ್ರಾರಂಭಿಸುವವರೆಗೂ ಕದಲಬಾರದು. ದಾಂಡಿನಿಂದ ಹೊಡೆದ ಚೆಂಡನ್ನು ಕ್ಯಾಚ್ ಹಿಡಿದರೆ, ಆಗ ಎಲ್ಲಾ ದಾಂಡುಗಾರರೂ, ಆಟದಿಂದ ಹೊರಗೆ, ಆಟದ ನಿಯಮಗಳನ್ನು ಬದಲಾಯಿಸಿಕೊಳ್ಳಬಹುದು. ಆದರೆ ಮುಂಚಿತವಾಗಿ ಚರ್ಚೆ ಮಾಡಿ ಒಮ್ಮತಕ್ಕೆ ಬಂದು ಅದರಂತೆಯೇ ಆಡಬೇಕು.

3. **ಕೈಗಾಡಿ ಚೆಂಡಾಟ:** ಅವಶ್ಯಕ ವಸ್ತುಗಳು – ಒಂದು ಫುಟ್‌ಬಾಲ್ ಮತ್ತು ಗೋಲುಗಳನ್ನು ಗುರುತಿಸಲು 4 ಗುಜ್ಜು ಮರದ ತುಂಡುಗಳು. ಇಬ್ಬಿಬ್ಬರು ಕೈಗಾಡಿಗಳನ್ನು ಮಾಡಿಕೊಳ್ಳಲಿ. ಫುಟ್‌ಬಾಲ್ ಆಟದಂತೆ ಮೈದಾನದಲ್ಲಿ ಕೈಗಾಡಿಗಳ ರಚನೆ ಆಗಲಿ. ಕೈಗಾಡಿ ಮಾತ್ರ ತನ್ನ ಕೈಗಳಿಂದ ಚೆಂಡನ್ನೆಸೆಯುವುದು, ಬೇರೆ ಆಟಗಾರನಿಗೆ ರವಾನಿಸುವುದು, ಗೋಲು ಹೊಡೆಯುವುದು ಇತ್ಯಾದಿ ಮಾಡಬಹುದು. ಕೈಗಾಡಿ ಹಿಡಿಯುವವರು, ಗಾಡಿಹಿಡಿದು ಹೋಗುವುದು ಬಿಟ್ಟು, ಬೇರೇನೂ ಮಾಡುವಂತಿಲ್ಲ. ಚೆಂಡು ನೆಲದ ಮೇಲೇ ಚಲಿಸುತ್ತದೆ. ಹೆಚ್ಚು ಗೋಲುಗಳನ್ನು ಹೊಡೆದ ತಂಡ ಗೆದ್ದಂತೆ. ಪ್ರತಿಗೋಲಿನ ಬಳಿಕ ಕೈಗಾಡಿ ಮತ್ತು ಗಾಡಿ ಹಿಡಿಯುವವರು ಬದಲಿ ಮಾಡಿಕೊಳ್ಳಬಹುದು. ಆಲಸ್ಯಕರವಾದುದರಿಂದ ಈ ಆಟವನ್ನು ಬಹಳ ಹೊತ್ತು ಆಡಬಾರದು.

4. **ಬಕೆಟ್ ಕ್ರಿಕೆಟ್** : 5–6 ಮೀ ಉದ್ದದ ನಾಭಿ ರೇಖೆಯಿರುವ ವೃತ್ತದ ಮಧ್ಯದಲ್ಲಿ ಒಂದು ಬಕೆಟ್ ಬೋರಲು ಹಾಕಿ. ಅದರ ಮೇಲೊಬ್ಬ ದಾಂಡುಗಾರನು 40 ಸೆಂ. ಮೀ. ಉದ್ದದ, ಚಪ್ಪಟೆಯ ದಾಂಡು ಹಿಡಿದು ನಿಲ್ಲುತ್ತಾನೆ. ಚೆಂಡೆಸೆಯುವ ತಂಡವು, ಬಕೆಟ್‌ಗೆ ತಗುಲುವಂತೆ ಕೈ ಕೆಳಗಿನಿಂದ ಚೆಂಡನ್ನೆಸೆಯುಬೇಕು. ಬಕೆಟ್ ಮೇಲೆ ನಿಂತಿರುವ ದಾಂಡುಗಾರನು ಅದನ್ನು ತಡೆಯಬೇಕು.

i) ಚೆಂಡು ಬಕೆಟ್‌ಗೆ ತಗುಲದಂತೆ ದಾಂಡುಗಾರನು ತಡೆದರೆ–2ರನ್

ii) ಚೆಂಡು ಬಕೆಟ್‌ಗೆ ತಗುಲದೆ ಮುಂದೆ ಹೋದರೆ–1ರನ್

iii) ಚೆಂಡು ಬಕೆಟ್‌ಗೆ ತಗುಲಿದರೆ, ದಾಂಡುಗಾರನು<br>ಬಕೆಟ್ ಮೇಲಿನಿಂದ ಕೆಳಗೆ ಬಿದ್ದರೆ,<br>ದಾಂಡುಗಾರನು ಹೊಡೆದ ಚೆಂಡನ್ನು ಕ್ಷೇತ್ರದೊಳಗೆ<br>ಕ್ಯಾಚ್ ಹಿಡಿದರೆ } ದಾಂಡುಗಾರನು ಆಟದಿಂದ ಹೊರಗೆ

iv) ಸಕ್ರಮವಾಗಿ ಎಲ್ಲರೂ ಆಡಿದ ಮೇಲೆ, ತಂಡಗಳು ಬದಲಾಗುತ್ತವೆ.

v) ಯಾವ ತಂಡವು ಹೆಚ್ಚು ರನ್ ಗಳಿಸಿದೆಯೋ ಅದು ಗೆದ್ದಂತೆ.

## III. ಸ್ಕೌಟ್ ಕೌಶಲಗಳಿಗೆ ಸಂಬಂಧಿಸಿದ ಮಜಲು ಆಟಗಳು :

1. **ಗಂಟುಗಳ ಮಜಲು:** ಅ) ಪೆಟ್ರೋಲುಗಳು ಸಾಲಾಗಿನಿಲ್ಲುತ್ತವೆ. ಪ್ರತಿ ಪೆಟ್ರೋಲಿಗೂ ಒಂದೇ ಅಂತರವಿರುವಂತೆ, ಅದರದರ ಜಾಗಗಳನ್ನು ಗುರುತಿಸಿರುತ್ತದೆ. ನಿಗದಿತ ಕ್ರಮದಲ್ಲಿ ತಮ್ಮ ತಮ್ಮ ಹಗ್ಗದಲ್ಲಿ ಹಾಕಬೇಕಾದ ಗಂಟುಗಳನ್ನು ಹೆಸರಿಸಲಾಗಿರುತ್ತದೆ. ಉದಾ: ಕೊಟ್ಟಿಗೆ ಗಂಟು, ಸಮಗಂಟು, ಮೂಲೆಗಂಟು, ಕುಣಿಕೆ ಗಂಟು, ಬೆಸ್ತರಗಂಟು, ಸುತ್ತೊಂದೆರಡು ಮಲುಕುಗಂಟು ಇತ್ಯಾದಿ. ಶೀಟಿ ಊದಿದ ಕೂಡಲೇ ಪೆಟ್ರೋಲ್‌ನ ಮೊದಲನೆಯವನು ಓಡಿಹೋಗಿ ಕಂಬಕ್ಕೆ ಕೊಟ್ಟಿಗೆ ಗಂಟು ಹಾಕಿ ಹಿಂದಿರುಗಿರುತ್ತಾನೆ. ಕೊನೆಯಲ್ಲಿ ಸೇರಿಕೊಳ್ಳುತ್ತಾನೆ. ಅವನ ಜಾಗದಲ್ಲಿದ್ದ 2ನೆಯವನು ಓಡಿಹೋಗಿ ಸಮಗಂಟು ಹಾಕಿ ಹಿಂದಿರುಗಿ ಕೊನೆಯಲ್ಲಿ ಸೇರಿಕೊಳ್ಳುತ್ತಾನೆ. 3, 4, 5 ಇತ್ಯಾದಿ., ಗಂಟುಗಳನ್ನು ತಪ್ಪಿಲ್ಲದೆ ಸರಿಯಾಗಿ ಹಾಕಿರುವುದು. ಮತ್ತು ಕಡಿಮೆ ಸಮಯದಲ್ಲಿ ಮುಗಿಸಿರುವುದು ಲೆಕ್ಕಕ್ಕೆ ತೆಗೆದುಕೊಂಡು ಗೆದ್ದ ಪೆಟ್ರೋಲನ್ನು ಹೇಳಲಾಗುತ್ತದೆ.

   ಆ) ಮೇಲಿನಂತೆಯೇ ಆದರೆ ಸ್ಕೌಟುಗಳಿಗೆ ಕಣ್ಣು ಕಟ್ಟಲಾಗಿರುತ್ತದೆ. ಓಡುವ ಅವಶ್ಯಕತೆ ಇಲ್ಲ. ಕ್ರಮಿಸುವ ದೂರ ಕಡಿಮೆ ಇರುತ್ತದೆ. ಅವರ ಕೈಗೆ ಅವರ ಹಗ್ಗವು ಸಿಗುವಂತೆ ಮಾಡಲು ಸಹಾಯಕರಿರುತ್ತಾರೆ.

2. **ದಿಕ್ಸೂಚಿಯ ದಿಗ್ಬಿಂದುಗಳು:** ಸಾಧಾರಣ ಪೆನ್ಸಿಲ್ ಉದ್ದದ 8 ಕಡ್ಡಿಗಳನ್ನು ಒಂದು ನಿಶ್ಚಿತ ಸ್ಥಳದಲ್ಲಿ ಇಟ್ಟಿರಲಾಗುತ್ತದೆ. ದಿಕ್ಕಿನ ಹೆಸರನ್ನು ಹೇಳಿದ ಕೂಡಲೇ ಸ್ಕೌಟುಗಳು ಓಡಿಹೋಗಿ ವೃತ್ತದ ಮಧ್ಯೆ. ಹೆಸರಿಸಿದ ದಿಕ್ಕನ್ನು ಸೂಚಿಸುವಂತೆ ಕಡ್ಡಿಯನ್ನಿಟ್ಟು ಬರಬೇಕು. ಒಬ್ಬೊಬ್ಬರಿಗೂ ಬೇರೆ ಬೇರೆ ದಿಕ್ಕುಗಳನ್ನು ಹೇಳಬಹುದು. ಎಲ್ಲರ ಸರದಿ ಮುಗಿದ ಮೇಲೆ ದಿಕ್ಕುಗಳನ್ನು ಸರಿಯಾಗಿ ಇಟ್ಟಿದ್ದಾರೆಯೇ ಪರೀಕ್ಷಿಸಬೇಕು.

   ಪ್ರತಿಬಾರಿ ದಿಕ್ಕಿನ ಹೆಸರನ್ನು ಕೂಗುವ ಬದಲು, ದಿಕ್ಕಿನ ಹೆಸರು ಬರೆದ ಚೀಟಿಯನ್ನು ಕೊಡಬಹುದು. / ಎತ್ತಿಸಬಹುದು.

## IV ಜಟ್ಟು ಸ್ಪರ್ಧೆಗಳು :

1. ದಳವನ್ನು ಎರಡು ತಂಡಗಳಾಗಿ ವಿಭಜಿಸುವುದು. ಮೈದಾನದ ರೇಖೆಯ ಆಕಡೆ ಈಕಡೆ, ತಂಡಗಳ ಸ್ಕೌಟುಗಳು ಒಬ್ಬರಿಗೊಬ್ಬರು ಬೆನ್ನು ಮಾಡಿ ನಿಲ್ಲುತ್ತಾರೆ. ತಯ್ಯಾರ್ ಹೇಳಿದ ಕೂಡಲೇ, ಮುಂದೆ ಬಾಗಿ ತಮ್ಮ ಕೈಗಳನ್ನು ಕಾಲುಗಳ ಮಧ್ಯೆ ತೂರಿಸುತ್ತಾ, ಬೆನ್ನು ಹಿಂದಿನ ಎದುರುತಂಡದ ಸ್ಕೌಟ್‌ನ ಕೈಗಳನ್ನು ಹಿಡಿಯಬೇಕು. 'ಗೋ' ಹೇಳಿದ ಕೂಡಲೇ, ಕೈ ಹಿಡಿದು ತಮ್ಮ ತಮ್ಮ ಕಡೆಗೆ ಎದುರು ತಂಡದ ಸ್ಕೌಟನ್ನು ಎಳೆದೊಯ್ಯಬೇಕು. ಯಾವ ತಂಡವು ಹೆಚ್ಚು ಮಂದಿ ಎದುರು ತಂಡದವರನ್ನು, ನಿಗದಿತ ದೂರಕ್ಕೆ ಎಳೆದೊಯ್ಯುತ್ತದೆ, ಆ ತಂಡವು ಗೆದ್ದಂತೆ. ಇದೊಂದು ರೀತಿಯ ಜಗ್ಗು ಹೋರಾಟ (Tug-of-war) ಎಂದೇ ಹೇಳಬೇಕು. ಈ ಆಟಕ್ಕೆ 'ಚೈನೀಸ್ ಟಗ್' ಎಂದೂ ಕರೆಯುತ್ತಾರೆ. ಇದನ್ನು ಪೆಟ್ರೋಲ್‌ಗಳ ಮಧ್ಯೆ ಆಡಬಹುದು.

2. ತಂಡಗಳು ಮಧ್ಯ ಗೆರೆಯ ಆಕಡೆ, ಈಕಡೆ ಎದಿರುಬದಿರಾಗಿ ನಿಲ್ಲುತ್ತಾರೆ. ತಯ್ಯಾರ್ ಹೇಳಿದ ಕೂಡಲೇ ತಮ್ಮ ತಮ್ಮ ಕೈಗಳನ್ನು ಬೆನ್ನು ಹಿಂದೆ ಕಟ್ಟಿ ಹಿಡಿಯುತ್ತಾರೆ. ಎದಿರು ವ್ಯಕ್ತಿಯ ಎದೆಗೆ ಎದೆ ಜೋಡಿಸುತ್ತಾರೆ. 'ಗೋ' ಹೇಳಿದ ಕೂಡಲೇ, ತಮ್ಮ ಕೈಕಟ್ಟು ಸಡಿಲಿಸದೆ, ಎದುರಾಳಿಯನ್ನು ಹಿಂದೆ ತಳ್ಳುತ್ತಾರೆ. ಯಾವ ತಂಡವು, ಎದುರು ತಂಡದ ಹೆಚ್ಚು ಮಂದಿಯನ್ನು ತಳ್ಳಿ ಗೆರೆದಾಟಿಸ ಬಲ್ಲುದೋ, ಆ ತಂಡವು ಗೆದ್ದಂತೆ.

## ಯೋಜನಾ ಕಾರ್ಡುಗಳು:

ಈ ಕಾರ್ಡುಗಳಲ್ಲಿ ಪೆಟ್ರೋಲ್ ಲೀಡರುಗಳನ್ನುದ್ದೇಶಿಸಿ, ಸೂಚನೆ ನೀಡಲಾಗಿರುತ್ತದೆ. ನಿಗದಿತ ವೇಳೆಯಲ್ಲಿ ಅವರು ಅದನ್ನು ದ್ವಿತೀಯಕರಿಗೆ ಕೊಡುತ್ತಾರೆ. ಅವರು ಪೆಟ್ರೋಲನ್ನು ವಹಿಸಿಕೊಂಡು, ಸೂಚನೆಯ ಪ್ರಕಾರ ಕೆಲಸಮಾಡಿ ಮುಗಿಸುತ್ತಾರೆ.

## ಯೋಜನಾ ಕಾರ್ಡು ನಮೂನೆಗಳು :

1 ರಿಂದ 4

ಗೆ: ಪೆಟ್ರೋಲ್ ಲೀಡರು/ ................................ ಪೆಟ್ರೋಲು

ಇದನ್ನು ನಿನ್ನ ದ್ವಿತೀಯಕನಿಗೆ ಕೊಡುವುದು. ನೀನು ಸಹಾಯಕ ಸ್ಕೌಟ್ ಮಾಸ್ಟರರ ಬಳಿಗೆ ತಿಳುವಳಿಕೆ ಪಡೆಯಲು ಬಂದಾಗ ಅವನು ಪೆಟ್ರೋಲನ್ನು ವಹಿಸಿಕೊಂಡು, ಕಾರ್ಡ್‌ನಲ್ಲಿರುವ ಸೂಚನೆಯ ಪ್ರಕಾರ ಕಾರ್ಯಕ್ರಮ ನಡೆಸಲಿ (ಯೋಜನೆಯನ್ನು ಸೂಚಿಸಿ).

(ಸಹಿ)

**ಸ್ಕೌಟ್ ಮಾಸ್ಟರ್**

**ದ್ವಿತೀಯಕನು ನಡೆಸಬೇಕಾದ ಪೆಟ್ರೋಲ್ ಕಾರ್ಯಕ್ರಮದ ನಿದರ್ಶಕ ಸೂಚನೆಗಳ ನಮೂನೆಗಳು** (ಯಾವುದಾದರೊಂದು ಸೂಚನೆಯನ್ನು ಕಾರ್ಡಿಗೆ ಒಂದರಂತೆ ಕೊಡಬೇಕು)

1) ಕಾಲಿನ ಮೂಳೆ ಮುರಿದಿರುವ ಸ್ಕೌಟ್‌ಗೆ ಪ್ರಥಮ ಚಿಕಿತ್ಸೆ ನೀಡಿ, 30 ಮೀ. ದೂರದಲ್ಲಿರುವ ಆಸ್ಪತ್ರೆಗೆ ಡೋಲಿಯಲ್ಲಿ ಕರೆದೊಯ್ಯಲಿ, 15 ನಿಮಿಷಗಳೊಳಗೆ ಈ ಕೆಲಸ ಮಾಡಿ ಮುಗಿಸಬೇಕು. ಪೆಟ್ರೋಲ್‌ನ ಎಲ್ಲರೂ ಭಾಗವಹಿಸಬೇಕು.

2) ಶಿಬಿರದ ನಕ್ಷೆಯನ್ನು 15 ನಿ.ಗಳೊಳಗೆ ತಯಾರಿಸಿ. ಪೆಟ್ರೋಲ್‌ನ ಎಲ್ಲರೂ ಇದರಲ್ಲಿ ಭಾಗವಹಿಸಲಿ.

3) ಲಭ್ಯವಿರುವ ವಸ್ತುಗಳನ್ನು ಉಪಯೋಗಿಸಿಕೊಂಡು, 15 ನಿಮಿಷಗಳೊಳಗೆ ಒಂದು ಒಪ್ಪಾರದ ಗುಡಾರವನ್ನು (Bivouac Shelter) ತಯಾರಿಸಲಿ. ಪೆಟ್ರೋಲ್‌ನ ಎಲ್ಲರೂ ಇದರಲ್ಲಿ ಭಾಗವಹಿಸಬೇಕು.

4) 4 ಮೀ ಎತ್ತರದ ಒಂದು ಧ್ವಜ ಸ್ತಂಭವನ್ನು ನಿರ್ಮಿಸಿ, ವಿಧಿವತ್ತಾಗಿ, ಧ್ವಜಾರೋಹಣ ಮಾಡುವುದು. 15 ನಿಮಿಷಗಳೊಳಗೆ ಮುಗಿಸಬೇಕು. ಪೆಟ್ರೋಲ್‌ನ ಎಲ್ಲರೂ ಭಾಗವಹಿಸಬೇಕು.

ಷರಾ; ಯೋಜನಾ ಕಾರ್ಡ್ ನಮೂನೆಯಲ್ಲಿ ಮೇಲೆ ಕಾಣಿಸಿರುವುದಕ್ಕೆ ವಿವರಣೆ. ಪೆಟ್ರೋಲ್ ಲೀಡರ್ ನ ಪತ್ರದ ಒಕ್ಕಣೆ ಒಂದೇ. ದ್ವಿತೀಯಕನಿಗೆ ನೀಡುವ ನಿದರ್ಶಕ ಸೂಚನೆಗಳಲ್ಲಿ ಒಂದು ಕಾರ್ಡಿಗೆ ಒಂದು ಸೂಚನೆ. ಹಾಗಾಗಿ ಒಟ್ಟು 4 ಕಾರ್ಡ್ ನಮೂನೆಗಳಿವೆ.

ಗಮನಿಸಿ: ಈ ನಾಲ್ಕೇ ಅಲ್ಲದೆ ಸ್ಕೌಟ್ ಮಾಸ್ಟರ್ ಬೇರೆ ಸೂಚನೆಗಳನ್ನು ಬರೆಯಬಹುದು. ಸ್ಕೌಟ್ ಕಾರ್ಯಕ್ರಮದಲ್ಲಿ ಅನೇಕ ಯೋಜನೆಗಳು ಲಭ್ಯವಿದೆ.

**ಪೆಟ್ರೋಲ್ ಲೀಡರುಗಳಿಗೆ ತಿಳಿವಳಿಕೆ :**

ದ್ವಿತೀಯಕನು ಯೋಜನೆಯನ್ನು ಕಾರ್ಯಗತ ಮಾಡುವ ಸಮಯದಲ್ಲಿ ಪೆಟ್ರೋಲ್ ಲೀಡರನು ಸಹಾಯಕ ಸ್ಕೌಟ್ ಮಾಸ್ಟರರು ಅಥವಾ ಸ್ಕೌಟ್ ಮಾಸ್ಟರ್‌ರ ಬಳಿಯಲ್ಲಿ ಹೊಸದನ್ನೇನಾದರೂ ಕಲಿಯುತ್ತಿರುತ್ತಾನೆ. ಹೊಸ ಕಲಿಕೆಯ ಹಲವು ಅಂಶಗಳು ಹೀಗಿವೆ.

1. i) ಹಿಡಿಕೆಗಂಟು (ಮ್ಯಾನ್ ಹಾರ್ನೆಸ್ ನಾಟ್) ii. ದಾರಿಗಳ್ಳನ ಗಂಟು (ಹೈವೇಮ್ಯಾನ್ಸ್ ಹಿಚ್)

   ಬಿಗಿಸಿದ ಹಗ್ಗದ ಗಂಟು (ಗಯ್‌ಲೈನ್ ಹಿಚ್) ಇವುಗಳನ್ನು ಹಾಕುವುದು. ಉಪಯೋಗ

2) ಹಗ್ಗದಿಂದ ಡೋಲಿ ಮಾಡುವುದು ಹೇಗೆ?

3) ಚಿಲುಕ ಕಟ್ಟನ್ನು (Par buckle) ಉಪಯೋಗಿಸಿ ದಿಮ್ಮಿಗಳನ್ನೆಳೆಯುವುದು ಹೇಗೆ? ನಳಿಕೆ ನಿಭಾವಣೆ (ಗನ್ ಟ್ಯಾಕಲ್) ವಿಧಾನದಲ್ಲಿ ಅವುಗಳನ್ನು ಉರುಳಿಸುವುದು ಹೇಗೆ?

4) ದಿಕ್ಸೂಚಿಯ ಕೋನಮಾನವನ್ನು ಕರಾರುವಾಕ್ಕಾಗಿ ಅನುಸರಿಸುವುದು ಹೇಗೆ?

5) ಸುಂದರ ದೃಶ್ಯ ಚಿತ್ರಿಸುವುದು (ಸ್ಕೆಚಿಂಗ್ ಎ ಪ್ಯಾನೋರೆಮಿಕ್ ವ್ಯೂ) ಹೇಗೆ?

**ಸ್ಕೌಟ್ ಮಾಸ್ಟರರ ಉದಂತಗಳು :**

ದಳದ ಪ್ರತಿ ಸಭೆಯಲ್ಲಿಯೂ ಸ್ಕೌಟ್ ಮಾಸ್ಟರರು ಸ್ಕೌಟುಗಳಿಗೆ ಯಾವುದಾದರೊಂದು ಸ್ಕೌಟ್ ವಿಷಯದ ಬಗ್ಗೆ ಸ್ಥೂಲವಾಗಿ ವಿವರಿಸಿ ಹೇಳಬೇಕು ಅಥವಾ ಒಂದು ಉದಂತವನ್ನು ತಿಳಿಸುವಂತಿರಬೇಕು. ಸ್ಕೌಟ್ ಮಾಸ್ಟರರ ಈ ಕಥನವು ಸ್ಕೌಟುಗಳ ಸಾಧಾರಣ ಜ್ಞಾನ ಸಂಪತ್ತನ್ನು ಹೆಚ್ಚಿಸುವಂತಿರಬೇಕು. ಸಾಧ್ಯವಾದಷ್ಟೂ ಅದು ಪದಕ ಪರೀಕ್ಷೆಗಳಿಗೆ ನೇರ ಸಂಬಂಧ ಹೊಂದಿರಬೇಕು.

ಉದಂತಗಳು ಸಾಮಾನ್ಯ ವಿಷಯಗಳಿಗೆ ಸಂಬಂಧಿಸಿದಂತಿರಬೇಕು. ಶೌರ್ಯ, ದುಷ್ಟ ರಕ್ಷಣಾ ಶ್ರದ್ಧೆ (Chivalry) ವಿಧೇಯತೆ, ಪ್ರಾಣ ಸಂರಕ್ಷಣೆ ಮುಂತಾದ ವಿಷಯಗಳು ಈ ಲೆಕ್ಕದಲ್ಲಿ ಬರುತ್ತವೆ. ಸ್ಕೌಟ್ ಮಾಸ್ಟರರು ಪೂರಾ ದಳವನ್ನು ಉದ್ದೇಶಿಸಿ ಮಾತನಾಡಬೇಕು. ಉದಂತವು ರೋಮಾಂಚನಕಾರಿಯಾಗಿ ಇರಬೇಕು. ಸಾಧಿಸಬಹುದಾದ ಯಾವುದಾದರೊಂದು ಉದಾತ್ತವಾದ ಆದರ್ಶವನ್ನು ಎತ್ತಿಹಿಡಿಯಬೇಕು.

ಸ್ಕೌಟ್ ಮಾಸ್ಟರರ ಕಥನವು ನಕ್ಷೆಗಳಿಗೆ ಸಂಬಂಧಿಸಿರಬಹುದು. ಭೂನಕ್ಷೆಗಳ ಸಹಾಯದಿಂದ, ದೇಶಗಳು – ಜನಾಂಗಗಳ ಚರಿತ್ರೆ, ಪ್ರಸ್ತುತದಲ್ಲಿ ಅವುಗಳ ಉಪಯೋಗವಾಗುವ ರೀತಿ ಅಥವಾ ಸಸ್ಯವರ್ಗ, ಪ್ರಾಣಿ ವರ್ಗಕ್ಕೆ, ಅವುಗಳ ಜೀವನ ಗತಿ ಉದಾ:– ಸಸ್ಯಗಳ ಚಾಣಾಕ್ಷತನ, ಬೀಜಪ್ರಸಾರ, ಪರಿಸರ ಮತ್ತು ಹವಾಮಾನಗಳಿಗೆ ಹೊಂದಿಕೊಳ್ಳುವಿಕೆ, ಸ್ವರಕ್ಷಣೆಗಾಗಿ ಮಾರ್ಪಾಡುಗಳು ಇತ್ಯಾದಿ: ಹಕ್ಕಿ ಪಕ್ಷಿಗಳ ವಲಸೆ ಹೋಗುವಿಕೆ, ಪ್ರಾಣಿ ವರ್ಗದಲ್ಲಿ ಕಂಡು ಬರುವ ವೇಷ ಬದಲಾವಣೆ ಮತ್ತು ಮರಸುವಿಕೆ (Camouflage) ಇತ್ಯಾದಿ ಈ ಅನೇಕ ವಿಷಯಗಳು ಸಾಮಾನ್ಯವಾಗಿ ಸ್ಕೌಟುಗಳ ಕುತೂಹಲವನ್ನು ಕೆರಳಿಸುವ ಸ್ವಾರಸ್ಯಕರ ಅಂಶಗಳಾಗಿವೆ. ಹಾಗಾಗಿ ಸ್ಕೌಟಿಂಗ್‌ನಲ್ಲಿ ವಿಶೇಷ ಸ್ಥಾನವನ್ನು ಪಡೆದಿವೆ. ಸ್ಕೌಟ್ ಚಟುವಟಿಕೆಗಳಲ್ಲಿ ಹಾಸುಹೊಕ್ಕಾಗಿದ್ದು ಒಂದಲ್ಲ ಒಂದು ರೀತಿಯ ಸಂಬಂಧವನ್ನು ಹೊಂದಿವೆ.

**ಇತರ ರೀತಿಯ ದಳದ ಸಭೆಗಳು :**

ಇಲ್ಲಿನ ವರೆಗೆ ಸಾಧಾರಣವಾದ ದಳದ ಸಭೆಗಳ ಬಗ್ಗೆ ವಿಮರ್ಶೆ ಮಾಡಿದೆವು. ಹಲವಾರು ಕಾರಣಗಳಿಂದ ದಳದ ವಿಶೇಷ ಸಭೆಗಳು, ಎನ್ನಿಸಿಕೊಳ್ಳುವ ಸಭೆಗಳ ಬಗ್ಗೆ ನೋಡೋಣ. ಅವುಗಳಲ್ಲಿ ಬರುವ ಸಭೆಗಳು ಹೀಗಿವೆ.

i) ಪ್ರಕೃತಿ ವೀಕ್ಷಣಾ ಸಂಚಾರ ಅಥವಾ ಅರಣ್ಯ ಕೌಶಲ ಪರಿಶೋಧನಾ ಯಾನ

ii) ಅಡಚಣೆಗಳಿಂದ ಕೂಡಿದ ಯಾನ

iii) ಪೆಟ್ರೋಲ್ ಸ್ಪರ್ಧೆಗಳು

iv) ತರಬೇತಿ ಮತ್ತು ಪರೀಕ್ಷಣಾ ಸ್ಪರ್ಧೆ ಅಥವಾ ಪ್ರವಾಸೀ ಪಾರಿತೋಷಕ ಸ್ಪರ್ಧೆ.

## 1. ಪ್ರಕೃತಿ ವೀಕ್ಷಣಾ ಸಂಚಾರ / ಅರಣ್ಯಕೌಶಲ ಪರಿಶೋಧನಾ ಯಾನ:

ಆಗೊಮ್ಮೆ ಈಗೊಮ್ಮೆ ಸ್ಕೌಟುಗಳನ್ನು ಪ್ರಕೃತಿ ಅಧ್ಯಯನಕ್ಕಾಗಿ ಕರೆದೊಯ್ಯಬೇಕು. ಆ ಸಮಯದಲ್ಲಿ ಅವರು ಹಕ್ಕಿ ಪಕ್ಷಿಗಳ, ಪ್ರಾಣಿಗಳ, ಸಸ್ಯಗಳ ಜೀವನ ರೀತಿಯನ್ನು ಅಭ್ಯಾಸ ಮಾಡಲು ಉತ್ತೇಜನ ನೀಡಬೇಕು. ಪ್ರಕೃತಿ ಸೌಂದರ್ಯ ಮತ್ತು ವೈಚಿತ್ರ್ಯಗಳನ್ನು ಮೆಚ್ಚಿ ಆನಂದಿಸಲು ಅವಕಾಶ ಕಲ್ಪಿಸಬೇಕು. ಹಕ್ಕಿ-ಪಕ್ಷಿಗಳನ್ನು ಅತಿ ಸಮೀಪದಿಂದ ಗಮನಿಸಲೂ, ಅವುಗಳ ರೀತಿನೀತಿಗಳನ್ನು ಜಾಗರೂಕತೆಯಿಂದ ತಿಳಿಯಲೂ ಹೇಳಬೇಕು. ಸ್ಕೌಟುಗಳು ವರ್ಷದ ವಿವಿಧ ಋತುಗಳ ಬಗ್ಗೆ ತಿಳಿದಿರಬೇಕು. ಆಯಾಯಾ ಋತುಗಳಲ್ಲಿ ಆಗುವ ಬದಲಾವಣೆಗಳ ಬಗ್ಗೆ ತಿಳಿದಿರಬೇಕು. ಸಸ್ಯವರ್ಗದಲ್ಲಾಗುವ ಬದಲಾವಣೆಗಳನ್ನು ಗಮನಿಸಬೇಕು. ಪ್ರಾಣಿವರ್ಗದಲ್ಲಾಗುವ ಬದಲಾವಣೆಗಳ ಬಗ್ಗೆ ಹೊಂಚುಹಾಕಿ ಅಭ್ಯಾಸ ಮಾಡಬೇಕು.

ಹಕ್ಕಿ-ಪಕ್ಷಿಗಳನ್ನು ಗಮನಿಸುವುದು ಮತ್ತು ಅಭ್ಯಾಸ ಮಾಡುವುದು. ಬಹಳ ಸ್ವಾರಸ್ಯಕರ ವಿಷಯ. ಸ್ಕೌಟುಗಳು ಈ ಬಗ್ಗೆ ಆಸಕ್ತಿ ತಳೆಯುವಂತೆ ಮಾಡಬೇಕು.

ಪ್ರಾಣಿಗಳು, ಹಕ್ಕಿ ಪಕ್ಷಿಗಳು ಮತ್ತು ಸಸ್ಯಗಳಲ್ಲಿ ಕಾಣಬರುವ ಹುಟ್ಟು, ಬೆಳವಣಿಗೆ, ವಂಶಾಭಿವೃದ್ಧಿ, ಪರಿಸರ ಹಾಗೂ ಹವಾಗುಣಗಳಿಗೆ ಹೊಂದಿಕೊಂಡು ನಡೆಸುವ ಜೀವನಕ್ರಮ, ಪ್ರಕೃತಿಯಲ್ಲಿ ನಿಹಿತವಾಗಿರುವ ಜಾಣ್ಮೆ ಇವೇ ಮುಂತಾದ ವಿಷಯಗಳನ್ನು ಸ್ಕೌಟುಗಳು ಕೂಡಲೇ ಗಮನಿಸದೇ ಇರುವುದಿಲ್ಲ. ಪ್ರಕೃತಿಯ ಪ್ರತಿಕಾರ್ಯದಲ್ಲಿಯೂ ಸೃಷ್ಟಿಕರ್ತನ ಕೈವಾಡವನ್ನು ಮೆಚ್ಚಿ, ಆನಂದಿಸದೇ ಇರುವುದಿಲ್ಲ. ಪ್ರಕೃತಿ ಸೌಂದರ್ಯವನ್ನು ಮೆಚ್ಚುತ್ತಾರೆ. ಪ್ರಕೃತಿ ವೈಚಿತ್ರ್ಯಗಳನ್ನು ಕಂಡು ಆಶ್ಚರ್ಯ ಚಕಿತರಾಗುತ್ತಾರೆ. ಪ್ರಕೃತಿ ಅಧ್ಯಯನದಿಂದ ತಮ್ಮ ಜೀವನ ವಿಕಾಸಕ್ಕೆ ಅನೇಕ ಅಂಶಗಳನ್ನು ಹೀರಿಕೊಳ್ಳುತ್ತಾರೆ.

ನಕ್ಷತ್ರಗಳನ್ನು ಗಮನಿಸುವುದು ಮತ್ತು ಅಧ್ಯಯನ ಮಾಡುವುದು ಪ್ರಕೃತಿಯಲ್ಲಿನ ಇನ್ನೊಂದು ಭಾಗ. ಈ ಅಧ್ಯಯನದಲ್ಲಿ ಸ್ಕೌಟುಗಳು ಆಸಕ್ತಿವಹಿಸಬೇಕು. ಸ್ಕೌಟುಗಳಿಗೆ ಈ ಬಗ್ಗೆ ಅವಕಾಶಗಳನ್ನೊದಗಿಸಬೇಕು, ತರಬೇತಿ ನೀಡಬೇಕು. ಈ ಅಖಂಡ ವಿಶ್ವದ ವೈಶಾಲ್ಯತೆಯನ್ನು ಕಂಡು, ಸ್ಕೌಟುಗಳ ಮನಸ್ಸಿನಲ್ಲಿ ಒಂದು ರೀತಿಯ ಹರ್ಷಾತಿರೇಕವೂ, ಆಶ್ಚರ್ಯವೂ ಉಂಟಾಗುತ್ತದೆ.

ನಕ್ಷತ್ರಗಳ ಬಗ್ಗೆ ತಿಳಿಸುವಾಗ ಸ್ವಲ್ಪ ಸ್ವಲ್ಪವಾಗಿ ತಿಳಿಸಬೇಕು. ಮೊದಲಿಗೆ ಸೂರ್ಯ ಮತ್ತು ಅವನ ಸುತ್ತಲೂ ತಿರುಗುವ ಗ್ರಹಗಳ ಬಗ್ಗೆ ತಿಳಿಸಿ, ಆ ಬಳಿಕ

ನಕ್ಷತ್ರಪುಂಜಗಳ ಬಗ್ಗೆ, ಮುಂದುವರೆದು ಅಂತರಿಕ್ಷದ ಇತರ ವಿಷಯಗಳ ಬಗ್ಗೆ ತಿಳಿಸಬೇಕು.

ಒಮ್ಮೆ ವಿಹಿತ ರೀತಿಯಲ್ಲಿ ಪ್ರಕೃತಿ ಅಧ್ಯಯನವನ್ನು ಪ್ರಾರಂಭಿಸಿದರಾಯಿತು. ಅದು ಜೀವನ ಪೂರಾ ವಿಸ್ಮಯಕಾರಕವಾದ ಹವ್ಯಾಸವಾಗಿ ಬೆಳೆದು ಬಿಡುತ್ತದೆ.

ಅರಣ್ಯಕೌಶಲ ಯಾನಗಳ ಬಗ್ಗೆ ಒತ್ತು ನೀಡಿ, ಅವುಗಳನ್ನು ಕ್ರಿಯಾಶೀಲವಾಗಿ ನಡೆಸಿದರೆ, ಅವುಗಳಿಂದ ಸ್ಕೌಟುಗಳಿಗೆ ಅಮೂಲ್ಯವಾದ ಅನುಭವವು ದೊರಕಿ ಮುಂದೆ ಅವರು ಯೋಗ್ಯ ವ್ಯಕ್ತಿಗಳಾಗಿ ರೂಪುಗೊಳ್ಳುತ್ತಾರೆ.

**2. ಅಡಚಣೆಗಳಿಂದ ಕೂಡಿದ ಯಾನ:**

ನಾವು ಈ ಯಾನದಲ್ಲಿ ಅಳವಡಿಸಿರುವ ಅಡಚಣೆಗಳು ಸರಳವೂ, ಸುಲಭ ರೀತಿಯಲ್ಲಿ ದಾಟುವಂತಹವೂ ಆಗಿವೆ. ಸ್ಕೌಟ್ ಕೌಶಲಗಳಲ್ಲಿ ಎಷ್ಟರವರೆಗೆ ಸ್ಕೌಟುಗಳು ಪರಿಣಿತರಾಗಿದ್ದಾರೆಂದು ತಿಳಿಯುವುದೇ ಈ ಅಡಚಣೆಗಳ ಉದ್ದೇಶ ವಾಗಿದೆ. ವಿವಿಧ ರೀತಿಯ ಅಡಚಣೆಗಳನ್ನು ಎಷ್ಟು ಹೆಚ್ಚಾಗಿ ಅಳವಡಿಸಿಕೊಂಡರೆ, ಯಾನವು ಅಷ್ಟು ಸ್ವಾರಸ್ಯಕರವಾಗಿರುತ್ತದೆ. ನಮ್ಮ ಸ್ಕೌಟುಗಳು ನಾವು ಅಳವಡಿಸುವ ಅಡಚಣೆಗಳನ್ನು ಎಷ್ಟರ ಮಟ್ಟಿಗೆ ದಾಟಬಲ್ಲರು ಎಂಬುದನ್ನು ನಾವು ಯೋಚಿಸಬೇಕು.

ದಳದಲ್ಲಿರುವ ಪೆಟ್ರೋಲುಗಳಿಗೆ ಸರಿಹೊಂದುವ ಸಂಖ್ಯೆಗಳಲ್ಲಿ ಅಡಚಣೆಗಳಿರಬೇಕು. ಪೆಟ್ರೋಲುಗಳು ಬೇರೆ ಬೇರೆ ಕಡೆ ಪ್ರಾರಂಭಿಸಿ, ಒಂದು ವರ್ತುಲಾಕಾರದಲ್ಲಿ ಯಾನವನ್ನು ಮುಗಿಸುವಂತಿರಬೇಕು.

ನಾವು ನೀಡುವ ಮುನ್ಸೂಚನೆಗಳು ಎಷ್ಟು ಪ್ರಭಾವಶಾಲಿಯಾಗಿದ್ದರೆ, ಆಟವು ಅಷ್ಟು ಸಹಜವಾಗಿ ತಾನಾಗಿ ಮುಂದುವರೆಯುತ್ತದೆ. ಆಟದ ಮಧ್ಯೆ ಆದಷ್ಟೂ ತಲೆಹಾಕಬಾರದು. ಮೊದಲಿಗೆ ನೀಡುವ ಸೂಚನೆಗಳು ಸಂಕೇತ ರೀತಿಯಲ್ಲಿ, ಭದ್ರಪಡಿಸಿದ ಲಕೋಟೆಗಳಲ್ಲಿ, ದಿಕ್ಸೂಚಿಯ ದಿಕ್ಕುಗಳ ಕೋನಗಳಲ್ಲಿ ಅಥವಾ ಇನ್ನಾವುದೇ ರೀತಿಯಲ್ಲಿ ಇರಬಹುದು. ಯಾನದ ಅವಧಿಯಲ್ಲಿ ಸ್ಕೌಟರುಗಳು ನಿರ್ಣಾಯಕರೇ ಹೊರತು ಬೋಧಕರು ಅಥವಾ ಸಹಾಯಕರಲ್ಲ ಎಂಬುದನ್ನು ಸ್ಕೌಟುಗಳು ತಿಳಿದಿರಬೇಕು.

ನಾವು ಆರಿಸಿಕೊಳ್ಳುವ ಅಡಚಣೆಗಳು, ಎಲ್ಲವೂ ಒಂದೇ ನಿಗದಿತ ಅವಧಿಯಲ್ಲಿ ಮುಗಿಯುವಂತಿರಬೇಕು. ಪೆಟ್ರೋಲುಗಳು, ಒಂದು ಅಡಚಣೆ ಮುಗಿಸಿ, ಮುಂದಿನ ಅಡಚಣೆಗೆ ಹೋಗುವ ಮೊದಲು, ಆ ಜಾಗದಲ್ಲಿ ಯಾವುದೇ ಇತರ ಪೆಟ್ರೋಲು ಇಲ್ಲವೆಂಬುದನ್ನು ಖಚಿತ ಮಾಡಿಕೊಂಡು ಮುಂದುವರಿಯಬೇಕು. ಹಾಗೇನಾದರೂ ಇತರ ಪೆಟ್ರೋಲ್ ಇದ್ದರೆ ಸುಮ್ಮನೆ ಮುನ್ನುಗ್ಗಬಾರದು.

**ನಿರ್ಣಾಯಕರು ಗಮನಿಸಲೇ ಬೇಕಾದ ಕೆಲವು ಅಂಶಗಳು ಹೀಗಿವೆ:**

1) ನಾಯಕತ್ವದ ಸೂಚನೆಗಳಿದ್ದುವೇ? ಇಲ್ಲವೇ? ತಿಳಿಯುವಂತಿರಬೇಕು.

2) ನಾಯಕರನ್ನನುಸರಿಸುವವರಿದ್ದರೇ?

3) ಪೆಟ್ರೋಲ್‌ನವರು ತಾವು ಮಾಡುವ ಕೆಲಸದ ಬಗ್ಗೆ ತಿಳುವಳಿಕೆ ಇತ್ತೆಂದು ಕಂಡುಬಂದಿತೇ?

4) ತಾವು ಮಾಡಲಿರುವ ಕೆಲಸದ ಬಗ್ಗೆ ಪೆಟ್ರೋಲ್‌ಲೀಡರು ಸ್ಫುಟವಾಗಿ ವಿವರಿಸಿದನೇ?

5) ಪೆಟ್ರೋಲ್‌ನ ಎಲ್ಲಾ ಸದಸ್ಯರಿಗೂ ಕೆಲಸವನ್ನು ಹಂಚಲಾಗಿದ್ದಿತೇ? ಅಥವಾ ಒಬ್ಬಿಬ್ಬರು ಮಾತ್ರ ಕೆಲಸ ಮಾಡಿ ಇತರರ ಬಗ್ಗೆ ಅಸಡ್ಡೆತೋರಲಾಗಿದ್ದಿತೇ?

6) ಪೆಟ್ರೋಲ್‌ನವರು ಸೂಕ್ತ ರೀತಿಯ ಒಗ್ಗೂಡಿದ ಮನೋಭಾವನೆಯನ್ನು (ಪೆಟ್ರೋಲ್ ಸ್ಪಿರಿಟ್) ತೋರ್ಪಡಿಸಿದರೆ? ಸದ್ದಿಲ್ಲದೆ ತಮ್ಮ ಕೆಲಸವನ್ನು ನಿರ್ವಹಿಸಿದರೆ? ಮತ್ತು ಕೆಲಸದ ಬಗ್ಗೆ ಶ್ರದ್ಧೆ ಮತ್ತು ಕ್ರಿಯಾ ಸಾಮರ್ಥ್ಯವನ್ನು ತೋರಿದರೆ?

7) ಪೆಟ್ರೋಲ್‌ನವರು ಶಿಸ್ತಿನಿಂದ, ಚೂಟಿಯಾಗಿ ಬಂದು ಹೋದರೆ?

8) ಪ್ರತಿ ಅಡಚಣಾ ತಾಣಗಳಲ್ಲಿಯೂ ನಿರ್ಣಾಯಕರು, ಈ ಎಲ್ಲಾ ಅಂಶಗಳನ್ನು ಎಚ್ಚರಿಕೆಯಿಂದಲೂ, ವಿಮರ್ಶಾತ್ಮಕವಾಗಿಯೂ ಗಮನಿಸಬೇಕು.

ಯಾನದ ಕೊನೆಯಲ್ಲಿ ಇದನ್ನು ರೂಪಿಸಿದ ಸ್ಕೌಟ್ ಮಾಸ್ಟರು, ಇತರೇ ಸ್ಕೌಟರುಗಳು, ಪೆಟ್ರೋಲ್‌ಗಳು ಭಾಗವಹಿದ ರೀತಿಯಲ್ಲಿನ ಉತ್ತಮ ಅಂಶಗಳನ್ನೂ, ನ್ಯೂನತೆಗಳನ್ನೂ ಗಮನಿಸಿದ್ದಲ್ಲಿ, ಅವನ್ನೂ ಹೇಳಬೇಕು. ಅತ್ಯುತ್ತಮವಾಗಿ ಭಾಗವಹಿಸಿದ ಪೆಟ್ರೋಲನ್ನು ಪ್ರಶಂಸಿಸಬೇಕು.

ಸ್ಕೌಟ್ ಮಾಸ್ಟರಿಗೊಂದು ತಿಳಿ ಹೇಳಿಕೆ. ನಾವು ಬಾಲಕರಿಗೆ ನೀಡಿದ ಶಿಕ್ಷಣದ ಪರಿಣಾಮವನ್ನು ಪರೀಕ್ಷಿಸಲು ಇದೊಂದು ಸಹಜರೀತಿಯು, ವಾಸ್ತವಿಕ ವಿಧಾನವಾಗಿದೆ.

ಒಡ್ಡುವ ಅಡಚಣೆಗಳು, ಬಾಲಕರ ಶಕ್ತಿ ಸಾಮರ್ಥ್ಯಗಳ ಇತಿಮಿತಿ ಯಲ್ಲಿರಬೇಕು. ಈ ರೀತಿಯ ಸಾಹಸಿಕ ಯಾನಗಳಲ್ಲಿ ಹಳಬರೆನಿಸಿದ ಹಿರಿಯ ಸ್ಕೌಟುಗಳು ದೈಹಿಕವಾಗಿಯೂ, ಮಾನಸಿಕವಾಗಿಯೂ, ಉತ್ತಮ ಮಟ್ಟವನ್ನು ಪ್ರದರ್ಶಿಸುವಂತೆ ಆಶಿಸಬಹುದು.

ಇತರ ದಳಗಳ ಸ್ಕೌಟರುಗಳನ್ನು ನಿರ್ಣಾಯಕರನ್ನಾಗಿ ಕರೆಸಬಹುದಾದರೆ ಒಳ್ಳೆಯದೇ. ಅಲ್ಲದೆ ತಾಯ್ತಂದೆಯರು, ಹಿತೈಷಿಗಳು, ಆಯುಕ್ತರುಗಳು ದಳದ ಸಮಿತಿ ಸದಸ್ಯರು ಮುಂತಾದವರ ಸೇವೆಯನ್ನು ಉಪಯೋಗಿಸಿಕೊಳ್ಳಲು ಇದೊಂದು ಸದವಕಾಶವಾಗಿದೆ.

**ಅಡೆಚಣೆಗಳಿಗೆ ಉದಾಹರಣೆಗಳು :**

1) ಆಳವಾದ ಬಿರುಕು/ಹಳ್ಳ/ತೊರೆಯನ್ನು ಮೇಕೆದಾಟು ತರಹ ದಾಪುಗಾಲು (ಜೈಂಟ್ ಸ್ಟ್ರೈಡ್ -Giant Stride) ಹಾಕಿ ದಾಟುವುದು.

2) ತೊರೆ/ ಹಳ್ಳವನ್ನು ಭಾಗಶಃ ತೆಪ್ಪದ ಮೇಲೆ, ಭಾಗಶಃ ಕಟ್ಟೆಮರ/ದಿಮ್ಮಿಯ ಮೇಲೆ ದಾಟುವುದು.

3) ಜೌಗು ಪ್ರದೇಶವನ್ನು ಮರಗಾಲಿನ ಸಹಾಯದಿಂದ ದಾಟುವುದು.

4) ಬೆಂಕಿಹತ್ತಿ ಉರಿಯುತ್ತಿರುವ ಕಟ್ಟಡದಿಂದ ಪ್ರಾಣಸಂರಕ್ಷಣೆ ಮಾಡುವುದು.

5) ಮರದ ಮೇಲೆ ಅಡಿಗೆ ಮಾಡುವುದು (ಟ್ರಿಪಾಪ್ ಕುಕ್ಕಿಂಗ್–Tree top Cooking)

6) ಕಣ್ಕಟ್ಟಿನಲ್ಲಿ ಜಾಡುಹಿಡಿಯುವುದು.

7) ದೊಣ್ಣೆಗಳು ಮತ್ತು ಗೂಟಗಳನ್ನು ಮರೆತು ಬಂದಿರುವಾಗ ಗುಡಾರ ಹಾಕುವುದು.

8) ದೂರ, ಎತ್ತರಗಳನ್ನು ಅಂದಾಜು ಮಾಡುವುದು.

9) ಅಪಾಯಕರವಾದ "ರೇಡಿಯೋ ಆಕ್ಟಿವ್" ಮೂಲಧಾತುಗಳು ಮರಳಿನಲ್ಲಿ ಮಾಯವಾಗುವ ಮುನ್ನ ಕೂಡಿಸಿ ಭದ್ರಮಾಡುವುದು.

10) ಧ್ವಜ ಸ್ತಂಭವನ್ನು ನಿರ್ಮಿಸಿ ವೃತ್ತದ ಹೊರಗಿನಿಂದ ಧ್ವಜಾರೋಹಣ ಮಾಡುವುದು.

ಅಡಚಣೆಗಳನ್ನು ಸೃಜನಾತ್ಮಕವಾಗಿ ರೂಪಿಸಿಕೊಳ್ಳುವುದು ಬಹಳ ಮುಖ್ಯವಾದುದು.

ಈ ಕೆಳಗೆ ಕೆಲವು ವಿಶಿಷ್ಟ ರೀತಿಯ ಅಡಚಣೆ (ಯೋಜನೆ)ಗಳನ್ನು ಕೊಡಲಾಗಿದೆ.

**ಯೋಜನೆ-(ಅ):-** ಪ್ರವಾಹದ ಬಗ್ಗೆ ಈಗ ತಾನೆ ಎಚ್ಚರಿಕೆ ಹಾಗೂ ಅಪಾಯ ಸೂಚನೆ ಬಂದಿದೆ. ಬರುವ 5 ನಿಮಿಷಗಳಲ್ಲಿ ಪ್ರವಾಹದ ನೀರು ನುಗ್ಗಿ, ಈ ಪ್ರದೇಶವು ನಾಲ್ಕು ಅಡಿ ಆಳದಷ್ಟು ಜಲಾವೃತವಾಗಲಿದೆ. ಆ ಕಾರಣ ಈ ಪ್ರದೇಶದ 3 ಮೀ. ನಷ್ಟು ತ್ರಿಜ್ಯಾರೇಖಾ (Radius) ಕ್ಷೇತ್ರವನ್ನು ಬಿಟ್ಟು, ನಿಮ್ಮ ಪೆಟ್ರೋಲ್, ಎಲ್ಲ ಸಾಮಾನು ಸರಂಜಾಮು ಸಹಿತ, ನೆಲಮಟ್ಟದಿಂದ ಮೇಲೆ ಹೋಗಿ, ನಿಮ್ಮನ್ನು ರಕ್ಷಿಸಲು ಬರಲಿರುವ ರಕ್ಷಣಾ ತಂಡದವರಿಗೆ ಚಹಾ ಮತ್ತು ಉಪಾಹಾರವನ್ನು ತಯಾರಿಸಿ.

**ಯೋಜನೆ(ಆ) :**ಸುಭದ್ರವಾದ ಕೋಟೆಯೊಳಗೆ ನಿಮ್ಮನ್ನು ಬಂಧಿಸಲಾಗಿದೆ. ನೀವು ಬಂಧನದಿಂದ ತಪ್ಪಿಸಿಕೊಳ್ಳಲು ನಿಮಗಿರುವುದೊಂದೇ ಮಾರ್ಗ. ನಿಮ್ಮ ಎದುರಿಗಿರುವ ಕೋಟೆ ಗೋಡೆಯನ್ನು ಹಾರಿ ತಪ್ಪಿಸಿಕೊಳ್ಳುವುದು. ದುರದೃಷ್ಟಕರ ವಿಷಯವೆಂದರೆ ಕೋಟೆಗೋಡೆಯ ಮೇಲೆ ಹೆಚ್ಚು ವೋಲ್ಟೇಜ್‌ನಿಂದ ಕೂಡಿದ ವಿದ್ಯುತ್ ತಂತಿ ಜಾಲವನ್ನೂ, ವಿಶೇಷ ರೀತಿಯ ಅಪಾಯ ಸೂಚಕ ಷೀಟ್ ಸಲಕರಣೆಯನ್ನು ಅಳವಡಿಸಿರುತ್ತಾರೆ. ನಿಮ್ಮಲ್ಲಿರುವ ಎಲ್ಲಾ ವಸ್ತುಗಳೂ ವಿದ್ಯುದ್ವಾಹಕಗಳೇ ಆದ ಕಾರಣ ನೀವು ಗೋಡೆಯನ್ನು ಮುಟ್ಟುವಂತಿಲ್ಲ. ಇನ್ನು 20 ನಿಮಿಷಗಳಲ್ಲಿ ಹಾಜರಾತಿ ತೆಗೆದುಕೊಳ್ಳಲಾಗುತ್ತದೆ. ಅಷ್ಟರೊಳಗೆ ನಿಮ್ಮ ಪೆಟ್ರೋಲ್ ತಪ್ಪಿಸಿಕೊಳ್ಳಬೇಕು.

**ಯೋಜನೆ(ಇ) :-** ವೃತ್ತದಿಂದ ಹೊರಗೇ ಇದ್ದುಕೊಂಡು, ವೃತ್ತ ಮಧ್ಯದಲ್ಲಿ ಸರಿಯಾಗಿ ಬರುವಂತೆ, ಧ್ವಜಸ್ತಂಭ ನಿರ್ಮಾಣ ಮಾಡಿ (ಅದರ ಎಳೆ ಹಗ್ಗಗಳನ್ನು (Guy Lines) ಬಲವಾಗಿ ಬಿಗಿಸಿ (ಎಳೆ ಹಗ್ಗಗಳನ್ನು ಮೊದಲು ಕಟ್ಟಿರಬಾರದು) ಧ್ವಜವು ತುದಿಯಲ್ಲಿ ಬರುವಂತೆ ಹಾರಿಸಬೇಕು. ಧ್ವಜ ಹಾರಿಸುವ ಹಗ್ಗ (ಹ್ಯಾಲ್ಯಾರ್ಡ್) ದ ಎರಡೂ ಎಳೆಗಳು ಸ್ತಂಭಕ್ಕೆ ಸೇರಿದಂತೆ, ಸಹಜ ರೀತಿಯಲ್ಲಿರಬೇಕು.

**ಯೋಜನೆ(ಈ) :-** ಪ್ರಖರತರವಾದ ಸೂರ್ಯ ಪ್ರಕಾಶದಿಂದ ನೀವೆಲ್ಲರೂ ಕುರುಡರಾಗಿದ್ದೀರಿ. ಪೆಟ್ರೋಲ್‌ನ ಎಲ್ಲರಿಗೂ ಏನೂ ಕಾಣದಂತೆ ಕಣ್ಣಿಗೆ ಬಟ್ಟೆಕಟ್ಟಿ,

ತಯಾರಾದ ಕೂಡಲೇ ತಿಳಿಸಿ. ನಿಮ್ಮನ್ನು ಈಗಾಗಲೇ ಸಿದ್ಧಪಡಿಸಿರುವ ಜಾಡಿನಲ್ಲಿ ಬಿಡಲಾಗುತ್ತದೆ. ನೀವು ಅದನ್ನನುಸರಿಸಿ ಎಲ್ಲಿಗೆ ಒಯ್ದರೆ ಅಲ್ಲಿಗೆ ಹೋಗಬೇಕು.

**ಯೋಜನೆ(ಉ) :–** ಏರೋಪ್ಲೇನ್‌ನಿಂದ ಒಂದು ಯೂರೇನಿಯಂ ಡ್ರಮ್ಮು, ಜಾಳಾದ ಮರಳಿನ ಮೇಲೆ ಬಿದ್ದು ಹೋಗಿದೆ. ಈಗಾಗಲೇ ಅಲ್ಲಿನ ನೆಲ, ಮರಗಿಡಗಳು, ತಂತಿಬೇಲಿ ಎಲ್ಲವೂ ರೇಡಿಯೋ ಆ್ಯಕ್ಟಿವ್ ಆಗಿಬಿಟ್ಟಿವೆ. 20 ನಿ. ಗಳೊಳಗೆ ಆ ಡ್ರಮ್ಮು ಜಾಳಾದ ಮರಳಿನೊಳಗೆ ಕಾಣೆಯಾಗಿ ಬಿಡುತ್ತದೆ. ಅಷ್ಟರೊಳಗೆ ನೀವು ಆ ಡ್ರಂ ಅನ್ನು ನೆಲದಿಂದಾಚೆಗೆ ತೆಗೆದು ನಿಲೆ ಹಾಕಿಬಿಡಬೇಕು.

**ಯೋಜನೆ(ಊ) :–** ನಿಮ್ಮ ಎದುರಿಗೆ ಒಂದು ನದಿ ಹರಿಯುತ್ತಿದೆ. ಹಿಂಬದಿಯ ದಡವು ಎತ್ತರವಾಗಿದ್ದು, ನೀವು ಅಲ್ಲಿಂದ ನದಿಯನ್ನು ದಾಟಬೇಕು. ನಿಮ್ಮ ಅದೃಷ್ಟವನ್ನೇನೆಂದು ಹೇಳಲಿ! ನಿಮ್ಮಲ್ಲಿ ಅಡಿಗೆ ಮಾಡುವವನು ಪೂರಾ ಕುರುಡ. ನಿಮ್ಮ ಪೆಟ್ರೋಲ್ ಲೀಡರಿಗೆ ಕಿವಿಯೇ ಕೇಳಿಸುವುದಿಲ್ಲ.

**ಯೋಜನೆ(ಎ) :–** ನಿಮ್ಮ ಎದುರಿಗೆ ನದಿ, ನೀರಿನಲ್ಲಿಳಿಯದೆ ನದಿ ದಾಟಬೇಕು. ಏಕೆಂದರೆ ನೀರಿನಲ್ಲಿ ಮೊಸಳೆಗಳಿವೆ. ನಿಮ್ಮ ಹಿಂದಿರುವ ಹಗ್ಗವನ್ನುಪಯೋಗಿಸಿ ನದಿ ದಾಟಬೇಕು. ಎಲ್ಲರೂ ದಾಟಿದ ಮೇಲೆ ಹಗ್ಗವನ್ನು ಸುತ್ತಿ ನಿರ್ಣಾಯಕರಿಗೆ ಕೊಡಿ.

**ಪೆಟ್ರೋಲ್ ಲೀಡರುಗಳಿಗೆ ತಿಳುವಳಿಕೆ :**

ಪೆಟ್ರೋಲ್ ಲೀಡರುಗಳಿಗೆ ಸಂಪೂರ್ಣವಾದ, ವಿವರವಾದ ತಿಳುವಳಿಕೆ ನೀಡುವುದು ಅತ್ಯವಶ್ಯಕವಾದುದು. ಅದು ಈ ರೀತಿ ಇರಬಹುದು.

| **ಅಡಚಣೆಯ ತಾಣ** | **ಸ್ಥಳ** | **ನಿರ್ಣಾಯಕ** |
|---|---|---|
| 1. ಪ್ರವಾಹ ಪ್ರದೇಶ | . . . | . . . |
| 2. ಬಂದೀಖಾನೆ ಪ್ರದೇಶ | . . . | . . . |
| 3. ಧ್ವಜಸ್ತಂಭ ಆವರಣ | . . . | . . . |

ಅಡಚಣೆಯ ತಾಣ, ಸ್ಥಳ ಹಾಗೂ ನಿರ್ಣಾಯಕರ ಬಗ್ಗೆ ನಿಖರವಾಗಿ ತಿಳಿಸಬೇಕು. ವಿವಿಧ ಅಡಚಣೆಯ ತಾಣಗಳನ್ನು ಸೇರಿದ ಮೇಲೆ ಅಲ್ಲಿ ಎದುರಿಸಬೇಕಾದ ಕಾಲಮಾನವನ್ನೂ ನಿಖರವಾಗಿ ತಿಳಿಸಬೇಕು.

| ಉದಾ : | **ಕಾಲ/ವೇಳೆ** | **ತಾಣ–1** | **ತಾಣ–2** | **ತಾಣ–3** |
|---|---|---|---|---|
| | ಮ॥ 3 ಗಂಟೆ | ಸಿಂಹಗಳು | ಹುಲಿಗಳು | ಮೈನಾಗಳು |
| | ಮ॥ 3ಗಂ. 25ನಿ | ಹುಲಿಗಳು | ಮೈನಾಗಳು | ಸಿಂಹಗಳು |
| | ಮ॥ 3ಗಂ. 50ನಿ | ಮೈನಾಗಳು | ಸಿಂಹಗಳು | ಹುಲಿಗಳು |

**ವಿಶೇಷ ಗಮನಿಕೆ:** (1) ಕಾಲಸೂಚಿಯು ಅಡಚಣೆಯನ್ನೆದುರಿಸಲು ಪ್ರಾರಂಭಿಸುವ ಕಾಲ. ಪೆಟ್ರೋಲ್‌ಗಳು ಆಯಾ ತಾಣಗಳಲ್ಲಿ ತಮ್ಮ ಕಾರ್ಯವನ್ನು ಮುಗಿಸಿ, ಮುಂದಿನ ತಾಣದಲ್ಲಿ ಸಮಯಕ್ಕೆ ಸರಿಯಾಗಿ ಸೇರಿಕೊಂಡು, ಪ್ರಾರಂಭಿಸಲು ಅನುಕೂಲವಾಗುವಂತೆ, ಕೆಲಸ ಮಾಡಬೇಕು.

(2) ಒಂದು ತಾಣದಲ್ಲಿ ಕೆಲಸ ಮುಗಿದ ಕೂಡಲೇ ಉಪಯೋಗಿಸಿದ ಸಾಮಾನುಗಳನ್ನು ಬಿಡಿಬಿಡಿಯಾಗಿ, ಉಗ್ರಾಣಾಧಿಕಾರಿಗಳಿಗೆ ಹಿಂದಿರುಗಿಸಬೇಕು.

(3) ದಳದ ಎಲ್ಲಾ ಪೆಟ್ರೋಲ್‌ಗಳೂ, ಎಲ್ಲಾ ಯೋಜನೆಗಳನ್ನೂ ಮ॥ 4.15 ರೊಳಗೆ ಮುಗಿಸಿ, ಸಂಜೆ 5 ಗಂಟೆಗೆ ಸರಿಯಾಗಿ ದಳದ ಸಭಾಲಯದ ಬಳಿ ಹಾಜರಾಗಬೇಕು.

## ಪೆಟ್ರೋಲ್ ಸಭೆಗಳು ಮತ್ತು ಸ್ಪರ್ಧೆಗಳು :

ಪೆಟ್ರೋಲ್ ಯೋಜನಾ ಪತ್ರಗಳನ್ನು ಕೊಡುವುದರಿಂದ ಅಥವಾ ಬೇರೆಯ ರೀತಿಯಲ್ಲಿ ತಿಳುವಳಿಕೆ ಪತ್ರ ಕೊಡುವುದರಿಂದ, ಪೆಟ್ರೋಲ್ ಸಭೆಗಳನ್ನು ನಡೆಸಲು ಹೆಚ್ಚು ಅನುಕೂಲವಾಗುತ್ತದೆ. ಈ ರೀತಿಯ ತಿಳುವಳಿಕೆಯು ಪ್ರತಿ ಪೆಟ್ರೋಲ್‌ಗೂ ಬೇರೆ ಬೇರೆ ಆಗಿರುತ್ತದೆ. ಈ ಯೋಜನೆಗಾಗಿ ಅವರಿಗೆ ಒದಗಿಸುವ ವಸ್ತುಗಳನ್ನು ಪೆಟ್ರೋಲ್‌ಗಳು ಪಡೆದುಕೊಳ್ಳುತ್ತವೆ. ಅವಶ್ಯಕತೆ ಇದ್ದರೆ ಮತ್ತೇನನ್ನು ಬೇಕಾದರೂ ಪಡೆಯಬಹುದು. ಅತ್ಯವಶ್ಯಕ ವಸ್ತುಗಳನ್ನು ಒದಗಿಸಲೇಬೇಕು. ಈ ರೀತಿ ವಸ್ತುಗಳನ್ನು ಪಡೆದ ಮೇಲೆ ಯೋಜನೆಯನ್ವಯ ಕೆಲಸ ಮುಗಿಸಿ, ಮುಗಿದ ಕೆಲಸವನ್ನು ನಿಗದಿತ ವೇಳೆ ಹಾಗೂ ಸ್ಥಳಕ್ಕೆ ತಂದು ಪ್ರದರ್ಶಿಸಬೇಕು.

ಪೆಟ್ರೋಲ್ ಸಭೆಗಳು ಸ್ಪರ್ಧಾತ್ಮಕವಾಗಬಾರದು. ಪೆಟ್ರೋಲ್‌ಗಳನ್ನು ಪರಸ್ಪರ ತಾಳೆ ಮಾಡುವುದಾಗಲೀ, ಅವರ ಕೆಲಸಕ್ಕೆ ಅಂಕಗಳನ್ನು ಕೊಡುವುದಾಗಲೀಬಾರದು.

ಪೆಟ್ರೋಲ್ ಸಭೆಗಳು ಎಂದರೆ ಸ್ಕೌಟ್ ಕಲೆಗಳನ್ನು ಅಭ್ಯಾಸ ಮಾಡುವುದಕ್ಕೆ ಒಂದು ಸದವಕಾಶವೆಂದು ಭಾವಿಸಬೇಕು. ಸ್ವಾರಸ್ಯಕರವಾಗಿ, ವಿನೋದಾತ್ಮಕವಾಗಿ, ಸಾಹಸಮಯವಾಗಿ ನಡೆಯುವ ಈ ಸಭೆಗಳಲ್ಲಿ ಸ್ಕೌಟಿಂಗ್‌ನ ತಾಂತ್ರಿಕ ಶಿಕ್ಷಣವನ್ನು ಕ್ರಿಯಾತ್ಮಕವಾಗಿ ಅಳವಡಿಸಿ, ಉಪಯೋಗಕರವಾಗಿ ನಡೆಸಬೇಕು.

**ಈ ಕೆಳಕಂಡ ಉದಾಹರಣೆಗಳನ್ನು ನೋಡಿ:-**

1) ಕಕ್ಕಸುಗಳ ಮರೆ, ತೆರೆಗಳನ್ನು ಸ್ಥಳದಲ್ಲಿ ಲಭ್ಯ ಇರುವ ವಸ್ತುಗಳಿಂದ ಕಲ್ಪಿಸುವುದು.

2) ಮರಗಳ (ಬೇರೆ ಬೇರೆ) ಉರಿಯುವ ಗುಣವನ್ನು (Burning Properties) ಪರೀಕ್ಷಿಸುವುದು.

3) ನೆರಳು ಗಡಿಯಾರ (Sundial) ಶಿಬಿರದ ಮಗ್ಗ (Camp loom) ಶಿಬಿರ ದಾಹಕ (Camp Incinerator) ಗಳನ್ನು ಮಾಡುವುದು.

4) ವಿಶೇಷ ರೀತಿಯ ಶಿಬಿರದ ಉಪಕರಣಗಳನ್ನು ಉಪಯೋಗಿಸುವುದು (Camp Gadgets).

5) ಮಟ್ಟ ರೇಖೆಗಳನ್ನು ನಿದರ್ಶಿಸುವ ಉಪಕರಣವನ್ನು ತಯಾರಿಸುವುದು.

6) ಒಂದು ಹೊಂಡದ ಸಮೀಕ್ಷೆ ನಡೆಸಿ ಅದರ ಆಳದ ಬಗ್ಗೆ ಮಟ್ಟ ರೇಖೆಗಳನ್ನು ಗುರುತಿಸುವುದು.

7) ಸೂರ್ಯನ ಸಹಾಯದಿಂದ ಉತ್ತರ ದಿಕ್ಕನ್ನು ಕಂಡುಹಿಡಿಯಬಹುದಾದ ದಿಕ್-ಯಂತ್ರವನ್ನು (apparatus) ತಯಾರಿಸುವುದು.

8) ದಂಡಗಳನ್ನು ಉಪಯೋಗಿಸಿ ಧ್ವಜಸ್ತಂಭ ನಿರ್ಮಾಣದಂತಹ ಸರಳವಾದ ಯೋಜನೆಗಳನ್ನು ತಯಾರಿಸುವುದು.

9) ಹಕ್ಕಿಗಳ ಸ್ನಾನ ತೊಟ್ಟಿಯನ್ನು ತಯಾರಿಸುವುದು.

10) ಹವಾಮಾನ ವೀಕ್ಷಣಾಲಯವನ್ನು ಸ್ಥಾಪಿಸುವುದು.

11) ಒಂದು ಸಣ್ಣ ಸಂಚಾರ ನಡೆಸಿ ವರದಿಯನ್ನೊಪ್ಪಿಸುವುದು.

ಈ ಮುಂಚೆ ತಿಳಿಸಿರುವ ಅಡಚಣೆಗಳ (ಯೋಜನೆಗಳ) ನಿರ್ವಹಣೆಗೆ ಸೂಕ್ತ ಸಲಹೆಗಳು.

**1. ಪ್ರವಾಹ ಸೂಚನೆ :** ಮರದ ಮೇಲೆ ಟೀ ಮತ್ತು ಉಪಾಹಾರ ತಯಾರಿಸಲು ಒಲೆಯನ್ನು ಹಚ್ಚಬೇಕಾಗುತ್ತದೆ. ಇದಕ್ಕಾಗಿ ನಿರಿಗೆಗಳುಳ್ಳ ಕಬ್ಬಿಣದ ಹಾಸನ್ನು (Corrugated iron sheet) ಮರದ ಮೇಲೆ ಜಗುಲಿಯನ್ನಾಗಿ ಉಪಯೋಗಿಸಬಹುದು.

**2. ಕೋಟೆಯೊಳಗಿನ ಬಂದೀಖಾನೆ :** ಒಂದು ಎತ್ತರವಾದ ಮರದ ದಿಮ್ಮಿಯ ಹಲಗೆಯನ್ನು ನಿಲೆಹಾಕಿ ಸ್ಕೌಟುಗಳನ್ನು ಒಬ್ಬೊಬ್ಬರನ್ನಾಗಿ ಎದುರುಕಡೆಗೆ ರವಾನಿಸುವುದು. ಕೊನೆಯ ಸ್ಕೌಟು ದಿಮ್ಮಿಯನ್ನು ಆಕಡೆ ಇರುವ ಸ್ಕೌಟುಗಳು ಹಿಡಿಯುಂತೆ ನಿಧಾನವಾಗಿ ಇಳಿಸುವುದು. ಆ ಬಳಿಕ ಅದರ ಮೇಲೆ ಹತ್ತಿ ತೆವಳುತ್ತಾ ಹಾಯುವುದು.

**3. ಧ್ವಜಸ್ತಂಭ ನಿರ್ಮಾಣ:** ಧ್ವಜಸ್ತಂಭದ ತುದಿಯಲ್ಲಿ ಒಂದು ಕೀಲಿ ಉಂಗುರವನ್ನು ಕಟ್ಟಿ ಹ್ಯಾಲ್‌ಯಾರ್ಡ್‌ನ್ನು ಅದರೊಳಗೆ ತೂರಿಸಬಹುದು.

**4. ಅತೀವ ಸೂರ್ಯ ಪ್ರಕಾಶದಿಂದುಂಟಾದ ಕುರುಡುತನ (Sun Blindness):** ಸ್ಕೌಟುಗಳು ಒಂದು ನಿಶ್ಚಿತ ರೀತಿಯಲ್ಲಿ ಒಬ್ಬರನ್ನೊಬ್ಬರು ಹಿಡಿದು ನಿಲ್ಲಬೇಕು. ಪೆಟ್ರೋಲ್‌ಲೀಡರು ಮೊದಲು ತಾನು, ಅಡಚಣೆಗಳನ್ನು ಹಂತ ಹಂತವಾಗಿ ಪರಿಶೋಧಿಸಿ, ಆ ಬಳಿಕ ಸ್ಕೌಟುಗಳಿಗೆ ಒಬ್ಬರಾದ ಬಳಿಕ ಇನ್ನೊಬ್ಬರಿಗೆ ಮಾರ್ಗದರ್ಶನ ನೀಡಬೇಕು.

**5. ಯೂರೇನಿಯಂ ಡ್ರಂ :** ತಲೆಯ ಮೇಲೆತ್ತರದಲ್ಲಿರುವ ಮರದ ಕೊಂಬೆಗೆ, ಎರಡು ಚಕ್ರಗಳಿರುವ ರಾಟೆಗಳನ್ನು ಕಟ್ಟಿ, ಒಂದು ರಾಟೆಯು ಡ್ರಂನ ಮೇಲೆ ಸರಿಯಾಗಿರಲಿ. ಇನ್ನೊಂದು ರೇಡಿಯೋ ಆಕ್ಟಿವ್ ಪ್ರದೇಶದಿಂದ ಹೊರಗಿರಲಿ. ಬಲವಾದ ಹಗ್ಗವನ್ನು ಎರಡೂ ಚಕ್ರಗಳೊಳಗೆ ಹಾಯಿಸಿ. ಈ ಹಗ್ಗಕ್ಕೆ 60 ಸೆ.ಮೀ.ಉದ್ದದ, ಬಲವಾದ ಹುರಿಯನ್ನು ಬಿಗಿಸಿ. ಈ ಹುರಿಯ ತುದಿಯಲ್ಲಿ 10 ಸೆ.ಮೀ. ಉದ್ದದ ಒಂದು ಕೊಕ್ಕೆ ಇರಲಿ. ರೇಡಿಯೋ ಆ್ಯಕ್ಟಿವ್ ಪ್ರದೇಶದಿಂದ ಹೊರಗಿದ್ದುಕೊಂಡು, ಈ ಕೊಕ್ಕೆಯು ಡ್ರಂನ ಮುಚ್ಚಳದಲ್ಲಿನ ಹಿಡಿಯಲ್ಲಿ ಸಿಕ್ಕಿಹಾಕಿಕೊಳ್ಳುವಂತೆ ಮಾಡಿ. ಮುಚ್ಚಳದಲ್ಲಿ ಎರಡು ಹಿಡಿಗಳಿದ್ದರೆ ಎರಡು ಕೊಕ್ಕೆಗಳನ್ನು ಬೇರೆ ಬೇರೆಯಾಗಿ ಸಿಕ್ಕು ಹಾಕಬೇಕು. ಈಗ ನಿಧಾನವಾಗಿ ಡ್ರಮ್ಮನ್ನು ಮೇಲೆತ್ತಿ ಸುರಕ್ಷಿತ ಪ್ರದೇಶಕ್ಕೆ ತನ್ನಿ.

**6. ತೊರೆ ದಾಟುವುದು:** ಸ್ಕೌಟ್ ವಾಹಕರನ್ನು ಈ ಕೆಲಸಕ್ಕೆ ನಿಯಮಿಸಿಕೊಳ್ಳಬೇಕು. ಕುರುಡನಿಗೆ ಮಾತಿನಲ್ಲಿ ಮಾರ್ಗದರ್ಶನ ನೀಡಬೇಕು. ಕಿವುಡನಿಗೆ ಕೈಸನ್ನೆಯ ಮೂಲಕ ತಿಳಿಸಬೇಕು.

**7. ನೀರಿಗಿಳಿಯದೆ ತೊರೆಯನ್ನು ದಾಟುವುದು :** ಹಗ್ಗ ಹಿಡಿದು ವೇಗವಾಗಿ ತೂಗಿ, ಹಾರಿ ಒಬ್ಬೊಬ್ಬರಾಗಿ ತೊರೆಯ ಎದುರು ದಡ ಸೇರುವುದು. ಎತ್ತರವಾದ ಕೊಂಬೆಗೆ ಹಗ್ಗದಿಂದ ದಾರಿಗಳ್ಳನ ಮಲಕು ಗಂಟು ಹಾಕಿರಬೇಕು.

ಪೆಟ್ರೋಲ್‌ಗಳ ಪರಸ್ಪರ ಸಾಮರ್ಥ್ಯವನ್ನು ತಾಳೆ ನೋಡುವ ಉದ್ದೇಶದಿಂದ ಪೆಟ್ರೋಲ್ ಸ್ಪರ್ಧೆಗಳನ್ನು ನಡೆಸಲಾಗುತ್ತದೆ. ಪೆಟ್ರೋಲ್ ಸ್ಪರ್ಧೆಗಳು ಒಂದು ಮಿತಿಯಲ್ಲಿರಬೇಕು. ಅತಿ ಹೆಚ್ಚಾದರೆ ಒಂದು ರೀತಿಯ ವಿರಸ ಭಾವನೆಯು ಮೂಡುತ್ತದೆ. ಅದು ಒಳ್ಳೆಯದಲ್ಲ.

ಸ್ಪರ್ಧೆಗಳಲ್ಲಿ ಹೆಚ್ಚುಗಾರಿಕೆಯನ್ನು ತೋರಿಸುವ ಮನೋಭಾವನೆಯೂ ಮುಂದಿರುತ್ತದೆ. ಅಂಕಗಳನ್ನೂ ಕೊಡಬೇಕಾಗುತ್ತದೆ. ನಿರ್ಣಾಯಕ ಸ್ಕೌಟರುಗಳು ಸ್ಪರ್ಧೆಗಳ ಪೂರಾ ಅವಧಿ ಹಾಜರಿರಬೇಕು. ಪ್ರಾರಂಭದಿಂದ ಅಂತ್ಯದ ವರೆಗೆ ಎಲ್ಲಾ ಹಂತಗಳಲ್ಲಿಯೂ ಪ್ರತಿ ಅಂಶವನ್ನೂ ಗಮನಿಸಿ ಅಂಕಗಳನ್ನು ನೀಡಬೇಕು.

**ಅಂತರ ಪೆಟ್ರೋಲ್ ಸ್ಪರ್ಧೆಗೆ ಈ ಕೆಳಕಂಡ ವಿಷಯಗಳು ಸರಿಯೆನಿಸುತ್ತವೆ:**

1. ಪ್ರಕೃತಿ ಸಹಜವಾದ ಬಣ್ಣಗಳು ಎಂದರೆ ಎಲೆಗಳ ರಸ, ಹಣ್ಣಿನ ರಸ, ಹುಲ್ಲು, ಹೂ ಇತ್ಯಾದಿಗಳನ್ನು ಉಪಯೋಗಿಸಿ, ಯಾವುದಾದರೊಂದು ಗುರುತಿಸಬಹುದಾದ ವಸ್ತುವನ್ನು ಚಿತ್ರಿಸುವುದು.
2. ಮೋಂಬತ್ತಿಯನ್ನು ಹತ್ತಿಸಿ ಅದು ಆರದಂತೆ ಎಚ್ಚರಿಕೆ ವಹಿಸಿ ನೆಲಮಟ್ಟ ದಿಂದ ಕನಿಷ್ಠ 3. ಮೀ. ಮೇಲೆ ಅದನ್ನು ನಿಲ್ಲಿಸುವುದು.
3. ದಾಪುಗಾಲು ನಡಿಗೆ (Giant Stride) ಸ್ಕೌಟ್‌ವಾಹಕ, (Scout transporter) ಮಾರ್ಜಾಲರೀತಿಯ ಮಟ್ಟಸ ತೆವಳಿಕೆ, (Feline flat crawl) ಸ್ಪ್ಯಾನಿಷ್ ಎತ್ತು ಯಂತ್ರ (Spanish Windlass) ಕೃತಕ ಶ್ವಾಸಕ್ರಮ ಇವುಗಳನ್ನು ಪ್ರಾಯೋಗಿಕವಾಗಿ ತೋರಿಸುವುದು.

ಇವು ಕೆಲವು ಉದಾಹರಣೆಗಳು. ಹಾಗೆ ನೋಡಿದರೆ ಸ್ಕೌಟ್ ಕೌಶಲಗಳ ಪ್ರತಿ ವಿಷಯವೂ ಸ್ಪರ್ಧಾತ್ಮಕ ವಿಷಯವಾಗಬಲ್ಲದು.

ಪೆಟ್ರೋಲ್ ಸಭೆ ಮತ್ತು ಪೆಟ್ರೋಲ್ ಸ್ಪರ್ಧೆಗಳು ಬೇರೆಬೇರೆ ರೀತಿಯ ದಳದ ಸಭೆಗಳಾಗಿವೆ. ಗುಣಾತ್ಮಕವಾಗಿಯೂ, ಭಾವನಾತ್ಮಕವಾಗಿಯೂ ಅವುಗಳನ್ನು ನಡೆಸುವ ರೀತಿಯೂ ಬೇರೆಯದೇ ಆಗಿರುತ್ತದೆ. ಒಂದರಲ್ಲಿ ಗುಣಾತ್ಮಕ ಸ್ಪರ್ಧೆ ಇದ್ದರೆ ಇನ್ನೊಂದರಲ್ಲಿ ಕಲಿಕೆಯೇ ಪ್ರಧಾನವಾಗಿರುತ್ತದೆ. ಆದರೆ ಎರಡನ್ನೂ ಸ್ಕೌಟ್ ಕೌಶಲಗಳ ಸುತ್ತ ಹೆಣೆಯಲಾಗಿದೆ. ಎರಡೂ ರೀತಿಯ ಸ್ಪರ್ಧೆಗಳು ಉಪಯುಕ್ತವೂ, ಸಮರ್ಥನೀಯವೂ ಆಗಿರುತ್ತವೆ. ಸ್ಪರ್ಧೆಗಳನ್ನು ಸೂಕ್ತ ರೀತಿಯ ಭಾವನಾತ್ಮಕ ಹಿನ್ನೆಲೆಯಲ್ಲಿ ನಡೆಸಬೇಕಾಗುತ್ತದೆ.

## 4. ಶಿಕ್ಷಣ ನೀಡುವುದು ಮತ್ತು ಪರೀಕ್ಷೆ ನಡೆಸುವುದು :

ಉದಾ॥ **1. ಪ್ರವಾಸೀ ಫಲಕ ಪಂದ್ಯ:** ಇದೊಂದು ರೀತಿಯ ದಳದ ಸಭೆ. ಇದರಲ್ಲಿ ಶಿಕ್ಷಣ ನೀಡಲೂ, ಪರೀಕ್ಷಿಸಲೂ ಬರುತ್ತದೆ. ಸ್ವಾರಸ್ಯಕರವಾದ, ಸ್ಪರ್ಧಾತ್ಮಕ ಪಂದ್ಯವನ್ನಾಗಿಯೂ ಆಡಿಸಬಹುದು.

ನೆಲೆಗಳು ಅಥವಾ ತಾಣಗಳನ್ನು ನಿಗದಿಪಡಿಸುವುದು. ಪ್ರತಿನೆಲೆಯಲ್ಲಿಯೂ ಒಬ್ಬ ಸ್ಕೌಟರ್ ಇರುತ್ತಾನೆ. ಸ್ಕೌಟರ್ ಇಲ್ಲದಿದ್ದರೆ ಒಬ್ಬ ರೋವರ್ ಆದರೂ ಆಗಬಹುದು.

ಸ್ಕೌಟುಗಳನ್ನು ನೆಲೆಗಳಿಗೆ ಹೊಂದುವಂತೆ ಗುಂಪುಗಳಾಗಿ ವಿಂಗಡಿಸುವುದು. ನಿಯತ ರೀತಿಯಲ್ಲಿ ಒಂದಾದ ಮೇಲೊಂದರಂತೆ ನೆಲೆಗಳಿಗೆ ಹೋಗಿ ಅಲ್ಲಿನ ವಿಷಯವನ್ನು ಕಲಿತುಕೊಳ್ಳುವುದು. ಪ್ರಾರಂಭದಲ್ಲಿ ಒಂದೊಂದು ಗುಂಪು ಒಂದೊಂದು ನೆಲೆಯಲ್ಲಿ, ಅಲ್ಲಿ ಹೇಳಿಕೊಡುವ ವಿಷಯವನ್ನು ಕಲಿಯುತ್ತದೆ. ಸಂಕೇತ ಬಂದ ಕೂಡಲೇ ಪ್ರತಿ ಗುಂಪೂ ಅಲ್ಲಿಂದ ಮುಂದಿನ ನೆಲೆಗೆ ಹೋಗಿ ಕಲಿಯುತ್ತದೆ. ಹೀಗೆ ಎಲ್ಲಾ ಗುಂಪುಗಳೂ, ಎಲ್ಲಾ ನೆಲೆಗಳಲ್ಲಿಯೂ, ಕಲಿಕೆಯನ್ನು ಮುಂದುವರಿಸಿ ಮುಗಿಸುತ್ತವೆ.

ಉದಾ॥ ಆರು ಕಲಿಕೆ ನೆಲೆಗಳಿವೆಯೆನ್ನಿ ಒಂದೊಂದು ನೆಲೆಯಲ್ಲಿ ಹತ್ತು ಹತ್ತು ನಿಮಿಷಗಳಂತೆ ಕಲಿತರೆ, ಒಂದು ಗಂಟೆ (60 ನಿ) ಯೊಳಗೆ, ಎಲ್ಲಾ ಆರು ಕಲಿಕೆಯ ವಿಷಯಗಳನ್ನೂ ಆರು ಗುಂಪುಗಳೂ ಕಲಿತಂತಾಯಿತು.

ಪರೀಕ್ಷೆ ನಡೆಸುವಾಗ ಹೆಚ್ಚು ಕಡಿಮೆ, ಇದೇ ರೀತಿಯೇ ಆದರೂ ಸ್ವಲ್ಪ ವ್ಯತ್ಯಾಸ ಇರುತ್ತದೆ. ಆದರೆ ಪ್ರತಿಯೊಬ್ಬನ ಬಳಿಯಲ್ಲಿಯೂ, ಪರೀಕ್ಷಾಂಶಕ್ಕೊಂದ ರಂತೆ, ಅದನ್ನು ನಮೂದಿಸಿದ ಕಾರ್ಡ್ ಇರುತ್ತದೆ. ಪ್ರತಿ ಕಾರ್ಡಿನಲ್ಲಿಯೂ 3 ಕಾಲಮ್ಮುಗಳಿರುತ್ತವೆ. ಈ ಕಾಲಮ್ಮುಗಳು, ಬಾಲಕನು ಎಷ್ಟನೇ ಪ್ರಯತ್ನದಲ್ಲಿ ಪರೀಕ್ಷಾಂಶವನ್ನು ಮುಗಿಸಿರುತ್ತಾನೆ ಎಂಬುದನ್ನು ಸೂಚಿಸುತ್ತದೆ. ಹಾಗಾಗಿ ಪ್ರತಿ ಬಾಲಕನಿಗೂ ಪ್ರತಿ ನೆಲೆಯಲ್ಲಿಯೂ ಪರೀಕ್ಷಾಂಶದ ಪೂರೈಕೆಗೆ 3 ಅವಕಾಶಗಳಿರುತ್ತವೆ.

ಈ ಮುಂಚಿನಂತೆ, ಪರೀಕ್ಷಾಂಶ ನೆಲೆಗಳೆಷ್ಟಿವೆಯೋ ಅಷ್ಟು ಗುಂಪುಗಳನ್ನು ವಿಂಗಡಿಸುವುದು, ಅಲ್ಲದೆ ಅಷ್ಟೇ 'ರಿಪೇರಿ ಷಾಪ್' ನೆಲೆಗಳನ್ನೂ ಸ್ವಲ್ಪ ದೂರದಲ್ಲಿ ತಯಾರಾಗಿ ನಿಲ್ಲಿಸುವುದು. ಒಂದೊಂದು ಗುಂಪು ಒಂದೊಂದು ಪರೀಕ್ಷಾ

ನೆಲೆಯನ್ನು ಸೇರಿಕೊಳ್ಳುತ್ತದೆ. ಪ್ರತಿ ಸ್ಕೌಟೂ ಪರೀಕ್ಷಾಂಶ ಮುಗಿದ ಕೂಡಲೇ ಮುಂದಿನ ನೆಲೆಗೆ ಸೇರಿಕೊಳ್ಳುತ್ತಾನೆ.

ಮೊದಲ ಪ್ರಯತ್ನದಲ್ಲಿ ಪರೀಕ್ಷಾಂಶ ಮುಗಿಸಿದ ಸ್ಕೌಟ್‌ಗೆ ಕಾಲಂ 1 ರಲ್ಲಿ 5 ಅಂಕ ಗುರುತಿಸಿ, ಉಳಿದೆರಡು ಕಾಲಂಗಳಲ್ಲಿ '×' ಗುರುತಿಸಲಾಗುತ್ತದೆ. ನೆಲೆಯಲ್ಲಿನ ಸ್ಕೌಟರು/ರೋವರು ಸಹಿ ಹಾಕಿ ಕಾರ್ಡ್ ಕೊಡುತ್ತಾರೆ.

ಹಾಗೆ ಮೊದಲ ಪ್ರಯತ್ನದಲ್ಲಿ ಆಗದಿದ್ದರೆ, ಕಾಲಂ 1 ರಲ್ಲಿ '×' ಗುರುತಿಸಿ ಕಾರ್ಡ್ ಹಿಂದಿರುಗಿಸಲಾಗುತ್ತದೆ. ಕೂಡಲೇ ಆ ಸ್ಕೌಟ್ ಸಂಬಂಧಪಟ್ಟ ರಿಪೇರ್ ಷಾಪ್‌ಗೆ ಹೋಗಿ ಕಲಿತು, ಪುನಃ ಪರೀಕ್ಷೆಗೆ ಬರುತ್ತಾನೆ. ಪರೀಕ್ಷಾಂಶ ಮುಗಿಸಿದರೆ 2ನೇ ಕಾಲಂನಲ್ಲಿ '3' ಅಂಕೆ. ಮುಗಿಸದೇ ಇದ್ದರೆ ಮತ್ತೆ '×' ಗುರುತು. ಪುನಃ ರಿಪೇರಿ ಷಾಪ್. ಮುಗಿಸಿದ ಸ್ಕೌಟ್ ಮುಂದಿನ ನೆಲೆ.

ಮೂರನೇ ಪ್ರಯತ್ನದಲ್ಲಿ ಮುಗಿಸಿದರೆ 3ನೇ ಕಾಲಂನಲ್ಲಿ '1' ಅಂಕೆ. ಈ ಪ್ರಯತ್ನದಲ್ಲೂ ವಿಫಲನಾದರೆ, ಅವನ ಕಲಿಕೆಯ ಶ್ರದ್ಧೆಗಾಗಿ '×' ಗುರುತಿನ ಜೊತೆಗೆ '1' ಅಂಕೆ ಕೊಟ್ಟು ಸಹಿಹಾಕಿ ಮುಂದಿನ ನೆಲೆಗೆ ಕಳುಹಿಸಬಹುದು.

ಕಾರ್ಡ್ ನಮೂನೆ: **ಪರೀಕ್ಷಾ ಕಾರ್ಡ್**. . . . . ದಳ, ಊರು: . . . .
ಸ್ಕೌಟ್‌ನ ಹೆಸರು: . . . . ಪಟ್ರೋಲ್: . . . . . ತಾರೀಖು: . . . . .

| ನೆಲೆ ಸಂ. | ವಿಷಯ | ಪ್ರಯತ್ನ | | | ಸ್ಕೌಟ್‌ರನ/ರೋವರನ ಸಹಿ |
|---|---|---|---|---|---|
| | | 1 | 2 | 3 | |
| | | | | | |

ಒಟ್ಟಿನಲ್ಲಿ ಹೇಳುವುದಾದರೆ, ವಾರಕ್ಕೆರಡು ಬಾರಿ ಸೇರುವ, ದಳದ ಸಭೆಗಳ ಪ್ರತಿ 75 ನಿಮಿಷಗಳನ್ನೂ, ಉಪಯುಕ್ತಕರವಾಗಿ ಕಳೆದಂತಾಗುತ್ತದೆ. ದಳದ ಯಶಸ್ಸಿಗಾಗಿ, ಏಳಿಗೆಗಾಗಿ ಇದು ಬಹಳ ಮುಖ್ಯವಾದ ಅಂಶವಾಗಿದೆ. ಇದರಿಂದ ದಳದ ಪ್ರಗತಿಯನ್ನು ಸಾಧಿಸಿದಂತಾಗುತ್ತದೆ. ದಕ್ಷತೆಯನ್ನು ಹೆಚ್ಚಿಸಿದಂತಾಗುತ್ತದೆ. ದಳದ "ತಂಡ ಮನೋಭಾವನೆ"ಯ ಬೆಳವಣಿಗೆ (Development of Team Spirit) ಉಂಟಾಗುತ್ತದೆ.

ದಳದ ಸಭೆಗಳಲ್ಲಿ ಕೆಲವು ಸರಳವಾಗಿರಬಹುದು, ಪ್ರಕೃತಿ ಅಧ್ಯಯನ, ಅವಲೋಕನೆಗೆ ಕೆಲವು, ಸ್ಕೌಟ್ ಕೌಶಲಗಳ ಕಲಿಕೆಗೆ ಕೆಲವು, ಹೀಗೆ ನಡೆಸಬಹುದು. ಹಾಗಾಗಿ ದಳದ ಸಭೆಗಳಲ್ಲಿ ವೈವಿಧ್ಯಮಯ ಕಾರ್ಯಕ್ರಮಗಳನ್ನು ಕಾಣಬಹುದು. ಅಲ್ಲದೇ ಪೆಟ್ರೋಲ್‌ಗಳು ಸ್ಪರ್ಧಾತ್ಮಕವಾಗಿ ಕಲಿಯುತ್ತಿದ್ದರೂ, ಸ್ಪರ್ಧಿಸುತ್ತಿರುವುದರ ಅರಿವಿಲ್ಲದೇ ಕಲಿಯುತ್ತಿರುವುದನ್ನೂ, ಪ್ರತಿಯೊಬ್ಬರೂ ಅವರವರ ಶಕ್ತ್ಯಾನುಸಾರ, ಕಲಿಯುತ್ತಿರುವುದನ್ನೂ, ನಾವುಗಳು ದಳದ ಯಶಸ್ಸಿಗಾಗಿ, ಸ್ಪರ್ಧಾತ್ಮಕ ಮನೋಭಾವನೆಯನ್ನು ಸದುಪಯೋಗ ಮಾಡಿಕೊಳ್ಳುತ್ತಿರುವುದನ್ನೂ ಕಾಣುತ್ತೇವೆ. ಇಷ್ಟೇ ಅಲ್ಲದೇ, ನಾವು ಕಾರ್ಯಕ್ರಮಗಳನ್ನು ರೂಪಿಸಿ, ಕಾರ್ಯಗತ ಮಾಡುವುದನ್ನು, ತಾಂತ್ರಿಕವಾಗಿ ಕಲಿತಂತಾಯಿತು. ಅಲ್ಲದೆ ಪೆಟ್ರೋಲ್ ಕ್ರಮವೆಂಬ "ಮೂಲ ವಿಧಾನ"ವನ್ನು ಆಚರಿಸಿದಂತೆಯೂ ಆಯಿತು.



# ಅಧ್ಯಾಯ–15

# ದಳದ ಲಿಖಾವಟ್ಟುಗಳು

ಸ್ಕೌಟ್ ದಳದಲ್ಲಿ ಪ್ರಾರಂಭದಿಂದಲೂ, ಸೂಕ್ತ ವ್ಯವಹಾರ ವಿಧಾನಗಳನ್ನು ಅನುಸರಿಸಬೇಕು ಮತ್ತು ಅವಶ್ಯಕವಾದ, ಕನಿಷ್ಠ ಸಂಖ್ಯೆಯ ಕೆಲವಾರು ಲಿಖಾವಟ್ಟು[ರಿಜಿಸ್ಟರು[ಗಳನ್ನು ಇಡಬೇಕು.

**1. ದಾಖಲೆ ಪುಸ್ತಕ :** ಇದರಲ್ಲಿ ದಳಕ್ಕೆ ಸೇರಬಯಸುವ/ ಸೇರುವ ಬಾಲಕರಿಗೆ ಸಂಬಂಧಪಟ್ಟಂತೆ ಪೂರಾ ವಿವರಗಳನ್ನು ನಮೂದಿಸಬೇಕು. ಅವನ ಮನೆ, ಶಾಲೆ, ಮುಂತಾದ ವಿವರಗಳು ಇರಲೇಬೇಕು.

ಲಿಖಾವಟ್ಟು ಫೂಲ್ ಸ್ಕೇಪ್ ಅಳತೆಯದಾದರೆ ಒಳ್ಳೆಯದು. ರೂಲ್ಡ್ ರಿಜಿಸ್ಟರು ಆದರೆ ಬಹಳ ಉಪಯೋಗಕರ. ಮೇಲಿನಿಂದ ಕೆಳಕ್ಕೆ ಗೆರೆ ಎಳೆದು, ಈ ಕೆಳಕಂಡ ಕಾಲಂಗಳನ್ನು ಮಾಡಿಕೊಂಡು, ವಿವರಗಳನ್ನು ನಮೂದಿಸಬೇಕು.

1. ಕ್ರಮ ಸಂ.
2. ದಾಖಲಾದ ತಾರೀಕು
3. ಬಾಲಕನ ಹೆಸರು
4. ಹುಟ್ಟಿದ ತಾ॥ ಮತ್ತು ವಯಸ್ಸು
5. ತಂದೆಯ/ತಾಯಿಯ ಹೆಸರು, ಉದ್ಯೋಗ
6. ಮನೆಯ ವಿಳಾಸ
7. ಶಾಲೆ ಮತ್ತು ತರಗತಿ
8. ತರಗತಿಯ ಉಪಾಧ್ಯಾಯರು
9. ಷರಾ:

ಷರಾ ಕಾಲಂನಲ್ಲಿ

(i) ಬಾಲಕನು ಸ್ಕೌಟಿಂಗ್‌ಗೆ ಹೊಸಬನೆ/ಬೇರೆ ದಳದಿಂದ ವರ್ಗಾವಣೆ ಹೊಂದಿ ಬರುತ್ತಿದ್ದಾನೆಯೆ.

(ii) ಹಾಗೆ ವರ್ಗಾವಣೆ ಆಗಿ ಬಂದವನಾದರೆ

(a) ಹಿಂದಿನ ದಳದ ಹೆಸರು, ವಿಳಾಸ,

(b) ಸೂಕ್ತ ಪ್ರಮಾಣ ಪತ್ರ

(c) ಪ್ರಗತಿ ಮಟ್ಟ ಇತ್ಯಾದಿ, ವಿವರವಾಗಿ ನಮೂದಿಸಬೇಕು.

ಈ ರೀತಿಯಲ್ಲಿ ಹಲವಾರು ಕಾಲಂಗಳೂ, ವಿವರಗಳೂ ಬೇಕಾಗಿರುವುದರಿಂದ ರಿಜಿಸ್ಟರಿನಲ್ಲಿ ಬರೆಯುವಾಗ, ಪ್ರತಿ ವಿವರವನ್ನೂ ಅಂದವಾಗಿ, ಸಾಲಾಗಿ ಬರೆಯಬೇಕು.

**2. ಹಾಜರಿ ಪುಸ್ತಕ:** ಪೆಟ್ರೋಲ್ ಲೀಡರುಗಳು ತಮ್ಮ ತಮ್ಮ ಪೆಟ್ರೋಲ್‌ಗಳಿಗೆ ಸಂಬಂಧಿಸಿದಂತೆ ಇದನ್ನು ಇಟ್ಟುಕೊಳ್ಳಬೇಕು. ದಳದ ಸಭೆಗಳು ಮತ್ತು ಸ್ಕೌಟ್ ಸಮಾರಂಭಗಳಲ್ಲಿ ಹಾಗೂ ಇತರ ಸಭೆಗಳು (ಸೇವಾ ಕಾರ್ಯ ಮಾಡುವ ಹಾಗೂ ಇತರೆ) ತಮ್ಮ ಪೆಟ್ರೋಲ್‌ನವರ ಹಾಜರಾತಿಯನ್ನು ಗುರುತಿಸಬೇಕು.

ದಳದ ಹಾಜರಾತಿ ಪುಸ್ತಕವೂ ಒಂದಿರಬೇಕು. ಅದರಲ್ಲಿ ಪೆಟ್ರೋಲ್ ಪ್ರಕಾರ ದಳದ ಎಲ್ಲಾ ಸದಸ್ಯರ ಹಾಜರಿಯನ್ನು ಗುರುತಿಸಬೇಕು. ಇದರಲ್ಲಿ ಈ ಕೆಳಕಂಡ ಕಾಲಂಗಳಿರಬೇಕು. (1) ಕ್ರಮ ಸಂ. (2) ಪೆಟ್ರೋಲ್ ಹೆಸರು (3) ಸ್ಕೌಟ್‌ನ ಹೆಸರು (4) ದಳದ ಸಭೆ ನಡೆದ ತಾರೀಕು (ತಾರೀಕುಗಳಿಗೆ ಕನಿಷ್ಠ 10 ಕಾಲಂಗಳಿರಬೇಕು.)

ಪ್ರತಿ ಪೆಟ್ರೋಲ್‌ಗೂ ಮಧ್ಯೆ ಅವರನ್ನು ಬೇರೆ ಮಾಡಿ ಹೇಳುವಂತೆ ದಪ್ಪ ಗೆರೆಯಿರಬೇಕು.

**3. ಪ್ರಗತಿ ಪುಸ್ತಕ:** ಇದು ಪ್ರತಿ ಸ್ಕೌಟ್‌ನ ಸಾಮರ್ಥ್ಯ ಮಟ್ಟವನ್ನು ನೋಡಿದ ಕೂಡಲೇ ಹೇಳುವಂತಹ, ಸ್ಕೌಟರನಿಗೆ ಅನುಕೂಲಕರವಾದ ಪುಸ್ತಕ.

ಷರಾ: ಬಾಲಕನ ದಕ್ಷತೆಗೆ ಸಂಬಂಧಿಸಿದ ಪ್ರವೇಶ, ಸೋಪಾನ ಪದಕಗಳು, ರಾಜ್ಯ ಪುರಸ್ಕಾರ ಮತ್ತು ರಾಷ್ಟ್ರಪತಿ ಪ್ರಶಸ್ತಿಪದಕಗಳಿಗೆ ಸಂಬಂಧಿಸಿದಂತೆ ಪ್ರವೀಣತಾ ಪದಕಗಳು ಹೀಗೆ ಪ್ರತಿ ಸ್ಕೌಟ್‌ಗೂ, ಒಂದಕ್ಕೂ ಹೆಚ್ಚು ಹಾಳೆಗಳು ಬೇಕಾಗಬಹುದು.

**ಅ. ಪ್ರವೇಶ ಸ್ಕೌಟ್:**

1. ಪೆಟ್ರೋಲ್ ಹೆಸರು
2. ಸ್ಕೌಟ್‌ನ ಹೆಸರು
3. ಪೆಟ್ರೋಲ್‌ನಲ್ಲಿ (ಅಂತಸ್ತು) ಕ್ರಮ ಸಂ.
4. ಪರೀಕ್ಷಾಂಶಗಳನ್ನು ಸಾಧಿಸಿ ಮುಗಿಸಿದ ತಾ॥
   – ಸಂಸ್ಥೆಯ ಬಗ್ಗೆ ಸ್ಥೂಲ ತಿಳುವಳಿಕೆ

– ನಿಯಮ, ಪ್ರತಿಜ್ಞೆ
– ಧ್ಯೇಯ, ಚಿಹ್ನೆ ಇತ್ಯಾದಿ
– ಪ್ರತಿದಿನದ ಉಪಕಾರ
– ಸಮವಸ್ತ್ರ
– ಧ್ವಜಗಳು
– ಕನಿಷ್ಠ 4 ದಳದ ಸಭೆಗಳು
– 4 ಗಂಟೆಗಳ ಉದ್ದೇಶಪೂರಕ ಪಟಾಲಂ ಕಾರ್ಯಕ್ರಮ

5. ದೀಕ್ಷೆ ನೀಡಿದ ತಾರೀಕು

1. ಪೆಟ್ರೋಲ್ ಹೆಸರನ್ನು ಅಡ್ಡಡ್ಡವಾಗಿ ಬರೆದು/ ಪ್ರಾಣಿಯ ಚಿಹ್ನೆಯನ್ನು ಮೂಲೆಯಲ್ಲಿ ಚಿತ್ರಿಸಿ, ಒಂದು ಕಾಲಂ ಕಡಿಮೆ ಮಾಡಬಹುದು.

2. ಸ್ಕೌಟ್‌ನ ಹೆಸರು, ಪೆಟ್ರೋಲ್‌ನ ಕ್ರಮ ಸಂಖ್ಯೆ ಸಹ ಪ್ರತಿ ಪದಕಕ್ಕೂ ಪುನರಾವರ್ತಿಸಬೇಕಾಗಿಲ್ಲ. ಏಕೆಂದರೆ ಒಬ್ಬ ಸ್ಕೌಟ್‌ನ ಬಳಿಕ ಮುಂದಿನವನ ಪ್ರಗತಿ ತಃಖ್ತೆಯನ್ನು ಪ್ರಾರಂಭಿಸಬಹುದು.

3. ಪ್ರತಿ ಸ್ಕೌಟ್‌ನ ಎಲ್ಲಾ ಪದಕಗಳ ವಿವರಗಳು ಬರುವಂತೆ ಮಡಚುವ ಹಾಳೆ/ ಸಹ ಇಡಬಹುದು (Foldable sheet).

## ಆ. ಪ್ರಥಮ ಸೋಪಾನ

1. ಎಲ್ಲಾ ಪರೀಕ್ಷಾಂಶಗಳನ್ನು ಸಾಧಿಸಿ ಮುಗಿಸಿದ ತಾರೀಕು
   i. ಸ್ವಾವಲಂಬನೆ 8 ಅಂಶಗಳು
   ii. ಶಿಸ್ತು 4 ಅಂಶಗಳು
   iii. ಹಗ್ಗದ ಕೌಶಲ 4 ಅಂಶಗಳು
   iv. ಸೇವೆ 4 ಅಂಶಗಳು
   v. ಸಂವಹನ
   vi. ಹೊರಾಂಗಣ 3 ಅಂಶಗಳು
2. ಪದಕ ಪ್ರಧಾನ ಮಾಡಿದ ತಾ॥

## ಇ. ದ್ವಿತೀಯ ಸೋಪಾನ

1 ಎಲ್ಲಾ ಪರೀಕ್ಷಾಂಶಗಳನ್ನು ಸಾಧಿಸಿ ಮುಗಿಸಿದ ತಾ॥

- ಮಾರ್ಗ ಕಲ್ಪನೆ (ಅಗ್ರಗಾಮಿತ್ವ) 4 ಅಂಶಗಳು
- ಬೆಂಕಿ 2 ಅಂಶಗಳು
- ಅಡಿಗೆ 3 ಅಂಶಗಳು
- ದಿಕ್ಸೂಚಿ ಮತ್ತು ನಕ್ಷೆ – 6 ಅಂಶಗಳು
- ಪ್ರಥಮ ಚಿಕಿತ್ಸೆ – 4 ಅಂಶಗಳು
- ಅಂದಾಜು ಮಾಡುವುದು – 2 ಅಂಶಗಳು
- ಹೊರಾಂಗಣ – 5 ಅಂಶಗಳು
- ಸೇವೆ – 7 ಅಂಶಗಳು
- ಇಂದ್ರಿಯ ಶಿಕ್ಷಣ – 2 ಅಂಶಗಳು
- ಪ್ರವೀಣತಾ ಪದಕಗಳು – 2 ಸಂಖ್ಯೆ
- ಶಿಸ್ತು –3 ಅಂಶಗಳು
- ಸಂವಹನ – 2 ಅಂಶಗಳು
- ದೇಶಪ್ರೇಮ – 2 ಅಂಶಗಳು

2. ಪದಕ ಪ್ರದಾನ ಮಾಡಿದ ತಾ॥

**ಈ. ತೃತೀಯ ಸೋಪಾನ:**

i. ಎಲ್ಲಾ ಪರೀಕ್ಷಾಂಶಗಳನ್ನು ಸಾಧಿಸಿ ಮುಗಿಸಿದ ತಾ॥

ii. ಪದಕ ಪ್ರದಾನ ದಿನಾಂಕ

1. ಮಾರ್ಗಕಲ್ಪನೆ (ಅಗ್ರಗಾಮಿತ್ವ) – 6 ಅಂಶಗಳು
2. ಈಜುಗಾರಿಕೆ – 3 ಅಂಶಗಳು ಅಥವಾ 3ನೇ ಅಂಶಕ್ಕೆ ಬದಲು 1 ಪ್ರವೀಣತಾ ಪದಕ
3. ಅಂದಾಜು ಮಾಡುವುದು
4. ಪ್ರಥಮ ಚಿಕಿತ್ಸೆ 7 ಅಂಶಗಳು
5. ನಕ್ಷೆ ಉಪಯೋಗಿಸುವುದು / ತಯಾರಿಸುವುದು
6. ದಳದ ಸಭೆಯಲ್ಲಿ ಏಳರಲ್ಲಿ ಒಂದು ವಿಷಯ ಕುರಿತು 5 ನಿಮಿಷ ಮಾತನಾಡುವುದು.
7. ಹೊರಾಂಗಣ – 3 ಅಂಶಗಳು
8. ಅಡಿಗೆ – ಕಗ್ಗಾಡುವಾಸಿಯ ರೀತಿಯಲ್ಲಿ ನಿಮ್ಮ ಪಟಾಲಂಗೆ
9. ಮೋರ್ಸ್ ಸಂಕೇತಕ್ರಮ

10. ಪ್ರವೀಣತಾ ಪದಕಗಳು ಗುಂಪು-ಎ; ಗುಂಪು-ಬಿಗಳಲ್ಲಿ ಒಂದೊಂದರಂತೆ
11. ತಿಳುವಳಿಕೆ – 2 ಅಂಶಗಳು
12. ಬೆಂಕಿ – 4 ಅಂಶಗಳು
13. ಸೇವೆ

ಉ. ರಾಜ್ಯ ಪುರಸ್ಕಾರ

1. ಎಲ್ಲಾ ಪರೀಕ್ಷಾಂಶಗಳನ್ನು ಸಾಧಿಸಿ ಮುಗಿಸಿದ ತಾ॥
   - ತೃತೀಯ ಸೋಪಾನ ಪರೀಕ್ಷಾಂಶಗಳ ಬಗ್ಗೆ ದಕ್ಷತೆ
   - ತೃತೀಯ ಸೋಪಾನ್ ಪಡೆದಿರುವುದು
   - ಚರಚಿಕಿತ್ಸಕ ಪದಕವನ್ನು ಸಂಪಾದಿಸಿರುವುದು
   - ದಳದೊಡನೆ ಒಂದು ರಾತ್ರಿ ಶಿಬಿರ –ವರದಿ (10 ಕಿ.ಮೀ. ಚಾರಣ/ 30 ಕಿ.ಮೀ. ಸೈಕಲ್)
   - ತೋಟಗಾರಿಕೆ
   - ನಕ್ಷೆ ತಯಾರಿಕೆ
   - ಶಿಬಿರ ಕೌಶಲ – 3 ಅಂಶಗಳು
   - ಹತ್ತರಲ್ಲಿ 3 ಪ್ರವೀಣತಾ ಪದಕಗಳು
   - 15ರಲ್ಲಿ 12 ಪ್ರವೀಣತಾ ಪದಕಗಳು
   - ಭಾರತ್ ಸ್ಕೌಟ್ ಮತ್ತು ಗೈಡ್ ವೆಬ್‌ಸೈಟ್
   - 2 ರಾಜ್ಯ ಪುರಸ್ಕಾರ್ ಸ್ವೀಕರಿಸಿದ ತಾ॥

ಊ. ರಾಷ್ಟ್ರಪತಿ ಸ್ಕೌಟ್:

i. ಎಲ್ಲಾ ಪರೀಕ್ಷಾಂಶಗಳನ್ನು ಸಾಧಿಸಿ ಮುಗಿಸಿದ ತಾ॥
   1. ರಾಜ್ಯ ಪುರಸ್ಕಾರ
   2. ಶಿಬಿರ ವಾಸ – 2 ಅಂಶಗಳು
   3. ವಿಪತ್ತು ನಿರ್ವಹಣೆ ಪದಕ [ಚರ ಚಿಕಿತ್ಸಕ ಪದಕ (ಪುನರುತ್ತೀರ್ಣತೆ)]
   4. 14ರಲ್ಲಿ 2 ಪ್ರವೀಣತಾ ಪದಕಗಳು
   5. ಸೇವಾಯೋಜನೆ

6. ಪದಕ ಬೋಧಕ/ಆಟಗಳ ಶಿಕ್ಷಕ
7. ಪೋಸಂನ / ಕ್ಯಾಂಡರ್ ಸ್ಟೆಗ್ ಸಾಹಸ ಕೇಂದ್ರ ಲಾಗ್‌ಬುಕ್ ತಯಾರಿ
8. ಪೋಸಂ ವೆಬ್‌ಸೈಟ್
9. ರಾಜ್ಯ ಪುರಸ್ಕಾರ್ ಸ್ಕೌಟ್ ಆಗಿ 12 ತಿಂಗಳ ಸೇವೆ.

ii. ಪ್ರಶಸ್ತಿ ಸ್ವೀಕರಿಸಿದ ತಾ॥

**ಎ. ದಳವನ್ನು ಬಿಟ್ಟ ತಾರೀಕು**

**ಮುಂದೆ:** ಈ ರೀತಿ ಪೆಟ್ರೋಲ್‌ವಾರು ಎಲ್ಲಾ ಸ್ಕೌಟ್‌ಗಳ ಪ್ರಗತಿ ತಃಖ್ತೆಯ ಬಳಿಕ ರಾಷ್ಟ್ರಪತಿ ಸ್ಕೌಟ್ ಪ್ರಶಸ್ತಿ ಪಡೆದ ಸ್ಕೌಟುಗಳ ಹೆಸರನ್ನು ಸಕ್ರಮವಾಗಿ ನೋಂದಾಯಿಸಲು ಅನುಕೂಲವಾಗುವಂತೆ 4–5 ಹಾಳೆಗಳನ್ನು ಕಾದಿರಿಸುವುದು.

ಈ ಎಲ್ಲಾ ಅಂಶಗಳಿಂದ "ಪ್ರಗತಿ ಪುಸ್ತಕ"ವು ಸ್ಕೌಟ್‌ಗಳ ವೈಯಕ್ತಿಕ ಪ್ರಗತಿಯ ದಾಖಲೆ ಆಗುತ್ತದೆ.

ಪ್ರತಿ ಹಲವು ವರ್ಷಗಳಿಗೊಮ್ಮೆ, ಅವಶ್ಯಕತೆಗೆ ತಕ್ಕಂತೆ "ಪ್ರಗತಿ ಪುಸ್ತಕ"ದ ಹೊಸ ಸಂಪುಟವನ್ನು ತೆರೆಯಬೇಕಾಗುತ್ತದೆ. ಸಕ್ರಮವಾಗಿ ಸಂಖ್ಯೆ ಹಾಕಿ ಸಂಪುಟಗಳನ್ನು ಎಚ್ಚರಿಕೆವಹಿಸಿ, ಕಾಪಾಡಿಕೊಂಡರೆ, ಅದು ದಳದ ಸಾಧನೆಯ ಬಗ್ಗೆ ಒಂದು ಮಹತ್ವದ ದಾಖಲೆ ಆಗುತ್ತದೆ.

ಪ್ರತಿ ರಾಜ್ಯ ಸಂಸ್ಥೆಯೂ ದಳದ ದಾಖಲೆಗಳನ್ನು ವ್ಯವಸ್ಥಿತ ರೀತಿಯಲ್ಲಿ ಇಟ್ಟುಕೊಳ್ಳುವ ಬಗ್ಗೆ, ತಮ್ಮದೇ ಆದ ರೀತಿನೀತಿಗಳನ್ನು ಗೊತ್ತುಪಡಿಸುತ್ತಾರೆ. ಸ್ಕೌಟರುಗಳ ತರಬೇತಿ ಶಿಬಿರಗಳಲ್ಲಿ ಈ ಬಗ್ಗೆ ವಿವರಿಸಲಾಗುತ್ತದೆ. ರಾಜ್ಯ ಕಾರ್ಯಾಲಯದಿಂದ ಈ ಪ್ರಗತಿ ಪುಸ್ತಕ/ದಾಖಲಾತಿ ಪುಸ್ತಕವನ್ನು ತರಿಸಿಕೊಂಡು, ಅವುಗಳನ್ನು ಸರಿಯಾಗಿ ಬರೆದು ಇರಿಸಿಕೊಂಡಲ್ಲಿ, ಒಂದು ರೀತಿಯ ಸಮಾನತೆಯನ್ನು ಕಾಪಾಡಿಕೊಂಡು, ಅಮೂಲ್ಯವಾದ ಮಾಹಿತಿ ಸಂಪತ್ತನ್ನು ಕಾಪಾಡಿಕೊಂಡಂತಾಗುತ್ತದೆ.

**(4) ನಗದು ಮತ್ತು ಲೇವಾದೇವಿ:**

ಈ ಪುಸ್ತಕದ ಮೊದಲ ಭಾಗದಲ್ಲಿ, ಆದಾಯ ಮತ್ತು ಖರ್ಚುಗಳನ್ನು ಬರೆಯಲು ಕಾದಿರಿಸಬಹುದು. ಕೊನೆಯ ಸ್ವಲ್ಪ ಭಾಗದಲ್ಲಿ ಬಾಲಕರಿಂದ ಚಂದಾ ವಸೂಲಿ ಮಾಡುವಂತಿದ್ದರೆ, ಆ ಬಗ್ಗೆ ನಮೂದಿಸಬಹುದು.

ಏನೇ ಆಗಲೀ, ಪ್ರತಿ ಹಾಳೆಯಲ್ಲಿಯೂ ಈ ಕೆಳಕಂಡ ಕಾಲಂಗಳಿರಬೇಕಾಗುತ್ತದೆ.

1) ತಾರೀಕು (2) ವಿವರಗಳು (3) ಜಮಾ (4) ಖರ್ಚು (5) ವೋಚರ್ ನಂ.

ಬಾಲಕರ ಚಂದಾ ಹಣವನ್ನೂ, ಇತರೇ ಹಣವನ್ನೂ ಬೇರೆ ಬೇರೆಯಾಗಿಯೇ ಲೆಕ್ಕ ಬರೆಯಬೇಕು. ಒಟ್ಟು ಸೇರಿಸಬಾರದು. ಏಕೆಂದರೆ ಆ ಹಣಗಳ ಖರ್ಚಿನ ಬಗ್ಗೆ, ಗೌರವಾನ್ವಿತ ನ್ಯಾಯ ಸಭೆಯಲ್ಲಿ ತೀರ್ಮಾನಿಸಲಾಗುತ್ತದೆ. ಬೇರೆ ಬೇರೆ ಲೆಕ್ಕ, ವ್ಯವಹಾರವಾದ ಕಾರಣ ಎರಡು ಬೇರೆ ಬೇರೆ ರಶೀದಿ ಪುಸ್ತಕಗಳಿರಬೇಕು. ಬಾಲಕರ ಚಂದಾ ಹಣಕ್ಕೊಂದು, ಇತರೇ ಹಣಕ್ಕೆ ಒಂದು. ಖರ್ಚು ಮಾಡಿದ ಹಣಕ್ಕೆ ವೋಚರ್‌ಗಳನ್ನು ಪಡೆದು ಫೈಲ್ ಮಾಡಬೇಕು. ಇತರೇ ಹಣದ ಜಮಾ ಆದಾಗ ಅದಕ್ಕೆ ಕ್ರಮಾಂಕಿತ ಸ್ವೀಕೃತಿ ಕೊಡಬೇಕು.

## (5) ಪದಕಗಳ ಪುಸ್ತಕ:

ಈ ರಿಜಿಸ್ಟರ್‌ನಲ್ಲಿ ಜಿಲ್ಲಾ/ಸ್ಥಳೀಯ ಸಂಸ್ಥೆಯಿಂದ ಸ್ವೀಕರಿಸಿದ ವಿವಿಧ ಪದಕಗಳು, ಅವುಗಳ ಸಂಖ್ಯೆಯನ್ನು ಸಮೂದಿಸಲಾಗುತ್ತದೆ. ಹಾಗೆಯೇ ಅವುಗಳ ವಿತರಣೆಯ ವಿವರಗಳನ್ನು ಬರೆಯಲಾಗುತ್ತದೆ.

ಪುಸ್ತಕದ ಮೊದಲ ಭಾಗದಲ್ಲಿ ಈ ಕೆಳಕಾಣಿಸಿರುವಂತೆ, ಕಾಲಂ ಹಾಕಿ ಸಕ್ರಮವಾಗಿ ಬರೆಯಬೇಕು.

| ಕ್ರಮ ಸಂ. | ತಾರೀಕು | ಪದಕದ ಹೆಸರು | ಬಂದ ಸಂಖ್ಯೆ | ಎಲ್ಲಿಂದ ಬಂತು | ವಿತರಿಸಿದ ಸಂ. | ಯಾರಿಗೆ ಕೊಟ್ಟಿತು | ಬಾಕಿ |
|---|---|---|---|---|---|---|---|
| | | | | | | | |

ಎರಡನೆಯ ಭಾಗದಲ್ಲಿ ಪದಕವಾರು ವಿವರಗಳನ್ನು ಬರೆಯಬೇಕು. ಶ್ರೇಣಿಯ ಪದಕಗಳು, ದಕ್ಷತಾ ಪದಕಗಳು, ಮುಂದುವರೆದು ಪ್ರವೀಣತಾ ಪದಕಗಳು, ಹೀಗೆ ಸಕ್ರಮವಾಗಿ ನಮೂದಿಸಬೇಕು. ಇದಕ್ಕೆ ಕಾಲಂಗಳು ಹೀಗಿರಬೇಕು.

**ಪದಕದ ಹೆಸರು**

| ಕ್ರಮ ಸಂ. | ತಾರೀಕು | ಸ್ವೀಕರಿಸಿದ ಪದಕಗಳು | ವಿತರಿಸಿದ ಪದಕಗಳು | ವಿತರಣಾ ವಿವರ | ಉಳಿಕೆ | ಷರಾ |
|---|---|---|---|---|---|---|
| | | | | | | |

**(6) ದಳದ ಚಟುವಟಿಕೆಗಳ ದಾಖಲಾತಿ ಪುಸ್ತಕ:** ಈ ಪುಸ್ತಕದಲ್ಲಿ ದಳದ ಸಭೆಗಳು ಮತ್ತು ಇತರ ಮುಖ್ಯ ಘಟನೆಗಳು ಉದಾ॥ ಹೊರಸಂಚಾರ, ಪರಿಶೋಧನಾ ಯಾನ ಇತ್ಯಾದಿ, ಇವುಗಳನ್ನು ಸಕ್ರಮವಾಗಿ ಬರೆಯುತ್ತಾ ಹೋಗಬೇಕು.

ಆಯಾ ದಿನವೇ ವಿವರವಾಗಿ ಬರೆದು ಬಿಡಬೇಕು. ದಳದ ಸಭೆಗಳ ಬಗ್ಗೆ ಬರೆಯುವಾಗ, ಕಾರ್ಯಕ್ರಮವು ನಡೆದ ರೀತಿಯಲ್ಲಿಯೇ ನಮೂದಿಸಬೇಕು.

**(7) ದಳದ ಇತಿಹಾಸ ಪುಸ್ತಕ:** ಇದೊಂದು ಮುಖ್ಯವಾದ ದಾಖಲೆ. ಎಚ್ಚರಿಕೆಯಿಂದ ಬರೆದಿಟ್ಟು ಕಾಪಾಡಿಕೊಳ್ಳಬೇಕು. ದಳಕ್ಕೆ ಸಂಬಂಧಪಟ್ಟ ಎಲ್ಲಾ ಘಟನೆಗಳನ್ನೂ ಇದರಲ್ಲಿ ನಮೂದಿಸಬೇಕು. ದಳಕ್ಕೆ ಭೇಟಿ ನೀಡಿದ ರಾಷ್ಟ್ರೀಯ, ಅಂತರಾಷ್ಟ್ರೀಯ, ಆಯುಕ್ತರುಗಳು ಪ್ರಮುಖ ವ್ಯಕ್ತಿಗಳು, ಜಿಲ್ಲಾ ಕಮೀಷನರು, ರಾಜ್ಯ ಕಾರ್ಯಾಲಯದ ಪದಾಧಿಕಾರಿಗಳ ಬಗ್ಗೆ ಹಾಗೂ ಆಯಾ ಸಂಘಟನೆಯ, ಕಾರ್ಯ ಕಲಾಪದ ಬಗ್ಗೆ ವಿವರವಾಗಿ ತಿಳಿಸಬೇಕು.

ವರದಿಗಳನ್ನು ಚಿತ್ರಗಳಿಂದ, ಫೋಟೋಗಳಿಂದ ಸ್ವಾರಸ್ಯಕರವಾಗಿ, ಸೊಗಸಾಗಿ ಮೂಡಿಸಬೇಕು. ವರದಿಗಳು ಸಕ್ರಮವಾಗಿರಬೇಕು.

ಈ ರಿಜಿಸ್ಟರನ್ನು **"ಭೇಟಿಕಾರರ ಪುಸ್ತಕ"**ವನ್ನಾಗಿ ಸಹ ಉಪಯೋಗಿಸಬಹುದು.

**(8) ದಾಸ್ತಾನು ಪುಸ್ತಕ:** ಈ ರಿಜಿಸ್ಟರಿನಲ್ಲಿ ಗುಂಪಿಗೆ/ದಳಕ್ಕೆ ಸೇರಿದ ಎಲ್ಲಾ ವಸ್ತುಗಳೂ ದಾಖಲಾಗಬೇಕು. ಉಪಯೋಗಕ್ಕೆ ತಕ್ಕಂತೆ ಅವುಗಳನ್ನು ವರ್ಗೀಕರಿಸಬೇಕು. ವರ್ಗೀಕೃತ ವಸ್ತುಗಳನ್ನು ಸಕ್ರಮವಾಗಿ ದಾಖಲಿಸಬೇಕು. ಉದಾ॥ ಶಿಬಿರ ಸರಂಜಾಮು, ಶೈಕ್ಷಣಿಕ ವಸ್ತುಗಳು ಪೀಠೋಪಕರಣಗಳು ಇತ್ಯಾದಿ. ಈ ಕೆಳಕಂಡ ಕಾಲಂಗಳು, ಈ ಕೆಲಸಕ್ಕೆ ಸರಿಹೋದೀತು.

| ಕ್ರಮ ಸಂ. | ಸ್ವೀಕರಿಸಿದ ತಾ॥ | ವಸ್ತುವಿನ ಹೆಸರು | ಸಂಖ್ಯೆ | ಹೇಗೆ ಬಂತು? | ಮೌಲ್ಯ | ಷರಾ |
|---|---|---|---|---|---|---|
| | | | | | | |

ಕೊಂಡುಕೊಂಡ ವಸ್ತುವಾದರೆ, ಅದರ ಬಿಲ್ಲನ್ನು ಮುಂದಿನ ಕ್ರಮಕ್ಕಾಗಿ ಭದ್ರಪಡಿಸಬೇಕು.

ಹಳತಾದ, ಉಪಯೋಗಕ್ಕೆ ಬಾರದ ವಸ್ತುಗಳನ್ನು ಆಗ್ಗಾಗ್ಗೆ ಪಟ್ಟಿಮಾಡಿ, ಗುಂಪು/ದಳದ ಸಮಿತಿಯ ಸಭೆಯಲ್ಲಿ, ಒಪ್ಪಿಗೆ ಪಡೆದು, ಸೂಕ್ತ ರೀತಿಯಲ್ಲಿ ವಿಲೇವಾರಿ ಮಾಡಬಹುದು.

(9) **ಸ್ಕೌಟ್ ಮಾಸ್ಟರ್ ದರ್ಪಣ:** ಇದಕ್ಕೆ ಸ್ಕೌಟ್ ಮಾಸ್ಟರ್ ಅನಿಸಿಕೆಗಳು/ಅಭಿಪ್ರಾಯಗಳು ಎಂದೂ ಹೇಳಬಹುದು. ಆಟಗಳು/ಚಟುವಟಿಕೆಗಳ ವೇಳೆಯಲ್ಲಿ ಸ್ಕೌ.ಮಾ.ರು., ಸ್ಕೌಟ್‌ಗಳನ್ನು ಗಮನಿಸುತ್ತಾ, ಪ್ರತಿ ಸ್ಕೌಟ್‌ನ ಬಗ್ಗೆ ತಮ್ಮ ಅಭಿಪ್ರಾಯ/ಅನಿಸಿಕೆಗಳನ್ನು (ಇದು ಸ್ಕೌ.ಮಾರ. ವೈಯಕ್ತಿಕ ಹಾಗೂ ಗೋಪ್ಯ ದಾಖಲೆಯಾಗಿದ್ದು, ಅದು ಅವರ ಉಪಯೋಗಕ್ಕೆ ಮಾತ್ರ ಸೀಮಿತ) ಗುರುತು ಹಾಕಿಕೊಳ್ಳುತ್ತಾ ಹೋಗುತ್ತಾರೆ. ಸಮಯ ಬಂದಾಗ ಗಮನಿಸಿದ ನ್ಯೂನತೆಗಳನ್ನು ಸರಿಪಡಿಸುವ ಬಗ್ಗೆ ಒಳ್ಳೆಯ ಅಂಶಗಳಿಗೆ ಉತ್ತೇಜನ ನೀಡುವ ಬಗ್ಗೆ, ಏನು ಮಾಡಬಹುದೆಂದು ಯೋಚಿಸುತ್ತಾರೆ. ಅವಶ್ಯಕವೆನಿಸಿದರೆ, ಸ॥ ಸ್ಕೌ.ಮಾ.ರಿಗೆ ತೋರಿಸಿ, ಅವರೊಡನೆ ಚರ್ಚಿಸುತ್ತಾರೆ.

ಮೇಲ್ಕಂಡ ಲಿಖಾವಟ್ಟುಗಳೇ ಅಲ್ಲದೆ ಸ್ಕೌ.ಮಾ.ರು ಈ ಕೆಳಕಾಣಿಸಿರುವ ಕಡತ (files)ಗಳನ್ನೂ ಸಹ ಇಡಬೇಕಾಗುತ್ತದೆ. (1) **ಅರ್ಜಿಗಳು:** ಈ ಫೈಲಿನಲ್ಲಿ ದಳಕ್ಕೆ ಸೇರಲಿಚ್ಛಿಸಿ ಬಂದ ಸ್ಕೌಟುಗಳ ಅರ್ಜಿಗಳು, ಅವರ ತಾಯಿ ತಂದೆಯರು ಪೋಷಕರಿಂದ ಸಮ್ಮತಿ ಪತ್ರಗಳು ಇರುತ್ತವೆ. (2) **ಲೆಕ್ಕಪತ್ರ:** ಖರ್ಚುಬಾಬ್ತು, ವೋಚರ್‌ಗಳು, ಆ ಸಂಬಂಧ ಪತ್ರ ವ್ಯವಹಾರ ಇರುತ್ತದೆ. (3) **ವಾರ್ಷಿಕ ಸದಸ್ಯರ ಸಂಖ್ಯೆ:** ದಳದಿಂದ ರಾಜ್ಯ ಕಛೇರಿಗೆ ಕಳುಹಿಸಿದ ಸಂಖ್ಯಾ ಪತ್ರಗಳ ಪ್ರತಿಗಳು (4) **ವಾರ್ಷಿಕ ಶಿಬಿರ:** ವಾರ್ಷಿಕ ಶಿಬಿರದ ಬಗ್ಗೆ ಸೂಚನಾ ಪತ್ರ ಇತ್ಯಾದಿ., ಎಲ್ಲಾ ಪತ್ರ ವ್ಯವಹಾರ (5) **ಸಾಮಾನ್ಯ:** ಮೇಲ್ಕಂಡ ವಿಷಯಗಳನ್ನು ಬಿಟ್ಟು ಉಳಿದ ಎಲ್ಲಾ ಪತ್ರ ವ್ಯವಹಾರ.

ಮೇಲ್ಕಾಣಿಸಿದ ಲಿಖಾವಟ್ಟುಗಳ ಬಗ್ಗೆ ಸ್ಕೌ.ಮಾ.ರು ಆರಂಭ ಶೂರತ್ವವನ್ನು ತೋರಿದರೆ ಏನೂ ಪ್ರಯೋಜನ ಆಗುವುದಿಲ್ಲ. ಬಹಳಷ್ಟು ದಳಗಳಲ್ಲಿ ನಾವು ಈ ರೀತಿಯ ಆರಂಭ ಶೂರತ್ವವನ್ನು ಕಾಣುತ್ತೇವೆ. ಸೂಕ್ತ ದಾಖಲೆಗಳನ್ನು ಆಗಿಂದಾಗ್ಗೆ ರಿಜಿಸ್ಟರುಗಳಲ್ಲಿ ಮರೆಯದೇ ನಮೂದಿಸುವುದು ಮತ್ತು ಆ ಅಭ್ಯಾಸವನ್ನು ಎಡೆಬಿಡದೆ ಮುಂದುವರೆಸುವುದು ಬಹಳ ಮುಖ್ಯವಾದುದು.

ಸ್ಕೌ.ಮಾಸ್ಟರರು ತಮ್ಮ ಜವಾಬ್ದಾರಿಯನ್ನು ಹಂಚಿಕೊಳ್ಳಬೇಕು. ಹಾಜರಾತಿ, ಲೆಕ್ಕ ಪತ್ರ, ಪ್ರಗತಿ, ದಾಸ್ತಾನು, ಸಭಾ ನಡಾವಳಿಗಳನ್ನು ದಾಖಲಿಸುವುದು ಇವೇ ಮುಂತಾದ ದಸ್ತಾವೇಜುಗಳನ್ನು ಸ॥ ಸ್ಕೌ.ಮಾರಿಗೆ ವಹಿಸಬಹುದು. ಆದರೆ ಬಹುತೇಕ ದಳಗಳಲ್ಲಿ ಸ॥ ಸ್ಕೌ.ಮಾ.ರೇ. ಇರುವುದಿಲ್ಲವಲ್ಲ! ಅಂತಹ ಸಂದರ್ಭಗಳಲ್ಲಿ ಸ್ವಯಂ ಸೇವಾ ವ್ಯಕ್ತಿಗಳ ಸಹಾಯ ಪಡೆಯಬಹುದು. ದಾಖಲಾತಿ, ದರ್ಪಣಗಳನ್ನು ಸ್ಕೌಟ್ ಮಾಸ್ಟರರೇ ನಿರ್ವಹಿಸಬೇಕು.



## ಅಧ್ಯಾಯ–16

# ಸಂಘಟನೆ

ಸ್ಕೌಟಿಂಗ್ ಮತ್ತು ಗೈಡಿಂಗ್ ವಿಶ್ವದ ಎರಡು ಮಹಾನ್ ಚಳವಳಿಗಳು. ಒಂದು ಬಾಲಕರ ಬೆಳವಣಿಗೆ ಮತ್ತು ಶ್ರೇಯಸ್ಸಿಗಾಗಿ ಕೆಲಸ ಮಾಡುತ್ತದೆ. ಇನ್ನೊಂದು ಬಾಲಕಿಯರ ಬೆಳವಣಿಗೆ ಮತ್ತು ಹಿತಾಸಕ್ತಿ ರಕ್ಷಣೆಗಾಗಿ ಕೆಲಸಮಾಡುತ್ತದೆ. ಈ ಎರಡನ್ನೂ ಲಾರ್ಡ್ ಬೇಡನ್ ಪೊವೆಲ್‌ರವರು ಸ್ಥಾಪಿಸಿದರು. ಈ ಎರಡೂ ಸಂಸ್ಥೆಗಳು, ಏಕರೀತಿಯಲ್ಲಿ ಜನಾದರಣೆ ಪಡೆದಿವೆಯಷ್ಟೇ ಅಲ್ಲದೆ, ತ್ವರಿತಗತಿಯಲ್ಲಿ, ವಿಶ್ವ ವ್ಯಾಪಿಯಾಗಿ ಅಭಿವೃದ್ಧಿ ಹೊಂದುತ್ತಲೇ ಇವೆ. ಮೊದಲಿಗೆ ಸ್ಕೌಟಿಂಗ್ ಪ್ರಾರಂಭವಾಯಿತು. ಆನಂತರದಲ್ಲಿ ಕೆಲವು ವರ್ಷಗಳ ಬಳಿಕ ಗೈಡಿಂಗ್ ಪ್ರಾರಂಭವಾಯಿತು. ಈ ಎರಡೂ ಬೇರೆಬೇರೆ ಸಂಘಟನೆಗಳಾದರೂ, ಒಂದೇ ಗುರಿಯನ್ನು ಹೊಂದಿವೆ.

ಬಹುತೇಕ ದೇಶ/ರಾಷ್ಟ್ರಗಳಲ್ಲಿ ಸ್ಕೌಟಿಂಗ್ ಮತ್ತು ಗೈಡಿಂಗ್ ಎಲ್ಲ ರೀತಿಯಲ್ಲಿಯೂ ವಿಭಿನ್ನವಾದ ಪ್ರತ್ಯೇಕ ಸಂಸ್ಥೆಗಳಾಗಿ ಕೆಲಸ ಮಾಡುತ್ತಿವೆ. ಸ್ಕೌಟಿಂಗ್ ಅನ್ನು ಬಹುತೇಕ ಪುರುಷರೇ ನಾಯಕತ್ವ ವಹಿಸಿ ನಡೆಸುತ್ತಾರೆ. ಆದರೆ ಗೈಡಿಂಗ್ ಅನ್ನು ಮಹಿಳೆಯರು ಮಾತ್ರವೇ ನಡೆಸುತ್ತಾರೆ. ಭಾರತದಲ್ಲಿ ಈ ಎರಡೂ ಸಂಸ್ಥೆಗಳು, 'ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್' ಎಂಬ ಒಂದೇ ಹೆಸರಿನ ಸಂಸ್ಥೆಯಾಗಿ ವಿಭಿನ್ನವಾದರೂ ಒಂದಾಗಿ ಸಹಭಾಗಿತ್ವದಲ್ಲಿ ಕೆಲಸ ಮಾಡುತ್ತಿದೆ.

**ವಿಶ್ವ ಮಟ್ಟದಲ್ಲಿ ರಚನೆ:**

ವಿಶ್ವ ಮಟ್ಟದಲ್ಲಿ ನಮ್ಮ ಸ್ಕೌಟ್ಸ್ ಮತ್ತು ಗೈಡ್ ಸಂಸ್ಥೆಗಳು ಎರಡು ಬೇರೆ ಬೇರೆ ಸಂಸ್ಥೆಗಳಾಗಿಯೇ ಕೆಲಸ ಮಾಡುತ್ತವೆ. ವಿಶ್ವ ಸ್ಕೌಟ್ ಚಳವಳಿಯ ಸಂಘಟನೆಯು 'ವೋಸಂ' (WOSM- World Organisation of Scout Movement) ವಿಶ್ವ ಗೈಡ್‌ಗಳ ಸಂಘಟನೆಯು "ವ್ಯಾಗ್ಸ್" (WAGGGS-World Association of Girl guides and Girl Scouts) ಎಂಬ ಹೆಸರುಗಳಲ್ಲಿ ಕಾರ್ಯನಿರತವಾಗಿವೆ.

ವಿಶ್ವ ಸ್ಕೌಟ್ ಕಾರ್ಯಾಲಯವು (world Scout Bureau) ಸ್ಕೌಟಿಂಗ್‌ನ ಪುರೋಭಿವೃದ್ಧಿಯ ಬಗ್ಗೆ ಗಮನ ಹರಿಸುತ್ತದೆ. ವಿಶ್ವ ಸ್ಕೌಟ್ ಸಮಾವೇಶ (World Scout conference) ಮತ್ತು ವಿಶ್ವ ಸ್ಕೌಟ್ ಸಮಿತಿ (World Scout Council) ಗಳೊಡಗೂಡಿ ಅದು ಕಾರ್ಯ ನಿರ್ವಹಿಸುತ್ತದೆ. ಇದರ ಕೇಂದ್ರ ಕಾರ್ಯಾಲಯವು ಸ್ವಿಡ್ಜರ್ಲೆಂಡ್ ದೇಶದ 'ಜಿನೀವಾ'ದಲ್ಲಿದೆ. ಪ್ರಧಾನ ಕಾರ್ಯದರ್ಶಿಯ ಕಛೇರಿಯು ಮಲೇಷಿಯಾದ ಕೌಲಾಲಂಪೂರನಲ್ಲಿದೆ. ಸ್ಕೌಟಿಂಗ್‌ನ್ನು ಅನುಸರಿಸುವ ಪ್ರತಿದೇಶವೂ ತನ್ನದೇ ಆದ ರಾಷ್ಟ್ರೀಯ ಸ್ಕೌಟ್ ಸಂಸ್ಥೆಯನ್ನು ಹೊಂದಿದ್ದು, ವೋಸಂನಲ್ಲಿ ನೋಂದಣಿ ಪಡೆದಿರುತ್ತದೆ. ಪ್ರಸ್ತುತದಲ್ಲಿ 216 ರಾಷ್ಟ್ರಗಳು ಆ ರೀತಿ ಸಂಯೋಜಿತ ವಾಗಿವೆ. ವೋಸಂನ ಅತ್ಯುನ್ನತ ಅಧಿಕಾರಿ ಎಂದರೆ "ಪ್ರಧಾನ ಕಾರ್ಯದರ್ಶಿ" (Secretary General) ಪ್ರಸ್ತುತದಲ್ಲಿ ಶ್ರೀ ಅಹ್ಮದ್ ಅಲ್‌ಹೆಂದಾವಿರವರು ಪ್ರಧಾನ ಕಾರ್ಯದರ್ಶಿ ಆಗಿದ್ದಾರೆ.

ವಿಶ್ವ ಕಾರ್ಯಾಲಯವು ಅದರ ಆರು ಪ್ರಾದೇಶಿಕ ಕಾರ್ಯಾಲಯಗಳ ಮೂಲಕ ಕೆಲಸ ಮಾಡುತ್ತದೆ. (1) 22 ರಾಷ್ಟ್ರಗಳು/ದೇಶಗಳನ್ನೊಳಗೊಂಡ, ಏಷಿಯಾ ಪೆಸಿಫಿಕ್ ಪ್ರಾದೇಶಿಕ ಕಾರ್ಯಾಲಯವು ಫಿಲಿಪ್ಪೈನ್ಸ್ ದೇಶದ 'ಮ್ಯಾನಿಲ್ಲಾ'ದಲ್ಲಿದೆ.

**ಇತರ ಪ್ರಾದೇಶಿಕ ವಿಭಾಗ ಕಾರ್ಯಾಲಯಗಳು ಹೀಗಿವೆ.**

(2) ಅರಬ್ ಪ್ರದೇಶ
(3) ಆಫ್ರಿಕಾ ಪ್ರದೇಶ
(4) ಯೂರೋಪ್ ಪ್ರದೇಶ
(5) ಯೂರೇಷಿಯಾ ಪ್ರದೇಶ
(6) ಇಂಟರ್ ಅಮೆರಿಕನ್ ಪ್ರದೇಶ

ವ್ಯಾಗ್‌ಗ್ಸ್ ಸಂಸ್ಥೆಯು ಗೈಡಿಂಗ್‌ಗೆ ಗಮನ ನೀಡುತ್ತದೆ. ಇದರಲ್ಲಿ ಸಹ ಸ್ಕೌಟಿಂಗ್‌ನಂತೆ ವಿಶ್ವದ ಬಹುತೇಕ ರಾಷ್ಟ್ರಗಳು ಸಂಯೋಜಿತವಾಗಿವೆ. ಇದರ ಕೇಂದ್ರ ಕಾರ್ಯಾಲಯವು ಲಂಡನ್‌ನಲ್ಲಿದೆ.

**ಭಾರತದ ರಾಷ್ಟ್ರಮಟ್ಟದಲ್ಲಿ ರಚನೆ:**

**ಭಾರತದಲ್ಲಿ ಸ್ಕೌಟಿಂಗ್ ಮತ್ತು ಗೈಡಿಂಗ್:** ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಎಂಬ ಹೆಸರಿನಲ್ಲಿ, ಒಂದೇ ಸಂಸ್ಥೆಯಾಗಿ ಕೆಲಸ ಮಾಡುತ್ತದೆ.

ಬಾಯ್ ಸ್ಕೌಟ್ಸ್ ಅಸೋಸಿಯೇಷನ್ ಇನ್ ಇಂಡಿಯಾ ಮತ್ತು ಹಿಂದೂಸ್ತಾನ್ ಸ್ಕೌಟ್ ಸಂಸ್ಥೆಗಳು 7.11.1950 ರಂದು ವಿಲೀನಗೊಂಡು ಒಂದಾದವು. 15.8.1951 ರಂದು ಗರ್ಲ್ ಗೈಡ್ ಅಸೋಸಿಯೇಷನ್ ಇನ್ ಇಂಡಿಯಾ ಸಹ ಇದರೊಡನೆ ವಿಲೀನವಾಯಿತು. ವೋಸಂನಿಂದ ಮತ್ತು ವ್ಯಾಗ್ಗ್ಸ್‌ನಿಂದ ಮಾನ್ಯತೆ ಪಡೆದ ಏಕೈಕ ಸಂಸ್ಥೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ರಾಷ್ಟ್ರೀಯ ಸಮಿತಿಯು, ರಾಷ್ಟ್ರೀಯ ಕಾರ್ಯಕಾರಿ ಸಮಿತಿ ಮತ್ತು ಮುಖ್ಯ ರಾಷ್ಟ್ರೀಯ ಆಯುಕ್ತರ ಮೂಲಕ, ಸಂಸ್ಥೆಯ ಕೆಲಸ ಕಾರ್ಯಗಳನ್ನು ನಿರ್ವಹಿಸುತ್ತದೆ.

**ರಾಷ್ಟ್ರೀಯ ಕಾರ್ಯಾಲಯದ ವಿಳಾಸ:** ರಾಷ್ಟ್ರೀಯ ಕಾರ್ಯಾಲಯ, ನಂ.16, ಲಕ್ಷ್ಮಿಮುಜುಂದಾರ್ ಭವನ್, ಮಹಾತ್ಮ ಗಾಂಧಿ ರಸ್ತೆ, ಇಂದ್ರಪ್ರಸ್ಥ ಎಸ್ಟೇಟ್, ನವದೆಹಲಿ-110002.

ಸಂಸ್ಥೆಗೆ ಚುನಾಯಿತ ಅಧ್ಯಕ್ಷರಿರುತ್ತಾರೆ. ಪ್ರಸ್ತುತ ಡಾ॥ ಅನಿಲ್ ಕುಮಾರ್ ಜೈನ್ ಅಧ್ಯಕ್ಷರು. ಸಂಯುಕ್ತ ಭಾರತದ ಎಲ್ಲಾ ರಾಜ್ಯಗಳಲ್ಲಿಯೂ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯಿದೆ. ಭಾರತೀಯ ರೈಲ್ವೆಯು ಅದರ ಮಂಡಳಿಗಳ ಸಂಖ್ಯೆಗಳಿಗನುಗುಣವಾದ (ಪ್ರಸ್ತುತ 15) ರಾಜ್ಯ ಸಂಸ್ಥೆಗಳ ನೋಂದಣಿ ಪಡೆದಿದೆ. ಕೇಂದ್ರೀಯ ವಿದ್ಯಾಲಯ ಮತ್ತು ನವೋದಯ ವಿದ್ಯಾಲಯ ಸಂಘಟನೆಗಳೂ ಸಹ ಪ್ರತ್ಯೇಕ ರಾಜ್ಯಗಳಾಗಿದ್ದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಭಾಗಗಳಾಗಿವೆ.

ಹಾಗಾಗಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನಲ್ಲಿ ಒಟ್ಟು 50 ರಾಜ್ಯ ಸಂಸ್ಥೆಗಳಿವೆ.

ಇಡೀ ದೇಶಕ್ಕೆ ಪ್ರಧಾನ ಕಾರ್ಯ ನಿರ್ವಾಹಕರಾದ ಮುಖ್ಯ ರಾಷ್ಟ್ರೀಯ ಆಯುಕ್ತರು ಮೂರು ವರ್ಷಕ್ಕೊಮ್ಮೆ ಚುನಾಯಿತರಾಗುತ್ತಾರೆ. ಪ್ರಸ್ತುತದಲ್ಲಿ ಡಾ॥ ಕೆ.ಕೆ. ಖಂಡೆಲ್‌ವಾಲರವರು ಮುಖ್ಯ ರಾಷ್ಟ್ರ ಆಯುಕ್ತರಾಗಿದ್ದಾರೆ. ಸ್ಕೌಟ್ಸ್ ಮತ್ತು ಗೈಡ್ಸ್ ಎರಡೂ ಶಾಖೆಗಳಿಗೆ ಅವರು ಮುಖ್ಯಸ್ಥರು. ತಾಂತ್ರಿಕವಾಗಿ 2 ಶಾಖೆಗಳೂ ಸ್ವತಂತ್ರವಾಗಿ ಕಾರ್ಯನಿರ್ವಹಿಸುತ್ತವೆ.

ರಾಷ್ಟ್ರಮಟ್ಟದಲ್ಲಿ ಹಲವಾರು ಆಯುಕ್ತರುಗಳಿರುತ್ತಾರೆ. ಸ್ಕೌಟ್ ಶಾಖೆಯ ಮುಖ್ಯಸ್ಥರಾಗಿ ರಾಷ್ಟ್ರೀಯ ಆಯುಕ್ತರು (ಸ್ಕೌಟ್ಸ್) ರವರೂ, ಗೈಡ್ ಶಾಖೆಯ ಮುಖ್ಯಸ್ಥರಾಗಿ ರಾಷ್ಟ್ರೀಯ ಆಯುಕ್ತರು (ಗೈಡ್ಸ್)ರವರೂ ಇರುತ್ತಾರೆ. ಅವರುಗಳಿಗೆ ಸಹಾಯಕರಾಗಿ ಉಪ ರಾಷ್ಟ್ರೀಯ ಆಯುಕ್ತರುಗಳಿರುತ್ತಾರೆ. ಸ್ಕೌಟ್ ವಿಭಾಗಕ್ಕೊಬ್ಬರು,

ಗೈಡ್ ವಿಭಾಗಕ್ಕೊಬ್ಬರು, ಹೀಗೆ, ಅದೇ ರೀತಿ ಇಬ್ಬರು ಅಂತರರಾಷ್ಟ್ರೀಯ ಆಯುಕ್ತರುಗಳಿರುತ್ತಾರೆ. ಇವರೆಲ್ಲರನ್ನೂ ಮುಖ್ಯ ರಾಷ್ಟ್ರೀಯ ಆಯುಕ್ತರು ನೇಮಿಸುತ್ತಾರೆ.

ರಾಷ್ಟ್ರೀಯ ಕಾರ್ಯಾಲಯವು, ರಾಷ್ಟ್ರ ಸಂಸ್ಥೆಯ ಆಡಳಿತಾಂಗವಾಗಿರುತ್ತದೆ. ಆಡಳಿತ ಕಛೇರಿಯ ಮುಖ್ಯಸ್ಥರಾಗಿ ನಿರ್ದೇಶಕರಿರುತ್ತಾರೆ. ಇವರು ವೃತ್ತಿ ಪರ ಅಧಿಕಾರಿಗಳು ಹಾಗೂ ಆಡಳಿತಾಂಗದ ಮುಖ್ಯ ಕಾರ್ಯನಿರ್ವಾಹಕರು. ದೇಶದಲ್ಲಿ ಸ್ಕೌಟಿಂಗ್ ಮತ್ತು ಗೈಡಿಂಗ್‌ಗಳ ಬೆಳವಣಿಗೆ ಹಾಗೂ ಗುಣಮಟ್ಟವನ್ನು ಕಾಯ್ದುಕೊಂಡು, ಕಾರ್ಯಕ್ರಮಗಳನ್ನು ನಿರ್ವಹಿಸಿದ ಬಗ್ಗೆ ಮುಖ್ಯ ರಾಷ್ಟ್ರೀಯ ಆಯುಕ್ತರಿಗೆ ಜವಾಬ್ದಾರರು. ಇವರಿಗೆ ಸಹಾಯಕರಾಗಿ ಸ್ಕೌಟ್ ಮತ್ತು ಗೈಡ್ ಶಾಖೆಗಳಿಗೂ ಎರಡಕ್ಕೂ ಬೇರೆ ಬೇರೆಯಾಗಿ ಅನ್ವಯಿಸುವ ಜಂಟಿ ನಿರ್ದೇಶಕರುಗಳೂ, ಉಪನಿರ್ದೇಶಕರುಗಳೂ 2 ಸಹಾಯಕ ನಿರ್ದೇಶಕರುಗಳೂ, ಮತ್ತಿತರ ಅಧಿಕಾರಿ ಸಿಬ್ಬಂದಿಯೂ ಇದ್ದು, ಕಾರ್ಯಕ್ರಮಗಳು, ತರಬೇತಿ ಮತ್ತು ಆಡಳಿತ ವ್ಯವಹಾರಗಳ ಬಗ್ಗೆ ಗಮನಹರಿಸುತ್ತಾರೆ. ರಾಷ್ಟ್ರೀಯ ಕಾರ್ಯಾಲಯವು ನವದೆಹಲಿಯಲ್ಲಿದ್ದು, 5 ಪ್ರಾದೇಶಿಕ ಕಛೇರಿಗಳ ಮೂಲಕ ಕೆಲಸ ನಿರ್ವಹಿಸುತ್ತದೆ. ಬೆಂಗಳೂರಿನಲ್ಲಿ ದಕ್ಷಿಣ ಪ್ರಾದೇಶಿಕ ಕಾರ್ಯಾಲಯವಿದೆ.

**ರಾಜ್ಯ ಮಟ್ಟದಲ್ಲಿ:** ರಾಜ್ಯ ಸಮಿತಿಯೂ ಕಾರ್ಯನಿರ್ವಾಹಕ ಮಂಡಳಿಯೂ ಇರುತ್ತವೆ. ರಾಜ್ಯ ಮುಖ್ಯ ಆಯುಕ್ತರಿರುತ್ತಾರೆ. ಇವರು ರಾಜ್ಯದಲ್ಲಿ ಪ್ರಧಾನ ಕಾರ್ಯನಿರ್ವಾಹಕರು. ಇವರಿಗೆ ಸಹಾಯಕರಾಗಿ ಇಬ್ಬರು ರಾಜ್ಯ ಆಯುಕ್ತರುಗಳು (ಸ್ಕೌಟ್ ಮತ್ತು ಗೈಡ್) ಇರುತ್ತಾರೆ. ಇವರುಗಳು ಸ್ಕೌಟಿಂಗ್ ಮತ್ತು ಗೈಡಿಂಗ್‌ನ ಪ್ರಗತಿ, ತರಬೇತಿ ಮತ್ತು ಕಾರ್ಯಕ್ರಮಗಳಿಗೆ ಬಾಧ್ಯರು.

**ಜಿಲ್ಲಾ ಮಟ್ಟದಲ್ಲಿ:** ಜಿಲ್ಲಾ ಸಮಿತಿ ಮತ್ತು ಜಿಲ್ಲಾ ಕಾರ್ಯನಿರ್ವಾಹಕ ಮಂಡಳಿ ಇರುತ್ತವೆ. ಜಿಲ್ಲಾ ಮಟ್ಟದಲ್ಲಿ ಮುಖ್ಯ ಕಾರ್ಯನಿರ್ವಾಹಕರಾಗಿ ಜಿಲ್ಲಾ ಮುಖ್ಯ ಆಯುಕ್ತರು ಇವರಿಗೆ ಸಹಾಯಕರಾಗಿ ಜಿಲ್ಲಾ ಆಯುಕ್ತರು ( ಸ್ಕೌಟ್ಸ್) ಮತ್ತು ಜಿಲ್ಲಾ ಆಯುಕ್ತರು (ಗೈಡ್ಸ್) ಇರುತ್ತಾರೆ.

ಜಿಲ್ಲಾ ಹಾಗೂ ಸ್ಥಳೀಯ ಸಂಸ್ಥೆಗಳ ಮೂಲಕ ಜಿಲ್ಲೆಯಲ್ಲಿ ಸ್ಕೌಟಿಂಗ್ ಮತ್ತು ಗೈಡಿಂಗ್‌ನ ಏಳಿಗೆಗಾಗಿ ಕೆಲಸ ಮಾಡುತ್ತಾರೆ.

**ಬಾಲಕ:** ಸ್ಕೌಟಿಂಗ್‌ನ ಕೇಂದ್ರಬಿಂದು ಬಾಲಕ. ಇಂತಿಷ್ಟು ವ್ಯಾಪಕವಾದ ಸಂಸ್ಥೆಯ ರೂಪು, ರೇಷೆಗಳೂ, ಬಾಲಕರ ಏಳಿಗೆಗಾಗಿ, ಬೆಳವಣಿಗೆಗಾಗಿ. ಇಡೀ

ಸಂಸ್ಥೆಯ ಕೆಲಸಕಾರ್ಯಗಳೂ ಬಾಲಕರ ಪ್ರಗತಿಗಾಗಿ, ಬಾಲಕರ ಹಿತಕ್ಕಾಗಿ, ಬಾಲಕರ ಶ್ರೇಯಸ್ಸಿಗಾಗಿ.

ಬಾಲಕರು ಸ್ವಯಂಪ್ರೇರಿತರಾಗಿ ಸಂಸ್ಥೆಯನ್ನು ಸೇರುತ್ತಾರೆ. ಅವರನ್ನು ಸೇರಿಸಲು ಯಾವುದೇ ರೀತಿಯ ಒತ್ತಡವೂ ಇರುವುದಿಲ್ಲ. ದಳವು ನಡೆಯುವ ರೀತಿಯಿಂದ ಆಕರ್ಷಿತರಾಗುತ್ತಾರೆ. ಅವರಾಗಿ ಇಷ್ಟಪಟ್ಟು ಸೇರಿಕೊಳ್ಳುತ್ತಾರೆ. ಹಾಗೆ ಸ್ವಇಚ್ಛೆಯಿಂದ ಸೇರಿಕೊಂಡವರು, ದಳದಲ್ಲೇ ಉಳಿದು ಹೋಗುತ್ತಾರೆ. ಬಾಲಕರಿಗೆ ಸಾಹಸಮಯವಾದ, ವಿನೋದಕರವಾದ ಕಾರ್ಯಕ್ರಮಗಳೆಂದರೆ ಬಲು ಪ್ರೀತಿ. ಅವರು ಒಳ್ಳೆಯ ಸಂಗವನ್ನು ಬಯಸುತ್ತಾರೆ. ಸ್ವಚ್ಛವಾದ ಜೀವನವನ್ನು ನಡೆಸಲು ಆಸೆಪಡುತ್ತಾರೆ. ಉದಾತ್ತವಾದ ಆದರ್ಶಗಳನ್ನು ಅನುಸರಿಸಲು ಇಷ್ಟಪಡುತ್ತಾರೆ. ಅವರುಗಳು ಸೇರಿದ ದಳದಲ್ಲಿ, ಈ ಅಭಿರುಚಿಗಳ ಈಡೇರಿಕೆ ಆಗುವುದಾದರೆ, ಆನಂದದಿಂದ ದಳದ ಸದಸ್ಯರಾಗಿಯೇ ಉಳಿದು ಬಿಡುತ್ತಾರೆ.

ಈಗಿರುವಂತೆ, ನಮ್ಮ ಇಡೀ ಸಂಸ್ಥೆಯ ಗುರಿ ಒಂದೇ. ಅದಾದರೂ ಪ್ರತಿ ದಳವೂ ಒಂದು ರೀತಿಯಲ್ಲಿ ಸುಸಂಘಟಿತವಾಗಬೇಕು. ಸಕ್ರಮವಾಗಿ ಕಾರ್ಯನಿರತವಾಗಬೇಕು. ಅದು ಬಾಲಕರನ್ನು ಆಕರ್ಷಿಸುವ ಅಯಸ್ಕಾಂತವಾಗಬೇಕು. ಆಕರ್ಷಿತ ಬಾಲಕರು ಸ್ವಪ್ರೇರಣೆಯಿಂದ ದಳವನ್ನು ಸೇರಬೇಕು. ಸೇರಿ ಉಪಕೃತರಾಗಬೇಕು.

ಇಂದು ಸಂಸ್ಥೆಯಲ್ಲಿ ಲಕ್ಷಾಂತರ ಬಾಲಕರು ಸದಸ್ಯರಾಗಿದ್ದಾರೆ. 4 ಕೋಟಿಗೂ ಮೀರಿದಂತೆ ವಿಶ್ವದಾಖಲೆ ಇದ್ದರೆ, ಭಾರತದಲ್ಲಿಯೇ 60 ಲಕ್ಷ ಸ್ಕೌಟುಗಳಿದ್ದಾರೆ. ಸಂಖ್ಯಾಬಲದಲ್ಲಿ ಅಮೆರಿಕಾ ಸಂ॥ ಸಂಸ್ಥಾನಗಳು ಮೊದಲ ಸ್ಥಾನದಲ್ಲಿದ್ದರೆ, ಭಾರತವು 4 ನೆಯ ಸ್ಥಾನದಲ್ಲಿದೆ..

ಕರ್ನಾಟಕ ರಾಜ್ಯದಲ್ಲಿ ಸುಮಾರು 4 ಲಕ್ಷ ಸದಸ್ಯರಿದ್ದು ದೇಶದಲ್ಲಿ 3 ನೆಯ ಸ್ಥಾನ ಪಡೆದಿದೆ.

ಸ್ಕೌಟರುಗಳೇ ಸಂಸ್ಥೆಯ ಆಧಾರ. ಬಹುತೇಕ, ಸ್ಕೌಟರುಗಳು (95%) ಸ್ವಯಂ ಪ್ರೇರಿತರಾಗಿ, ಸ್ವಯಂ ಸೇವೆ ಸಲ್ಲಿಸುತ್ತಿರುವ ಆದರ್ಶ ವ್ಯಕ್ತಿಗಳು. ಅವರೋ ಭಾರತದಲ್ಲಿ ನೂರಾರು-ಸಾವಿರಾರು, ಏನು-ಒಂದು ಲಕ್ಷಕ್ಕೂ ಹೆಚ್ಚೆಂದರೆ ಅತಿಶಯೋಕ್ತಿಯಲ್ಲ. ಸ್ಕೌಟರುಗಳು ತಮ್ಮ ಅಮೂಲ್ಯವಾದ ಸ್ವಂತ ಕಾಲ, ಸ್ವಂತ ಹಣ, ಸ್ವಂತ ಬುದ್ಧಿಬಲ, ದೇಹ ಬಲಗಳನ್ನು ಸಂಸ್ಥೆಗಾಗಿ ಧಾರೆ ಎರೆಯುತ್ತಿರುವ ತ್ಯಾಗಮಯಿಗಳು. ❖

ಅಧ್ಯಾಯ–17

# ಮೇಳಗಳು – ಜಾಂಬೋರಿಗಳು

ಸ್ಕೌಟ್ ನಿಯಮದ 3ನೆಯ ಅಂಶವು ಸೋದರ ಮನೋಭಾವನೆಯ ಬಗ್ಗೆ ಒತ್ತಿ ಹೇಳುತ್ತದೆ. ಸ್ಕೌಟುಗಳು ಆಗಾಗ ಒಟ್ಟು ಸೇರಬೇಕು. ಸೋದರ ಮನೋಭಾವನೆಯನ್ನು ರೂಢಿಸಿಕೊಳ್ಳಬೇಕು. ಈ ಉದ್ದೇಶ ಸಾಧನೆಗಾಗಿಯೇ ಸಂಸ್ಥೆಯು ನಿಗದಿತ ಅವಧಿಗಳಲ್ಲಿ ವಿವಿಧ ಹಂತಗಳು–ಮಟ್ಟಗಳಲ್ಲಿ, ಮೇಳಗಳನ್ನೂ, ಜಾಂಬೋರೀಗಳನ್ನೂ, ಸಂಘಟಿಸುತ್ತದೆ.

ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಮಟ್ಟಗಳಲ್ಲಿ ಸ್ಕೌಟುಗಳ ಮಿಲನಗಳಿಗೆ ಜಾಂಬೋರಿಗಳೆಂದು ಕರೆಯುತ್ತಾರೆ. ಬೇಡನ್ ಪೊವೆಲ್‌ರವರು, ಸ್ಕೌಟುಗಳ ಮೊದಲನೆಯ ಅಂತರರಾಷ್ಟ್ರೀಯ ಮಿಲನದ ವೇಳೆಯಲ್ಲಿ "ಜಾಂಬೋರೀ" ಪದವನ್ನು ಸಂಸ್ಥೆಗೆ ಕಾಣಿಕೆಯಾಗಿ ನೀಡಿದರು. ಇದು ಶಬ್ದಕೋಶ (Dictionary)ಕ್ಕೂ ಕಾಣಿಕೆಯಾದದ್ದು ಕಾಕತಾಳೀಯವಲ್ಲದಿದ್ದರೂ, ನಿಜಾಂಶ.

| **ಅಂತರರಾಷ್ಟ್ರೀಯ ಜಾಂಬೋರೀ** | **ರಾಷ್ಟ್ರೀಯ ಜಾಂಬೋರೀ** |
|---|---|
| ಮೊದಲನೆಯ ಅಂತರರಾಷ್ಟ್ರೀಯ ಸ್ಕೌಟ್ ಜಾಂಬೋರೀಯು 1920 ರಲ್ಲಿ ಇಂಗ್ಲೆಂಡ್‌ನ ಒಲಂಪಿಯಾದಲ್ಲಿ ನಡೆಯಿತು. | ಭಾರತದಲ್ಲಿ ವಿಲೀನೀಕರಣಾ ನಂತರದಲ್ಲಿ ಮೊದಲನೆಯ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಾಂಬೋರೀಯು 1953ರಲ್ಲಿ ಆಂಧ್ರ ಪ್ರದೇಶದ ಹೈದರಾಬಾದ್‌ನಲ್ಲಿ ನಡೆಯಿತು. |
| ಅಲ್ಲಿಂದ ಮುಂದೆ:–ಈ ವರೆಗೆ 25 ಜಾಂಬೋರಿಗಳು ನಡೆದು, ಇದೀಗ ತಾನೆ 25ನೆಯ ಜಾಂಬೋರಿ ಕೋರಿಯಾದಲ್ಲಿ ನಡೆಯಿತು. 2022ರಲ್ಲಿ ಅಮೆರಿಕಾದ ವರ್ಜೀನಿಯದಲ್ಲಿ ನಡೆಯಲಿರುವ 26ನೆಯ ವಿಶ್ವ ಜಾಂಬೋರಿಗೆ ಕಾದಿದ್ದೇವೆ. | ಅಲ್ಲಿಂದ ಮುಂದೆ: 27 ಜಾಂಬೋರಿಗಳು ಈವರೆಗೆ ನಡಿದಿವೆ. ಇವುಗಳಲ್ಲಿ 1960ರಲ್ಲಿ 3ನೆಯ ರಾಷ್ಟ್ರೀಯ ಜಾಂಬೋರೀ. 1986ರಲ್ಲಿ 10ನೆಯ ರಾಷ್ಟ್ರೀಯ ಜಾಂಬೋರೀಗಳು ಬೆಂಗಳೂರಿನಲ್ಲಿ, 27ನೆಯ ರಾಷ್ಟ್ರೀಯ ಜಾಂಬೋರಿಯು ಮೈಸೂರಿನಲ್ಲಿ ನಡೆದುವು. ಇವಲ್ಲದೇ ವಿಶೇಷ ಶತಮಾನೋತ್ಸವ ಜಾಂಬೋರಿಯು ಕಲ್ಕತ್ತಾ ಬಳಿ ಗಂಗಾ ನಗರದಲ್ಲಿ 2007ರಲ್ಲಿ ನಡೆಯಿತು. |

ರಾಜ್ಯ ಸಂಸ್ಥೆಗಳು, ರಾಜ್ಯ ಮಟ್ಟದ ಜಾಂಬೋರೆಟ್‌ಗಳು, ರ್‍ಯಾಲಿ, ಮೇಳಗಳನ್ನೂ, ಜಿಲ್ಲಾ ಸಂಸ್ಥೆಗಳು ಜಿಲ್ಲಾ ಮಟ್ಟದ ರ್‍ಯಾಲಿ, ಮೇಳಗಳನ್ನು ನಡೆಸುತ್ತಾರೆ.

ಈ ಎಲ್ಲಾ ಸಮ್ಮಿಲನಗಳ ವಿಶೇಷತೆಯೆಂದರೆ, ಇವುಗಳಲ್ಲಿ ಪಾಲ್ಗೊಳ್ಳುವ ಎಲ್ಲಾ ದಳಗಳೂ (1) ಸ್ವಾವಲಂಬಿತವಾಗಿರುವುದು (2) ಸಾಧ್ಯವಾದಾಗಲೆಲ್ಲಾ, ಅವರವರದೇ ಗುಡಾರಗಳನ್ನೂ ತಂದುಕೊಳ್ಳುತ್ತಾರೆ. (3) ಅವರವರದೇ ಊಟ ತಿಂಡಿ ವ್ಯವಸ್ಥೆ, (4) ಪ್ರೇಕ್ಷಣೀಯ ಸ್ಥಳಗಳ ಭೇಟಿ ಕಾರ್ಯಕ್ರಮ ಇತ್ಯಾದಿ ವ್ಯವಸ್ಥೆಗಳನ್ನು ಮಾಡಿಕೊಳ್ಳುತ್ತಾರಲ್ಲದೆ, (5) ಸಮ್ಮಿಲನದಲ್ಲಿ ನಿಗದಿತವಾದ ದೈನಂದಿನ ಸಾಮೂಹಿಕ ಕಾರ್ಯಕ್ರಮಗಳಲ್ಲಿ, ಉದಾ॥ ಸಮಾರಂಭಗಳು, ಪಥಚಲನೆ, ಶಿಬಿರಾಗ್ನಿ, ವಸ್ತು ಪ್ರದರ್ಶನ ಇತ್ಯಾದಿ- ಭಾಗವಹಿಸುತ್ತಾರೆ. (6) ಸಂದರ್ಭಾನುಸಾರ ಇತರ ಜಿಲ್ಲೆ, ರಾಜ್ಯ, ದೇಶಗಳ ಸ್ಕೌಟುಗಳೊಡನೆ ಬೆರೆತು ಪರಸ್ಪರ ಪರಿಚಯ ಮಾಡಿಕೊಂಡು, ಅವರೊಡನೆ ಕಲೆತು, ಮೈತ್ರಿಯನ್ನು ಬೆಳೆಸಿಕೊಳ್ಳುತ್ತಾರೆ. ಯಾವುದೇ ಭೇದ-ಭಾವವಿಲ್ಲದ ವಿಶ್ವ ಸೋದರತೆಯನ್ನೂ ವ್ಯಾಪಕತೆಯನ್ನೂ ಬಲಪಡಿಸಿಕೊಳ್ಳುತ್ತಾರೆ.

ಈ ಎಲ್ಲಾ ಅಂಶಗಳ ಮೂಲ ಹಾಗೂ ವಿಶೇಷ ಉದ್ದೇಶವಾದರೂ (1) ಸ್ವಾವಲಂಬನೆ ಮತ್ತು (2) ಸ್ಕೌಟ್‌ನಿಯಮದ 3ನೆಯ ಅಂಶವನ್ನು, ಜೀವನದಲ್ಲಿ ರೂಢಿಸಿಕೊಳ್ಳುವುದಾಗಿದೆ.

ಇಲ್ಲಿಯವರೆಗೆ ನಡೆದಿರುವ ಅಂತರರಾಷ್ಟ್ರೀಯ ಜಾಂಬೋರೀಗಳು ವಿಶ್ವದ ವಿವಿಧ ದೇಶಗಳ ಸ್ಕೌಟುಗಳನ್ನು ಸನ್ನಿಹಿತರನ್ನಾಗಿಸಿವೆ. ರಾಷ್ಟ್ರ-ರಾಷ್ಟ್ರಗಳ ನಡುವೆ ಪರಸ್ಪರ ಮೈತ್ರಿಯ ಅರಿವನ್ನು ಮೂಡಿಸಿವೆ.

ಈ ಜಾಂಬೋರೀಗಳ ಮೂಲಕ ಸ್ಕೌಟುಗಳಲ್ಲಿ, ಪರಮಾತ್ಮನ ಪಿತೃತ್ವ ಹಾಗೂ ಮಾನವರ ಭ್ರಾತೃತ್ವ (Fatherhood of God and Brotherhood of Man) ಗಳ ನಿಜವಾದ ಅರ್ಥವನ್ನೂ, ಮೌಲ್ಯವನ್ನೂ ತಿಳಿಯಲು ಸಹಾಯಕವಾಗಿದೆ.

ರಾಜ್ಯ ಹಾಗೂ ಜಿಲ್ಲಾ ಮಟ್ಟಗಳ ಮೇಳ-ರ್‍ಯಾಲಿ-ಕ್ಯಾಂಪೋರೀ-ಜಾಂಬೋರೆಟ್‌ಗಳ ಉದ್ದೇಶವೂ ಇಂತಹುದೇ ಆಗಿದೆ. ಆದರೆ ಅದರ ಪರಿಮಿತಿ ಪ್ರಾದೇಶಿಕವಾದದ್ದು, ಸೀಮಿತವಾದದ್ದು. ಮಹತ್ವಪೂರ್ಣವಾದ ಈ ಕೆಲಸಕ್ಕಾಗಿ ಅದೆಷ್ಟೋ ಕಾಲವ್ಯಯವಾಗಬಹುದು. ಹಣ ಖರ್ಚಾಗಬಹುದು. ಆದರೆ ಉದ್ದೇಶ ಸಾಧನೆಯಿಂದ ಉಂಟಾಗುವ ಪರಿಣಾಮ-ಬದಲಾವಣೆ ಅಮೂಲ್ಯವಾದದ್ದು. ಕಾಲವ್ಯಯ, ಖರ್ಚಾದ ಹಣ ಅತ್ಯಲ್ಪವೆನಿಸಿ ವಿಶ್ವವೇ ಒಂದು ಕುಟುಂಬ ಎಂಬ ಭಾವನೆಯಲ್ಲಿ ಸಾಕಾರಗೊಳಿಸುತ್ತದೆ.

## ಸ್ಕೌಟುಗಳ ಸಮವಸ್ತ್ರ

ಸ್ಕೌಟು ಈ ಕೆಳಕಂಡಂತೆ ಸಮವಸ್ತ್ರವನ್ನು ಧರಿಸುತ್ತಾನೆ.

(i) **ಷರ್ಟು:** ಆಕಾಶ ಬೂದು (ಸ್ಟೀಲ್‌ಗ್ರೇ) ಬಣ್ಣ,, ಅದಕ್ಕೆರಡು ಮುಚ್ಚಳಸಹಿತ ಜೇಬುಗಳು ಮತ್ತೆ ಭುಜ ಪಟ್ಟಿಗಳು, ಅರ್ಧ ತೋಳು–ಪೂರ್ತ ತೋಳಿನದಾದರೆ ಮೇಲಕ್ಕೆ ಮಡಿಸಿರಬೇಕು (ಚಳಿ ಹವೆಯಲ್ಲಿ ಬೇಕಾದರೆ ಪೂರಾ ತೋಳು ತೊಡಬಹುದು)

(ii) **ನಿಕ್ಕರ್ ಅಥವಾ ಪ್ಯಾಂಟ್:** ಸಾಗರ ನೀಲಿ ಬಣ್ಣದ್ದು

(iii) **ತಲೆಯುಡಿಗೆ:** ರಾಷ್ಟ್ರೀಯ ಸಂಸ್ಥೆ ಒದಗಿಸಿರುವ ಅಧಿಕೃತ ಪದಕವಿರುವ ಕಡು ನೀಲಿ ಬಣ್ಣದ ಬೆರ್ರೆ, ಸಿಖ್ಖರು ಅಧಿಕೃತ ಪದಕಸಹಿತವಾದ ನೀಲಿ ರುಮಾಲು ಧರಿಸಬಹುದು. ಸಮಾರಂಭಗಳಲ್ಲಿ ಶಿರೋಧಾರಣೆಯು ಕಡ್ಡಾಯವಾದುದು.

(iv) **ನಡುಪಟ್ಟಿ:** ಬೂದು ಬಣ್ಣದ ನೈಲೆಕ್ಸ್ ಪಟ್ಟಿ, ಅದಕ್ಕೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಅಧಿಕೃತ ಚಿಲುಕಟ್ಟು (ಬಕಲ್) ಇರಬೇಕು.

(v) **ಕಂಠ ವಸ್ತ್ರ:** ಹಸಿರು, ನೇರಳೆ ಮತ್ತು ಹಳದಿ ಬಣ್ಣಗಳನ್ನು ಹೊರತುಪಡಿಸಿ, ಉಳಿದ ಯಾವುದೇ ಬಣ್ಣದ ಅಥವಾ ಬಣ್ಣಗಳ ಮಿಶ್ರಣದ ನಮೂನೆಯ (ಸ್ಥಳೀಯ/ಜಿಲ್ಲಾ ಸಂಸ್ಥೆಯವರು ಅನುಮೋದಿಸಿದ) ತ್ರಿಕೋನಾಕಾರದ ವಸ್ತ್ರ, ಕಂಠವಸ್ತ್ರವನ್ನು ಕೊರಳು ಮತ್ತು ಭುಜಪಟ್ಟಿಗಳ ಮೇಲೆ, ಕೊರಳಿನ ಸುತ್ತಲೂ ಧರಿಸಬೇಕು. ಗುಂಪಿನ ವೋಗಲ್ ಧರಿಸಬೇಕು. ಗಿಲ್ ವೆಲ್ ವೋಗಲ್ (ವುಡ್ ಬ್ಯಾಡ್ಜ್ ಪಡೆದ ಹೊರತು) ಧರಿಸುವಂತಿಲ್ಲ. ಕಂಠವಸ್ತ್ರದ ಪ್ರತಿ ಬಾಹುವಿನ ಉದ್ದ ಕನಿಷ್ಠ 70 ಸೆ.ಮೀ., ಗರಿಷ್ಠ 90 ಸೆ.ಮೀ. ಇರಬೇಕು.

(vi) **ಭುಜ ಪದಕ:** ಭುಜ ಪದಕವು 6–8 ಸೆ.ಮೀ. ಉದ್ದ, 1.5 ಸೆ.ಮೀ. ಅಗಲವಿರುತ್ತದೆ. ಬಿಳಿಯ ಹಿನ್ನೆಲೆಯ ಮೇಲೆ ಕೆಂಪು ಅಕ್ಷರಗಳಲ್ಲಿ ಗುಂಪಿನ ಕ್ರಮ ಸಂಖ್ಯೆ ಮತ್ತು ಹೆಸರು ಅಥವಾ ಜಿಲ್ಲೆ/ರಾಜ್ಯದ ಹೆಸರು (ಅವಶ್ಯಕತೆಗೆ ತಕ್ಕಂತೆ ಸರಿಯಾಗಿ) ಅದರಲ್ಲಿ ನಮೂದಿಸಲಾಗಿರುತ್ತದೆ. ತುದಿಗಳಲ್ಲಿ ಸ್ವಲ್ಪ ಬಾಗಿರುವ ಪಟ್ಟಿಯ ಈ ಪದಕವನ್ನು ಭುಜದ ಹೊಲಿಗೆಯ ಕೆಳಗೆ, ಎರಡೂ ಭುಜಗಳ ಮೇಲೆ ಧರಿಸಬಹುದು.

**ಸೂಚನೆ:** ಗುಂಪಿನಲ್ಲಿ ಸಾಗರ ಸ್ಕೌಟ್ ಅಥವಾ ವಾಯು ಸ್ಕೌಟುಗಳಿದ್ದರೆ ಭುಜಪದಕದ ಮೇಲೆ ಆ ಬಗ್ಗೆ ನಮೂದಿಸಬಾರದು. ಬದಲು ರಾಷ್ಟ್ರ ಕಛೇರಿಯು ಒದಗಿಸುವ, ಕೆಂಪು ಅಕ್ಷರಗಳಲ್ಲಿ ಆ ಪದಗಳಿರುವ ಬಿಳಿಯ ಪಟ್ಟಿಯನ್ನು ಭುಜಪಟ್ಟಿಗಳ ಮೇಲೆ ಬರುವಂತೆ ಎರಡೂ ಭುಜಗಳಲ್ಲಿ ಧರಿಸಬಹುದು.

(vii) **ಭುಜ ವರ್ಣ ಪಟ್ಟಿಗಳು:** 'ಬಾಲಕರಿಗಾಗಿ ಸ್ಕೌಟಿಂಗ್' ಪುಸ್ತಕದಲ್ಲಿ ನಮೂದಿಸಿರುವಂತೆ ಪಟಾಲಂನ ಬಣ್ಣ ಮತ್ತು ಹೆಸರನ್ನು ಸೂಚಿಸುವ 5 ಸೆಂ.ಮೀ. ಉದ್ದ, 1.5 ಸೆ.ಮೀ. ಅಗಲದ ವರ್ಣ ಪಟ್ಟಿಗಳನ್ನು, 2 ಸೆ.ಮೀ. ಅಂತರದಲ್ಲಿ ಬೂದು ಬಣ್ಣದ ಚೌಕಾಕೃತಿಯ ಬಟ್ಟೆಯ ಮೇಲೆ ಅಡ್ಡಡ್ಡವಾಗಿ ಹೊಲಿದಿರಬೇಕು. ಈ ಪಟ್ಟಿಯನ್ನು ಭುಜಪದಕದ ಕೆಳಗೆ, ಎಡಭುಜದ ಮೇಲೆ ಧರಿಸಬೇಕು.

**ಸೂಚನೆ:** ಚರ ಚಿಕಿತ್ಸಕ ಪದಕ ಇದ್ದರೆ, ಭುಜವರ್ಣ ಪಟ್ಟಿಗಳನ್ನು ಆ ಪದಕದ ಕೆಳಗೆ ಧರಿಸಬೇಕು.

(viii) **ಸದಸ್ಯತ್ವ ಪದಕ:** ಹಳದಿ ಬಣ್ಣದಲ್ಲಿ ಅಶೋಕ ಚಕ್ರವನ್ನು ಮಧ್ಯದಲ್ಲಿ ಒಳಗೊಂಡ ತ್ರಿದಳಪತ್ರವನ್ನುಮೇಲಿರಿಸಿರುವ, ಹಳದಿಬಣ್ಣದ ತ್ರಿದಳ ಕಮಲವಿರುವ, ಹಸಿರು ಹಿನ್ನೆಲೆಯ ಬಟ್ಟೆಯ ಪದಕವನ್ನು, ಷರ್ಟ್‌ನ ಎಡಜೇಬಿನ ಮಧ್ಯ ಪಟ್ಟಿಯ ಮಧ್ಯೆ ಧರಿಸಬೇಕು.

(ix) **ಕಾಲುಚೀಲ ಅಥವಾ ಮೊಣಕಾಲುಚೀಲ:** ಕಪ್ಪು ಬಣ್ಣದ್ದಾಗಿರಬೇಕು. ಮೊಣಕಾಲುಚೀಲವಾದರೆ ನಿಕ್ಕರ್‌ನೊಂದಿಗೆ ಮಾತ್ರ ಧರಿಸಬೇಕು. ಹಾಗೆ ಧರಿಸಿದಾಗ, ಲಾಡಿಪಟ್ಟಿಯ (ಗಾರ್ಟರ್ ಟ್ಯಾಬ್ಸ್) ನೀಲಿಚುಂಗು 1 ಸೆ.ಮೀ. ಹೊರಗೆ ಕಾಣುವಂತೆ, ಮೊಣಕಾಲು ಚೀಲವನ್ನು, ಮೊಣಕಾಲು ಕೆಳಗೆ ಮಡಿಸಿರಬೇಕು.

(x) **ವಿಶ್ವಸ್ಕೌಟ್ ಪದಕ:** ಸಮವಸ್ತ್ರದ ಬಲಜೇಬಿನ, ನಡುಪಟ್ಟಿಯ ಮಧ್ಯ ಭಾಗದಲ್ಲಿ ಈ ಪದಕವನ್ನು ಧರಿಸಬೇಕು.

(xi) **ಪಾದರಕ್ಷೆಗಳು:** ಲೇಸ್ ಇರುವ ಕಪ್ಪು ಷೂಗಳನ್ನು (ಚರ್ಮ ಅಥವಾ ಕ್ಯಾನ್‌ವಾಸ್) ಧರಿಸಬಹುದು.

(xii) **ಮೇಲಂಗಿ, ಬ್ಲೇಸರ್ ಅಥವಾ ಜಾಕೆಟ್:** ಸಾಗರ ನೀಲಿ ಬಣ್ಣದ ಮೇಲಂಗಿ ಅಥವಾ ಸಾಗರ ನೀಲಿ ಬಣ್ಣದ ಬ್ಲೇಸರ್ ಅಥವಾ ಸಾಗರ ನೀಲಿ ಬಣ್ಣದ ಜಾಕೆಟ್ ಅನ್ನು ಚಳಿಗಾಲದಲ್ಲಿ ಮಾತ್ರ ಧರಿಸಬಹುದು.

(xiii) **ಲೋಹದಪದಕ:** ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಲೋಹದ ಪದಕವನ್ನು ಸಾದಾ ಉಡುಪಿನಲ್ಲಿ ಧರಿಸಬಹುದು.

(xiv) **ಶೀಟಿಯದಾರ:** ಬೂದು ಬಣ್ಣದ ಶೀಟಿಯ ದಾರವನ್ನು ಕೊರಳ ಸುತ್ತ ಧರಿಸಿ, ಶೀಟಿಯನ್ನು ಎಡ ಜೇಬಿನಲ್ಲಿ ಇಳಿಬಿಡತಕ್ಕದ್ದು, ಮೂರು ಮೀ. ಉದ್ದದ **ಗಂಟು ಹಾಕಲು ಉಪಯೋಗಿಸುವ ಹಗ್ಗವನ್ನು** ಸಮವಸ್ತ್ರದೊಂದಿಗೆ ನಡುಪಟ್ಟಿಯಲ್ಲಿ ಧರಿಸತಕ್ಕದ್ದು.

(xv) **ಹೊರಾಂಗಣ ಚಟುವಟಿಕೆಗಳಲ್ಲಿ:** ಹೆಗಲು ಚೀಲ (ಹ್ಯಾವರ್ ಸ್ಯಾಕ್) ಅಥವಾ ಬೆನ್ನುಚೀಲ (ರುಕ್ ಸ್ಯಾಕ್) ವನ್ನು ಧರಿಸಬಹುದು.

(xvi) **ನಾಮ ಪಟ್ಟಿ:** ರಾಷ್ಟ್ರೀಯ ಕೇಂದ್ರ ಕಛೇರಿಯು ವಿನ್ಯಾಸ ಗೊಳಿಸಿರುವ ಮತ್ತು ಒದಗಿಸಿರುವ "The Bharat Scouts and Guides" ಎಂಬ ಅಕ್ಷರಗಳನ್ನುಳ್ಳ ನಾಮಪಟ್ಟಿಯನ್ನು ಬಲ ಜೇಬಿನ ಮೇಲೆ ಧರಿಸಬೇಕು.

**ಷರಾ:** ಸಾಗರ ಸ್ಕೌಟ್ ಮತ್ತು ವಾಯು ಸ್ಕೌಟುಗಳು ಈ ಎಲ್ಲದರ ಜೊತೆಗೆ ಸಾಗರ ಸ್ಕೌಟ್ ಮತ್ತು ವಾಯು ಸ್ಕೌಟ್‌ಪದಕಗಳನ್ನು ಬಲಜೇಬಿನ ಮೇಲ್ಭಾಗದಲ್ಲಿ 4 ಸೆಂ.ಮೀ. ಅಂತರದಲ್ಲಿ ಧರಿಸತಕ್ಕದ್ದು.

**ಸಾಂದರ್ಭಿಕ ಉಡುಪುಗಳು:** ಕಡು ನೀಲಿ ಬಣ್ಣದ ಜೀನ್ಸ್/ಪ್ಯಾಂಟ್/ಷಾರ್ಟ್ಸ್, ಕಂಠ ಪಟ್ಟಿಉಳ್ಳ, BSG ಮುದ್ರೆ ಹೊಂದಿದ ಜೇಬುಳ್ಳ, ಸಾಗರ ನೀಲಿ ಬಣ್ಣದ ಟೀ ಷರ್ಟ್ಸ್, BSG ಲಾಂಛನವಿರುವ ಕಡುನೀಲಿ ಬಣ್ಣದ ಪೀ ಕ್ಯಾಪ್ ಅನ್ನು, ಕಪ್ಪು ಬಣ್ಣದ ಆಟದ ಷೂಗಳೊಂದಿಗೆ ಕಾರ್ಯನಿರತ ಸಮವಸ್ತ್ರವಾಗಿ/ಕ್ಷೇತ್ರ ಚಟುವಟಿಕೆಗಳ ವೇಳೆ ಐಚ್ಛಿಕವಾಗಿ ಧರಿಸಬಹುದು.



## ಅಧ್ಯಾಯ-18

# ಸ್ಕೌಟ್‌ನ ಶಿಕ್ಷಣ

ಸ್ಕೌಟುಗಳು ಪ್ರವೇಶ್‌ನಿಂದ ರಾಷ್ಟ್ರಪತಿ ಸ್ಕೌಟ್‌ವರೆಗೆ ವಿವಿಧ ಹಂತಗಳಲ್ಲಿರುತ್ತಾರೆ. "ಪ್ರವೇಶ ಸ್ಕೌಟ್" ಪ್ರಾರಂಭದ ಹಂತ. ದಳಕ್ಕೆ ಸೇರಿದ ಕೂಡಲೇ ಬಾಲಕನು ಮೊದಲು ಗಳಿಸುವ ಹಂತವಿದು. ಪ್ರತಿ ಸ್ಕೌಟೂ ಆಶಿಸುವ, ಸಾಧಿಸಲೇಬೇಕಾದ ಅತ್ಯುನ್ನತ ಮಟ್ಟದ ಹಂತವೆಂದರೆ "ರಾಷ್ಟ್ರಪತಿ ಸ್ಕೌಟು". ಈ ಮಧ್ಯೆ ಪ್ರಥಮ, ದ್ವಿತೀಯ, ತೃತೀಯ ಸೋಪಾನಗಳು ಮತ್ತು ರಾಜ್ಯ ಪುರಸ್ಕಾರ್ ಪದಕಗಳ 4 ಹಂತಗಳು ಇವೆ.

ವಿವಿಧ ಹಂತಗಳು ಸ್ಕೌಟ್‌ನ ಜೀವನದಲ್ಲಿ ಪ್ರಗತಿಪರವಾದ ಮೆಟ್ಟಿಲುಗಳು. ಹತ್ತು ವರ್ಷಗಳು ಕಳೆಯುತ್ತಿದ್ದಂತೆಯೇ ದಳಕ್ಕೆ ಸೇರಿದ ಬಾಲಕನು ಕಲಿಯಲು ಪ್ರಾರಂಭಿಸುತ್ತಾನೆ. ಸೇರಿದ ಮೂರು ತಿಂಗಳುಗಳೊಳಗೆ ಅವನು ಪ್ರವೇಶ್ ಸ್ಕೌಟ್ ಆಗುತ್ತಾನೆ. ಅಲ್ಲಿಂದ ಮುಂದೆ 6 ತಿಂಗಳುಗಳೊಳಗೆ ಅವನು ಪ್ರಥಮ ಸೋಪಾನ್ ಸ್ಕೌಟ್ ಆಗಲು ಸಾಧ್ಯ. ಆ ಬಳಿಕ, ಶ್ರದ್ಧಾಪೂರ್ವಕ ಪ್ರಯತ್ನದಿಂದ, ಅವನು ಮುಂದಿನ 6 ತಿಂಗಳುಗಳೊಳಗೆ ದ್ವಿತೀಯ ಸೋಪಾನ್ ಸ್ಕೌಟ್ ಪದಕವನ್ನು ಗಳಿಸಿ, ಮುಂದಿನ 6 ತಿಂಗಳೊಳಗೆ ತೃತೀಯ ಸೋಪಾನ್ ಸ್ಕೌಟ್ ಆಗುತ್ತಾನೆ. ಅಲ್ಲಿಂದ ಮುಂದೆ 9 ತಿಂಗಳುಗಳೊಳಗೆ "ರಾಜ್ಯ ಪುರಸ್ಕಾರ್", ಸ್ಕೌಟ್ ಆಗಬಲ್ಲ. ಆ ನಂತರದ ಹಂತವೇ "ರಾಷ್ಟ್ರಪತಿ ಸ್ಕೌಟ್" ಪ್ರಶಸ್ತಿ ಪಡೆಯಬಲ್ಲ. ರಾಜ್ಯ ಪುರಸ್ಕಾರ್ ಬಳಿಕ ಒಂದು ವರ್ಷ ಶ್ರಮಿಸಿ ರಾಷ್ಟ್ರಪತಿ ಸ್ಕೌಟ್ ಆಗಲು ಅವಕಾಶ. ತೃತೀಯ ಸೋಪಾನ್ ಬಳಿಕದ ಹಂತಗಳಿಗೆ ನೋಂದಣಿ, ಪರೀಕ್ಷಾ ಶಿಬಿರಗಳ ನಿಯಮಗಳಿವೆ.

ಸ್ಕೌಟು ಪ್ರಗತಿಪರವಾಗಿ ಮುಂದುವರೆಯಲು ಪ್ರಯತ್ನಿಸಬೇಕಾದ ವಿವರಗಳನ್ನೂ ಗೊತ್ತುಪಾಡುಗಳನ್ನೂ, ಎ.ಪಿ.ಆರ್.ಓ. ಭಾಗ-2ರ ಅಧ್ಯಾಯ, II ಮತ್ತು IIIರಲ್ಲಿ ಹೇಳಲಾಗಿದೆ.

ಪ್ರಗತಿ ಪರವಾದ ಈ ವಿವಿಧ ಹಂತಗಳನ್ನು ಸ್ಕೌಟುಗಳ ಅಂತಸ್ತುಗಳೆಂದೂ ಹೇಳಬಹುದು. ಹಾಗಾಗಿ ಇದನ್ನು ಮೇಲೇರುವ "ಸ್ಕೌಟುಗಳ ದಕ್ಷತೆಯ ಏಣಿ" ಎಂದೂ ಹೇಳಬಹುದು.

ಈ ದಕ್ಷತೆಯ ಏಣಿಯು ಎಲ್ಲಾ ಸ್ಕೌಟುಗಳೂ ಅನುಸರಿಸಲೇ ಬೇಕಾದ, ಒಂದು ರೀತಿಯ ಮುಖ್ಯ ವ್ಯವಸ್ಥೆ. ಎಲ್ಲಾ ಸ್ಕೌಟುಗಳೂ ಕಾಲಾನುಗುಣವಾಗಿ ಈ ಏಣಿಯನ್ನು ಹತ್ತಬೇಕು ಎಂಬ ಗುರಿಯನ್ನಿಟ್ಟುಕೊಂಡು ಸಾಧಿಸಬೇಕು. ಸ್ಕೌಟುಗಳಾಗಿ ಪಡೆಯುವ ಈ ಶಿಕ್ಷಣವು ಸ್ಕೌಟುಗಳ ಸಾಮಾನ್ಯ ದಕ್ಷತೆಯನ್ನು ಹೆಚ್ಚಿಸುತ್ತದೆ. ಅದಕ್ಕಾಗಿಯೇ ಇದನ್ನು ದಕ್ಷತೆಯ ಸೋಪಾನಗಳೆಂದು ಕರೆಯುವುದು. ಈ ಮುಖ್ಯ ಹಾದಿಯಲ್ಲಿ ಏರುವಾಗ ಹಲವಾರು ವಿಶೇಷ ರೀತಿಯ ಕೌಶಲಗಳಲ್ಲಿ, ಪ್ರವೀಣತಾ ಪದಕಗಳ ಮೂಲಕ ಶಿಕ್ಷಣವು ದೊರಕುತ್ತದೆ. ಇದನ್ನು ಪ್ರವೀಣತಾ ಶಿಕ್ಷಣವೆಂದು ಹೇಳಬಹುದು.

## ವಿಶೇಷ ಪ್ರವೀಣತಾ ಪದಕಗಳು

ಸ್ಕೌಟ್ ಶಿಕ್ಷಣದಲ್ಲಿ ದ್ವಿತೀಯ ಸೋಪಾನ್ ಹಂತದಿಂದ ಪ್ರಾರಂಭಿಸಿ ರಾಷ್ಟ್ರಪತಿ ಸ್ಕೌಟ್ ಹಂತದವರೆಗೆ ಮತ್ತು ನಂತರ ಸ್ಕೌಟುಗಳು ವಿವಿಧ ವಿಷಯಗಳ ಬಗ್ಗೆ ತಿಳಿಸುವ, ಹಲವಾರು (ಒಂದು ನೂರು) ವಿಶೇಷ ಪ್ರವೀಣತಾ ಪದಕಗಳನ್ನು ಪಡೆಯಬಹುದು.

ಪ್ರವೀಣತಾ ಪದಕಗಳನ್ನು ಗಳಿಸುವುದು ಮತ್ತು ಧರಿಸುವುದು, ಕೇವಲ ಅಲಂಕಾರ ಮಾಡಿಕೊಳ್ಳುವುದಕ್ಕಲ್ಲ. ಸ್ಕೌಟಾದವನು ತನ್ನ ಸಹಜ ಪ್ರವೃತ್ತಿಗಳಿಗನುಸಾರವಾಗಿ ಅವುಗಳನ್ನು ಆರಿಸಿಕೊಳ್ಳಬೇಕು. ಆಯ್ಕೆ ಮಾಡಿಕೊಂಡ ಮೇಲೆ, ಆ ವಿಷಯದ ಬಗ್ಗೆ ಸಾಕಷ್ಟು ತಿಳುವಳಿಕೆ ಪಡೆದು, ಅದರ ಕೌಶಲಗಳಲ್ಲಿ, ಅವಶ್ಯಕವಾದಷ್ಟು ಪ್ರವೀಣತೆಯನ್ನು ಪಡೆಯಬೇಕು. ಅದನ್ನು ಸಮಾಜದ ಏಳಿಗೆಗಾಗಿ ಉಪಯೋಗಿಸಲು ಶ್ರಮವಹಿಸಿ, ಶ್ರದ್ಧಾಪೂರ್ವಕವಾಗಿ ಕೆಲಸ ಮಾಡಬೇಕು.

ಎಷ್ಟೋ, ಪ್ರವೀಣತಾ ಪದಕಗಳು ಬಾಲಕರು ಹಿರಿಯರಾದಾಗ ಅವರ ಜೀವನೋಪಾಧಿಯ ವೃತ್ತಿ ಆಗಿರುವುದನ್ನು ಕಾಣುತ್ತೇವೆ. ಅವರ ಸ್ವಂತ ಜೀವನದಲ್ಲಿ ಸಹ ಸ್ವಾವಲಂಬಿ ಸುಖೀ ಬಾಳಿಗೆ ಸಹಾಯಕವಾಗಿ ಇರುವುದನ್ನೂ ಕಾಣುತ್ತೇವೆ.

## ಸ್ಕೌಟ್ ಪ್ರವೀಣತಾ ಪದಕಗಳು

ಅ. ಸ್ಕೌಟ್ ಪ್ರವೀಣತಾ ಪದಕಗಳು ಈ ಕೆಳಕಂಡಂತಿವೆ :

| ಸಚ್ಚಾರಿತ್ರ್ಯ (ನಡತೆ) | ಆರೋಗ್ಯ | ಹವ್ಯಾಸ ಮತ್ತು ಕರಕುಶಲತೆ | ಸೇವೆ | ಸಂರಕ್ಷಣೆ ಮತ್ತು ತಾಂತ್ರಿಕಕತೆ |
|---|---|---|---|---|
| ಶಿಬಿರ ವಾಸಿ | ಬಿಲ್ಲುಗಾರ | ಕಲಾಗಾರ | ಏಯ್ಡ್ಸ್ ಜಾಗೃತಿ | ವಿಮಾನಚಾಲಕ |
| ನಾಗರಿಕ | ಕ್ರೀಡಾಪಟು | ವಿಮಾನ ಗುರುತಿಸುವವ | ಚರಚಿಕಿತ್ಸಕ | ಗಣಕಯಂತ್ರ ಜಾಗೃತಿ |
| ಚರ್ಚಾಪಟು | ಆರೋಹಿ | ಕಗ್ಗಾಡು ಜೀವಿ | ಅಂಬಿಗ | ಪರಿಸರತಜ್ಞ |
| ಮನೋರಂಜಕ | ಸೈಕಲ್ ತಜ್ಞ | ಬುಟ್ಟಿ ತಯಾರಕ | ಅರ್ಬುಧರೋಗ ಜಾಗೃತಿ | ವಿದ್ಯುತ್ ತಜ್ಞ |
| ನಾನು ಮುಕ್ತವಾಗಿರುವಿಕೆ | ಕ್ರೀಡಾ ನಾಯಕ | ಜೇನುಪಾಲಕ | ನಾಗರಿಕ ರಕ್ಷಣೆ | ವಿದ್ಯುನ್ಮಾನ |
| ಉತ್ತಮ ನೆರೆಹೊರೆ | ಅಂಗ ಸಾಧಕ | ಪಕ್ಷಿಪಾಲಕ | ಸಮುದಾಯಕಾರ್ಯಕರ್ತ | ಅನ್ವೇಷಕ |
| ಪ್ರಕೃತಿ ತಜ್ಞ | ಆರೋಗ್ಯವಂತ | ಪುಸ್ತಕರಟ್ಟು ಕಟ್ಟುವವ | ವಿಪತ್ತು ನಿರ್ವಹಣೆ | ಪ್ರಾಣಿ ಮಿತ್ರ |
| ಓದುಗ | ಚಾರಣಿಗ | ಬ್ರೈಲ್ | ಮಾದಕವಸ್ತು ಜಾಗೃತಿ | ತೋಟಗಾರ |
| ಉತ್ತಮ ವಿದ್ಯಾರ್ಥಿ | ಮಾರ್ಗಶೋಧಕ | ಒಂಟೆ ಸವಾರ | ಘಟನಾ ನಿರ್ವಾಹಕ | ಮೂಲಿಕಾ ತಜ್ಞ |
| ವಿಶ್ವ ಮೈತ್ರಿ | ಅಗ್ರಗಾಮಿ | ಶಿಬಿರ ಪಾಲಕ | ರೈತ | ಪರಂಪರೆ |
| | ಸುರಕ್ಷತಾ ಅರಿವು | ಬಡಗಿ | ಅಗ್ನಿಶಾಮಕ | ಹವಾಮಾನ ತಜ್ಞ |

| ಸಚ್ಚಾರಿತ್ರ್ಯ (ನಡತೆ) | ಆರೋಗ್ಯ | ಹವ್ಯಾಸ ಮತ್ತು ಕರಕುಶಲತೆ | ಸೇವೆ | ಸಂರಕ್ಷಣೆ ಮತ್ತು ತಾಂತ್ರಿಕತೆ |
|---|---|---|---|---|
| | ಸ್ವರಕ್ಷಣೆ | ಸಮುದಾಯ ಗಾಯನ | ಆಸ್ಪತ್ರೆ ಮೇಲ್ವಿಚಾರಕ | ವಾಹನ ಕರ್ಮಿ |
| | ಈಜುಗಾರ | ಬಾಣಸಿಗ | ಕಿವುಡರ ದುಭಾಷಿ | ಕೊಳಾಯಿ ದುರಸ್ತಿಗಾರ |
| | ಜಾಡುಗಾರ | ಹೈನುಗಾರ | ಕುಷ್ಠರೋಗ ನಿಯಂತ್ರಣ | ಕೋಳಿ ಸಾಕುವವ |
| | ಯೋಗ | ಮರಳುಗಾಡು ವಾಸಿ | ಸಾಕ್ಷರತೆ | ಮಣ್ಣು ಸಂರಕ್ಷಕ |
| | | ಪುಷ್ಪ ತಜ್ಞ | ಪೌಷ್ಟಿಕತೆ ಬೋಧಕ | ಸೌರಶಕ್ತಿ ಜಾಗೃತಿ |
| | | ಜಾನಪದ ನರ್ತಕ | ಸಾರ್ವಜನಿಕ ಆರೋಗ್ಯ – ಕಾರ್ಯಕರ್ತ | ಮರಸು ಬೇಟೆಗಾರ |
| | | ಅರಣ್ಯ ತಜ್ಞ | ರಕ್ಷಕ | ವಿಶ್ವ ಸಂರಕ್ಷಣೆ |
| | | ಕರಕುಶಲಗಾರ | ಗ್ರಾಮೀಣ ಅಭಿಯಂತ | |
| | | ಪತ್ರಕರ್ತ | ಗ್ರಾಮೀಣ ಕಾರ್ಯಕರ್ತ | |
| | | ಮಡಿವಾಳ | ಪಾಕೀಜು ಪ್ರವರ್ತಕ | |
| | | ಚರ್ಮಕರ್ಮಿ | | |
| | | ನಕ್ಷೆ ತಯಾರಕ | | |

| ಸಚ್ಚಾರಿತ್ರ್ಯ (ನಡತೆ) | ಆರೋಗ್ಯ | ಹವ್ಯಾಸ ಮತ್ತು ಕರಕುಶಲತೆ | ಸೇವೆ | ಸಂರಕ್ಷಣೆ ಮತ್ತು ತಾಂತ್ರಿಕಕತೆ |
|---|---|---|---|---|
| | | ಗುರಿಕಾರ | | |
| | | ಸಂಗೀತಗಾರ | | |
| | | ದೋಣಿ ನಡೆಸುವವ | | |
| | | ಛಾಯಾ ಗ್ರಾಹಕ | | |
| | | ಮುದ್ರಣಕಾರ | | |
| | | ಮಾರಾಟಗಾರ | | |
| | | ಕಾರ್ಯದರ್ಶಿ | | |
| | | ಸಾಗರ ಮೀನುಗಾರ | | |
| | | ಸಂಕೇತಗಾರ | | |
| | | ನಕ್ಷತ್ರ ವೀಕ್ಷಕ | | |
| | | ದರ್ಜಿ | | |
| | | ತಂತಿಸಂದೇಶ ಕಳುಹಿಸುವವ | | |

ಅಧ್ಯಾಯ–19

# ಸ್ಕೌಟ್ ನಿಯಮ ಮತ್ತು ಪ್ರತಿಜ್ಞೆ

ಸ್ಕೌಟ್ ನಿಯಮ ಮತ್ತು ಪ್ರತಿಜ್ಞೆ ಇವುಗಳು ಸ್ಕೌಟಿಂಗ್‌ನ ಮೂಲತತ್ವದ ಭಾಗವಾಗಿದೆ. ಬಾಲಕನು ದಳಕ್ಕೆ ಸೇರಿದಾಗ, ಸ್ಕೌಟ್ ಪ್ರತಿಜ್ಞೆ ಮಾಡುತ್ತಾನೆ.

**ಸ್ಕೌಟ್ ಪ್ರತಿಜ್ಞೆ**

ನಾನು,
ದೇವರಿಗೂ * ಮತ್ತು ನನ್ನ ದೇಶಕ್ಕೂ ನನ್ನ ಕರ್ತವ್ಯವನ್ನು ಮಾಡಲು
ಇತರರಿಗೆ ಸಹಾಯ ಮಾಡಲು ಮತ್ತು
ಸ್ಕೌಟ್ ನಿಯಮವನ್ನು ಪಾಲಿಸಲು
ನನ್ನ ಕೈಲಾದ ಮಟ್ಟಿಗೆ,
ಪ್ರಯತ್ನಿಸುತ್ತೇನೆಂದು, ನನ್ನ ಗೌರವ ಸಾಕ್ಷಿಯಾಗಿ ಪ್ರತಿಜ್ಞೆ ಮಾಡುತ್ತೇನೆ.

* ಅಪೇಕ್ಷೆ ಇದ್ದರೆ "ದೇವರು" ಪದಕ್ಕೆ ಬದಲು "ಧರ್ಮ" ಪದವನ್ನು ಉಪಯೋಗಿಸಬಹುದು.

ಬಾಲಕನು ಈ ಪ್ರತಿಜ್ಞೆಯನ್ನು, ಒಂದು ಸರಳ ಸಮಾರಂಭದಲ್ಲಿ ತೆಗೆದುಕೊಳ್ಳುತ್ತಾನೆ. ಈ ಸರಳ ಸಮಾರಂಭವನ್ನು "ದೀಕ್ಷಾ" ಸಮಾರಂಭವೆನ್ನುತ್ತಾರೆ. ಈ ಸಮಾರಂಭದಲ್ಲಿ ದಳದ ಎಲ್ಲಾ ಸದಸ್ಯರೂ ಭಾಗವಹಿಸುತ್ತಾರೆ. ದಳದ ಎಲ್ಲಾ ಸ್ಕೌಟುಗಳ ಎದುರಿನಲ್ಲಿ ಬಾಲಕನು ಸ್ಕೌಟ್ ಮಾಸ್ಟರಿಗೆ ವಚನ ಕೊಡುತ್ತಾನೆ. ಸ್ಕೌಟ್ ಮಾಸ್ಟರು ದೀಕ್ಷೆ ನೀಡುವಾಗಿನಿಂದ ಬಾಲಕನ ಸ್ಕೌಟ್ ಜೀವನವು ಪ್ರಾರಂಭವಾಗುತ್ತದೆ. ದೀಕ್ಷೆವಹಿಸಿಕೊಂಡಾಗಿನಿಂದ ಅವನು ಸ್ಕೌಟು. ಸ್ಕೌಟು ಸಮವಸ್ತ್ರವನ್ನು ಧರಿಸಲೂ, ಸ್ಕೌಟ್ ಪದಕವನ್ನು ಧರಿಸಲೂ ಅರ್ಹತೆ ಪಡೆಯುತ್ತಾನೆ.

ಸ್ಕೌಟ್ ಪ್ರತಿಜ್ಞೆಯಲ್ಲಿ ದೇವರಿಗೆ ಕರ್ತವ್ಯ ಮತ್ತು ದೇಶಕ್ಕೆ ಕರ್ತವ್ಯ ಇವುಗಳ ಜೊತೆಗೆ ಸ್ಕೌಟ್ ನಿಯಮವನ್ನು ಪಾಲಿಸುವುದನ್ನೂ ಸಹ, ಮುಖ್ಯವಾದ ಕರ್ತವ್ಯವನ್ನಾಗಿ ಹೇಳಲಾಗುತ್ತದೆ. ನಿಯಮ ಪಾಲನೆಯು ಬಹಳ ಮುಖ್ಯವಾದ ಕರ್ತವ್ಯವಾಗಿದೆ. ನಿಯಮದಲ್ಲಿ ಬರುವ ಎಲ್ಲಾ ಅಂಶಗಳನ್ನೂ, ಸ್ಕೌಟ್ ಮಾಸ್ಟರು

ಬಾಲಕರಿಗೆ ಮುಂಚಿತವಾಗಿ, ಸ್ಫುಟವಾಗಿ, ವಿವರವಾಗಿ ತಿಳಿಯ ಹೇಳಬೇಕು. ಈ ವಿವರಣೆಯನ್ನು, ಸ್ಕೌಟ್ ಮಾಸ್ಟರರು ತಮ್ಮ ವಿಶೇಷ ಕರ್ತವ್ಯವೆಂದು ಭಾವಿಸಬೇಕು.

ಸ್ಕೌಟ್ ನಿಯಮವನ್ನು, ಬಾಲಕನು ಮನನ ಮಾಡಿಕೊಂಡು, ಅದರಲ್ಲಿ ಅಡಕವಾಗಿರುವ ಅಂತರಾರ್ಥವನ್ನು ಅರಿತುಕೊಳ್ಳಬೇಕು. ನಿಯಮವನ್ನು ವಾಸ್ತವಿಕ ದೃಷ್ಟಿಯಿಂದ ಅರ್ಥಮಾಡಿಕೊಂಡು, ಅದನ್ನು ಹೇಗೆ ತನ್ನ ಜೀವನದಲ್ಲಿ ಅಳವಡಿಸಿ ಕೊಳ್ಳಬೇಕೆಂಬ ಬಗ್ಗೆ, ದೀರ್ಘವಾಗಿ, ಆಳವಾಗಿ ಯೋಚಿಸಿ ಕಂಡುಕೊಳ್ಳಬೇಕು.

ಸ್ಕೌಟ್ ಮಾಸ್ಟರಾದರೂ, ಈ ವಿಷಯಗಳನ್ನು ಬಾಲಕನೊಡನೆ ಆಗಾಗ್ಗೆ ಚರ್ಚಿಸಬೇಕು. ಸ್ಕೌಟ್ ನಿಯಮದಲ್ಲಿ ನಿಹಿತವಾಗಿರುವ 'ಕರ್ತವ್ಯತತ್ಪರತೆ'ಯ ಬಗ್ಗೆ ಸಾಕಷ್ಟು ಸ್ಪಷ್ಟವಾದ ಅರಿವು, ಬಾಲಕನಲ್ಲಿ ಉಂಟಾಗಿದೆ ಎಂಬುದನ್ನು, ತಿಳಿದುಕೊಳ್ಳಬೇಕು. ನಿಯಮದ ಅಂಶಗಳನ್ನು ಬಾಲಕನು ಬಾಯಿಪಾಠ ಒಪ್ಪಿಸಿದರೆ ಸಾಲದು. ಅವುಗಳ ಆಗು ಹೋಗುಗಳನ್ನರಿತುಕೊಂಡು, ಜೀವನದಲ್ಲಿ ಅನುಸರಿಸುವ ಬಗ್ಗೆ ಆತ್ಮವಿಶ್ವಾಸವನ್ನು ಮೂಡಿಸಿಕೊಂಡಿರುವುದನ್ನು ಗಮನಿಸಬೇಕು.

**ಹಲವಾರು ವಿಶೇಷ ಅಂಶಗಳನ್ನು ಈ ಕೆಳಗೆ ವಿವರಿಸಲಾಗಿದೆ**

1. **ನನ್ನ ಗೌರವ ಸಾಕ್ಷಿಯಾಗಿ:** "ಗೌರವ" ಎಂಬುದು ಬಹಳ ಪವಿತ್ರವಾದುದು. ಅದನ್ನು ಕಾಪಾಡಿಕೊಳ್ಳಬೇಕು. ಕೆಡಿಸಿಕೊಳ್ಳದಂತೆ ನೋಡಿಕೊಳ್ಳಬೇಕು. ಒಮ್ಮೆ "ಗೌರವಸಾಕ್ಷಿ"ಯಾಗಿ ಪ್ರತಿಜ್ಞೆ ಮಾಡಿದರಾಯಿತು. ಬಾಲಕನು, ಏನೇ ಅಡ್ಡ ಬಂದರೂ ಅದನ್ನು ಸಾಧಿಸಿ ತೀರುತ್ತಾನೆ. ಅಷ್ಟೇ ಅಲ್ಲದೆ ಅವನು ನಂಬಿಕಸ್ಥನೆಂದೂ, ಪ್ರಾಮಾಣಿಕ ವ್ಯಕ್ತಿಯೆಂದೂ ಪರಿಗಣಿಸಬಹುದು. ವಿಶ್ವಾಸವಿಡಬಹುದು.

2. **ನನ್ನ ಕೈಲಾದ ಮಟ್ಟಿಗೆ:** ಪ್ರಾರಂಭದಲ್ಲಿ, ಕೊಟ್ಟ ಮಾತಿಗೆ ತಪ್ಪದಂತೆ ನಡೆದುಕೊಳ್ಳುವುದು ಕಷ್ಟವೆನಿಸಬಹುದು. ಆಗೊಮ್ಮೆ ಈಗೊಮ್ಮೆ ಮಾತು ತಪ್ಪಿದಂತಹ ಸಮಯದಲ್ಲಿ ಅವನಿಗೆ ಎಚ್ಚರಿಕೆ ನೀಡಬೇಕು (ಮೇಲೇಳಲು ಸಹಾಯ ಮಾಡಬೇಕು). ಪ್ರತಿಜ್ಞೆ ಮತ್ತು ನಿಯಮ ಪಾಲನೆಯ ಬಗ್ಗೆ ನಿಷ್ಠನಾಗಿರಲು ತಿಳಿಸಬೇಕು. ಬಾಲಕನು ಶ್ರದ್ಧಾ ಪೂರ್ವಕವಾಗಿ ಪ್ರಯತ್ನಿಸು ವುದಾದರೆ, ತಪ್ಪನ್ನು ತಿದ್ದಿಕೊಳ್ಳುವ ಭಾವನೆಯನ್ನು ಬೆಳೆಸಿಕೊಳ್ಳುವುದಾದರೆ ಅವನು "ತನ್ನ ಕೈಲಾದ ಮಟ್ಟಿಗೆ" ಪ್ರಯತ್ನಿಸುತ್ತಿರುವನೆಂದರ್ಥ.

3. **ದೇವರಿಗೆ ಕರ್ತವ್ಯ:** ದೇವರ ಬಗ್ಗೆ ಪೂಜ್ಯ ಭಾವನೆಯನ್ನು ಹೊಂದಿರುವುದು ಸ್ಕೌಟ್‌ನ ಕರ್ತವ್ಯ. ಆ ಕರ್ತವ್ಯವನ್ನು ಸ್ಕೌಟ್ ನೆರವೇರಿಸಬಹುದಾದ ಕೆಲವು ವಿಧಗಳನ್ನು ಈ ಮುಂದೆ ಕೊಡಲಾಗಿದೆ. ದೇವರಲ್ಲಿ ನಂಬಿಕೆ ಇರಬೇಕು. ದೇವರಲ್ಲಿ ವಿಶ್ವಾಸವಿರಬೇಕು. ದೇವರು ನಮಗೆ ಕರುಣಿಸಿರುವ ಸುಂದರವೂ, ಅದ್ಭುತವೂ ಆದ ಸಕಲ ಚರಾಚರಾ ವಸ್ತುಗಳಿಗಾಗಿ ಅವನಿಗೆ ಕೃತಜ್ಞರಾಗಿರಬೇಕು. ಪೂಜ್ಯ ಭಾವನೆಯಿಂದ ನಿಯತ ರೀತಿಯಲ್ಲಿ, ದೇವರನ್ನು ಪ್ರಾರ್ಥಿಸಬೇಕು. ದೇವರು ಸೃಷ್ಟಿಸಿರುವ ಸಮಸ್ತ ಜೀವರಾಶಿಯ ಬಗ್ಗೆ ಕಾಳಜಿಯುಳ್ಳವರಾಗಿ ಅವುಗಳ ಬಗ್ಗೆ ಪ್ರೀತಿ ಮತ್ತು ಕರುಣೆ, ಆದರ ಮತ್ತು ಅನುಕಂಪವುಳ್ಳವರಾಗಿರಬೇಕು.

**ಇನ್ನು ಧರ್ಮದ ಬಗ್ಗೆ ಕರ್ತವ್ಯ:** ಧರ್ಮದ ಹೆಸರಿನಲ್ಲಿ ಪ್ರತಿಜ್ಞೆ ಮಾಡುವ ಸ್ಕೌಟು, ತನ್ನ ಧರ್ಮದಲ್ಲಿ ರೂಪಿಸಿರುವ ತತ್ವಗಳಿಗನುಸಾರವಾಗಿ ನಿಷ್ಠೆಯಿಂದ ನಡೆದುಕೊಳ್ಳಬೇಕು.

4. **ದೇಶಕ್ಕೆ ಕರ್ತವ್ಯ:** ಸ್ಕೌಟು ತನ್ನ ದೇಶವನ್ನು ಪ್ರೇಮಿಸಬೇಕು. ತನ್ನ ದೇಶದ ಬಗ್ಗೆ ಅಭಿಮಾನವುಳ್ಳವನಾಗಿರಬೇಕು. ತನ್ನ ದೇಶದ ಮಹತ್ವವನ್ನು ತಿಳಿದುಕೊಳ್ಳಬೇಕು. ಅದರ ವಿಶಿಷ್ಠ ಸಂಪ್ರದಾಯಗಳನ್ನು ಅರ್ಥಮಾಡಿಕೊಳ್ಳ ಬೇಕು. ದೇಶದ ಸತ್ಪ್ರಜೆಯಾಗಲು ಬೇಕಾದ ಎಲ್ಲವನ್ನೂ ಮಾಡಬೇಕು. ಸಂವಿಧಾನಾತ್ಮಕ ಪ್ರಭುತ್ವಕ್ಕೆ ನಿಷ್ಠೆಯುಳ್ಳವನಾಗಿರಬೇಕು. ದೇಶದ ನಿಯಮಗಳನ್ನು, ಕಟ್ಟುಪಾಡುಗಳನ್ನು ಪಾಲಿಸಬೇಕು. ತನ್ನ ದೇಶದ ಧ್ವಜದ ಬಗ್ಗೆ, ರಾಷ್ಟ್ರಗೀತೆಯ ಬಗ್ಗೆ ಗೌರವ ವುಳ್ಳವನಾಗಿರಬೇಕು.

5. **ಇತರರಿಗೆ ಸಹಾಯ ಮಾಡುವುದು:** ಜನಸೇವೆಯೇ ಜನಾರ್ಧನ ಸೇವೆ ಎಂಬುದನ್ನು ಸ್ಕೌಟು ಅರ್ಥಮಾಡಿಕೊಳ್ಳಬೇಕು. ಇತರರಿಗೆ ಸಹಾಯ ಮಾಡಲು ಸದಾ ಸಿದ್ಧನಾಗಿರಬೇಕು. ಮಾಡುವ ಸಹಾಯವು ಸಣ್ಣದೇ ಇರಲಿ, ದೊಡ್ಡದೇ ಇರಲಿ, ಅದನ್ನು ನಿಷ್ಕಳಂಕ ಭಾವದಿಂದ ಮಾಡುವುದು ಮುಖ್ಯ. ಸರಳ ರೀತಿಯ ಸಹಾಯಕ್ಕೆ ಉಪಕಾರವೆಂದು ಹೇಳಲಾಗುವುದು. ಮಾಡುವ ಉಪಕಾರವನ್ನು, ಸ್ಕೌಟು ನಗು ನಗುತ್ತಾ, ನಿಷ್ಕಳಂಕ ಭಾವನೆಯಿಂದ ಮಾಡುತ್ತಾನಲ್ಲದೆ, ಯಾವುದೇ ರೀತಿಯ ಸಂಭಾವನೆ, ಪ್ರತಿ ಫಲವನ್ನೂ ಅಪೇಕ್ಷಿಸುವುದಿಲ್ಲ. ಸರಳವಾದ ಉಪಕಾರಗಳೆಂದರೆ ವೃದ್ಧರು, ಅಂಧರು, ಅಬಲರನ್ನು ರಸ್ತೆ ದಾಟಿಸುವುದಾಗಿರಬಹುದು, ಸುರಕ್ಷಿತ ಸ್ಥಳಕ್ಕೆ

ಬಿಡುವುದಾಗಿರಬಹುದು, ದಾಹದಿಂದ ಬಳಲುವ ಜಾನುವಾರುಗಳಿಗೆ ಕುಡಿಯುವ ನೀರು ಒದಗಿಸುವುದಿರಬಹುದು ಇತ್ಯಾದಿ.,

6. **ನಿಯಮ ಪಾಲನೆ:** ಸ್ಕೌಟ್ ನಿಯಮದ ಬಗ್ಗೆ ಹೇಳುವುದಾದರೆ, ಸ್ಕೌಟ್ ಮಾಸ್ಟರು ಅದರ ಅನೇಕ ಅಂಶಗಳ ಬಗ್ಗೆ ಸಾವಧಾನವಾಗಿ, ಎಚ್ಚರಿಕೆವಹಿಸಿ ಪ್ರತಿ ಬಾಲಕನಿಗೂ ಅರ್ಥ ಮಾಡಿಸಬೇಕು. ಒಂದು ಬಾರಿಗೆ ಹೆಚ್ಚೆಂದರೆ ನಿಯಮದ 2–3 ಅಂಶಗಳ ಬಗ್ಗೆ ಮಾತ್ರ ವಿವರಿಸಬೇಕು. ಸಚಿತ್ರ ವಿವರಣೆ ಆಗಬಹುದು ಅಥವಾ ನೈಜ ಘಟನೆಯ ವಿವರಣೆ ಆಗಬಹುದು. ಇದರಿಂದ ಬಾಲಕನು ಆ ಅಂಶದ/ಗಳ ಬಗ್ಗೆ ಸರಿಯಾಗಿ ಗ್ರಹಿಸಲೂ, ಅರ್ಥಮಾಡಿ ಕೊಳ್ಳಲೂ ಸಾಧ್ಯವಾಗುತ್ತದೆ.

**ಸ್ಕೌಟ್ ನಿಯಮದ ಅಂಶಗಳು:**

1. **ಸ್ಕೌಟ್ ವಿಶ್ವಾಸಾರ್ಹನು:** ಎಂದರೆ ಸ್ಕೌಟ್ ಸದಾ ಸತ್ಯವನ್ನೇ ಹೇಳುತ್ತಾನೆ. ಮಾತು ತಪ್ಪುವುದಿಲ್ಲ. ಅವನನ್ನು ಸದಾಕಾಲ ನಂಬಬಹುದು.

2. **ಸ್ಕೌಟ್ ನಿಷ್ಠಾವಂತನು:** ಯಾರಿಗೇ ಆಗಲೀ ನಿಷ್ಠೆಯಿಂದಿರಬೇಕಾದರೆ, ಆ ವ್ಯಕ್ತಿಯ ಬಗ್ಗೆ ಗೌರವವಿರಬೇಕು. ಕಷ್ಟ, ಸುಖಗಳಲ್ಲಿ ಭಾಗಿಯಾಗುವಂತಿರ ಬೇಕು. ಸ್ಕೌಟು ಎಲ್ಲರ ವಿಷಯದಲ್ಲಿಯೂ ನಿಷ್ಠೆಯಿಂದಿರುತ್ತಾನೆ.

3. **ಸ್ಕೌಟು ಎಲ್ಲರಿಗೂ ಸ್ನೇಹಿತನು ಮತ್ತು ಇತರ ಎಲ್ಲಾ ಸ್ಕೌಟುಗಳಿಗೂ ಸೋದರನು:** ಸ್ಕೌಟು ಎಲ್ಲರನ್ನೂ ಮಿತ್ರರಂತೆ ಭಾವಿಸುತ್ತಾನೆ ಮತ್ತು ಅದೇ ರೀತಿ ನಡೆದುಕೊಳ್ಳುತ್ತಾನೆ. ಯಾರನ್ನೇ ಆಗಲೀ, ದ್ವೇಷ ಮಾಡುವುದಿಲ್ಲ, ಕೀಳು ಭಾವನೆಯಿಂದ ಕಾಣುವುದಿಲ್ಲ. ಅವನು ಎಲ್ಲರಿಗೂ ಸ್ನೇಹಿತನು. ಇತರ ಸ್ಕೌಟುಗಳನ್ನು ಸೋದರರಂತೆ ಭಾವಿಸುತ್ತಾನೆ. ಈ ಭಾವನೆಗಳಿಗೆ ಜಾತಿ–ಮತ, ಧರ್ಮಗಳಾಗಲೀ, ದೇಶ, ಕಾಲ, ಸಾಮಾಜಿಕ ವರ್ಗಗಳಾಗಲೀ ಅಡ್ಡ ಬರುವುದಿಲ್ಲ.

4. **ಸ್ಕೌಟು ವಿನಯಿ:** ಮಾತಿನಲ್ಲಾಗಲೀ, ಕೆಲಸದಲ್ಲಾಗಲೀ, ಸ್ಕೌಟು ಇತರರೊಡನೆ ಮರ್ಯಾದೆಯಿಂದ ವರ್ತಿಸುತ್ತಾನೆ. ಎಲ್ಲರೊಡನೆ ಅವನು ಮಿದುಭಾಷಿ, ಹಿತಭಾಷಿ, ಎಲ್ಲರೊಡನೆ ವಿನಯಪೂರ್ವಕವಾಗಿಯೂ, ಹಿತಕರವಾಗಿಯೂ, ನಡೆದುಕೊಳ್ಳುತ್ತಾನೆ. ಹೆಂಗಸರು ಮಕ್ಕಳು, ವೃದ್ಧರು ಮತ್ತು ದುರ್ಬಲರ ವಿಷಯದಲ್ಲಂತೂ ಸಭ್ಯತೆಯಿಂದ ವರ್ತಿಸುತ್ತಾನೆ. ವಿನಯಶೀಲನಾಗಿಯೂ, ದಯಾಪರನಾಗಿಯೂ ನಡೆದುಕೊಳ್ಳುತ್ತಾನೆ.

5. **ಸ್ಕೌಟು ಪ್ರಾಣಿ ಮಿತ್ರನು ಮತ್ತು ಪ್ರಕೃತಿ ಪ್ರೇಮಿ:** ಸ್ಕೌಟು ಪ್ರಾಣಿಗಳ ವಿಷಯದಲ್ಲಿ ದಯಾಪರನಾಗಿದ್ದು ಅವುಗಳಿಗೆ ಸಹಾಯ ಮಾಡುತ್ತಾನೆ. ಸಹಮಾನವರ ಅವಶ್ಯಕತೆಗಳಿಗೆ ಸ್ಪಂದಿಸುವಂತೆ, ಪ್ರಾಣಿಗಳ ಅವಶ್ಯಕತೆಗಳಿಗೂ ಸ್ಪಂದಿಸುತ್ತಾನೆ. ನಿಸರ್ಗ ರಮಣೀಯತೆಯನ್ನು ಮೆಚ್ಚುತ್ತಾನೆ. ಅಖಂಡ ದೈವ ಸೃಷ್ಟಿಯನ್ನು ಅವನು ಪ್ರೀತಿಸುತ್ತಾನೆ. ಪ್ರಾಣಿ ಹಿಂಸೆ ಮಾಡುವುದಿಲ್ಲ ಮತ್ತು ಸಸ್ಯವರ್ಗವನ್ನು ಹಾಳುಮಾಡುವುದಿಲ್ಲ.

6. **ಸ್ಕೌಟು ಶಿಸ್ತುಳ್ಳವನು ಮತ್ತು ಸಾರ್ವಜನಿಕ ಆಸ್ತಿಯುನ್ನು ರಕ್ಷಿಸಲು ನೆರವಾಗುವವನು:** ಸ್ಕೌಟು ವಿಧೇಯತೆಯಿಂದ ಇರಬೇಕಾದ ಎಲ್ಲರಿಗೂ ವಿಧೇಯನಾಗಿರುತ್ತಾನೆ– ದಳದಲ್ಲಿ ಸ್ಕೌಟ್ ಮಾಸ್ಟರು, ಪೆಟ್ರೋಲ್ ಲೀಡರು; ಮನೆಯಲ್ಲಿ ತಾಯ್ತಂದೆಯರು, ಮತ್ತಿತರ ಹಿರಿಯರು; ಶಾಲೆಯಲ್ಲಿ ಉಪಾಧ್ಯಾಯರು, ಹೀಗೆ ಅವನ ವಿಧೇಯತೆಯು ತಿಳುವಳಿಕೆಯಿಂದ ಕೂಡಿದ್ದಾಗಿರುತ್ತದೆ. ಸಾರ್ವಜನಿಕ ಆಸ್ತಿಯು ಎಲ್ಲರಿಗೂ ಸೇರಿದುದು ಎಂಬುದನ್ನು ಅವನು ಅರಿತವನಾಗಿರುತ್ತಾನೆ. ಅವನು ಸಾರ್ವಜನಿಕ ಆಸ್ತಿಯನ್ನು ಹಾಳು ಮಾಡುವುದಿಲ್ಲ.

7. **ಸ್ಕೌಟು ಧೈರ್ಯಶಾಲಿ:** ಕಷ್ಟಗಳು ಒದಗಿಬಂದರೂ ಸಹ ಸ್ಕೌಟು ಸದಾಕಾಲ ನಗುನಗುತ್ತಾ, ವಿನಯತೆಯಿಂದ ವರ್ತಿಸುತ್ತಾನೆ. ಹೆದರದೆ ಮುನ್ನುಗ್ಗಿ ಕೆಲಸ ಮಾಡುತ್ತಾನೆ.

8. **ಸ್ಕೌಟು ಮಿತವ್ಯಯಿ:** ಸ್ಕೌಟು ಯಾವುದನ್ನೂ ದುಂದು ಮಾಡದಂತೆ ಎಚ್ಚರ ವಹಿಸುತ್ತಾನೆ. ಅವನು ಎಲ್ಲವನ್ನೂ ಉಳಿಸಲು ಪ್ರಯತ್ನಿಸುತ್ತಾನೆ. ತನಗೆ ಸೇರಿದ, ತಾನು ಉಪಯೋಗಿಸುವ ಎಲ್ಲಾ ವಸ್ತುಗಳನ್ನೂ ಮಿತವಾಗಿ ಬಳಸುತ್ತಾನೆ. ಎಚ್ಚರಿಕೆವಹಿಸಿ ಬಳಸುತ್ತಾನೆ. ಹೆಚ್ಚುಕಾಲ ಬರುವಂತೆ ಉಪಯೋಗಿಸುತ್ತಾನೆ. ಹಣದ ವಿಷಯದಲ್ಲಿ ಸಹ ಮಿತವಾಗಿ ಬಳಸಿ, ಕಷ್ಟಕಾಲದಲ್ಲಿ ಒದಗಿ ಬರುವಂತೆ ನೋಡಿಕೊಳ್ಳುತ್ತಾನೆ. 'ಕಾಲ'ದ ವಿಷಯದಲ್ಲಿಯೂ ಅದೇ ರೀತಿ, ಕಾಲಹರಣ ಮಾಡದೆ, ಹೆಚ್ಚು ಉಪಯುಕ್ತ ರೀತಿಯಲ್ಲಿ ಕೆಲಸ ಮಾಡುತ್ತಾನೆ.

9. **ಸ್ಕೌಟು ಮನಸ್ಸಿನಲ್ಲಿ, ಮಾತಿನಲ್ಲಿ ಮತ್ತು ಕೃತಿಯಲ್ಲಿ ಪರಿಶುದ್ಧನು:** ಸ್ಕೌಟು ಒಳ್ಳೆಯ, ಸ್ವಚ್ಛವಾದ ಯೋಚನೆ ಮಾಡುತ್ತಾನೆ. ಸ್ವಚ್ಛವಾದ ಮಾತುಗಳನ್ನಾಡುತ್ತಾನೆ. ಸ್ವಚ್ಛವಾದ ಕೆಲಸ ಮಾಡುತ್ತಾನೆ. ಯಾವುದೇ ಕೆಟ್ಟ

ಯೋಚನೆ ಅವನ ಮನಸ್ಸಿಗೆ ಬರುವುದಿಲ್ಲ. ಕೆಟ್ಟ ಮಾತಂತೂ ಸುಳಿಯುವುದಿಲ್ಲ. ಅವನು ಮಾಡುವ ಕೆಲಸವಂತೂ ಸದ್ವಿಚಾರದಿಂದ ಕೂಡಿರುತ್ತದೆ. ಎಲ್ಲ ರೀತಿಯಲ್ಲಿಯೂ ಸೂಕ್ತವಾಗಿಯೂ, ಸ್ವಚ್ಛವಾಗಿಯೂ ಇರುತ್ತದೆ.

ಸ್ಕೌಟು ನಿಯಮವನ್ನು ಸ್ಫುಟವಾಗಿಯೂ, ಔಚಿತ್ಯಪೂರ್ಣವಾಗಿಯೂ ಸ್ಕೌಟುಗಳು ಅರ್ಥಮಾಡಿಕೊಳ್ಳಬೇಕು. ಆಗೊಮ್ಮೆ ಈಗೊಮ್ಮೆ ಈ ಅಂಶಗಳನ್ನು ನಾಟಕ ರೂಪದಲ್ಲಿ ಪ್ರಸ್ತುತಪಡಿಸಬಹುದಾದರೆ ಅದನ್ನು ಇನ್ನೂ ಸ್ಪಷ್ಟವಾಗಿ, ಆಳವಾಗಿ ತಿಳಿಯುವಂತೆ ಆಗುತ್ತದೆ. ನಾಟಕದ ರೂಪುರೇಷೆಯನ್ನು ಸ್ಕೌ.ಮಾ.ರು ಕೊಡಬಹುದು ಅಥವಾ ಬಾಲಕರಿಗೇ ಬಿಡಬಹುದು ಪೆಟ್ರೋಲ್ ಚಟುವಟಿಕೆ/ಸ್ಪರ್ಧೆ ರೂಪದಲ್ಲಿ ನಾಟಕಗಳನ್ನು ಪ್ರಸ್ತುತಪಡಿಸಬಹುದು. ಸ್ಕೌಟ್ ನಿಯಮವನ್ನು ಇನ್ನೂ ಹೆಚ್ಚು ಸ್ಫುಟವಾಗಿ, ಅರ್ಥವತ್ತಾಗಿ ತಿಳಿಯಬೇಕಾದರೆ, ದಳದಲ್ಲಿ ಕಥೆ ಹೇಳುವ/ಕೇಳುವ ಕಾರ್ಯಕ್ರಮವನ್ನೇ ನಡೆಸಬಹುರು, ಪೂರಕವಾಗಿ ಶ್ರವಣ, ದೃಶ್ಯ ಮಾಧ್ಯಮಗಳನ್ನೂ ಉಪಯೋಗಿಸಬಹುದು.

ಸ್ಕೌಟ್‌ನ ಆಧ್ಯಾತ್ಮ ಜೀವನದಲ್ಲಿ, ಸ್ಕೌಟ್ ನಿಯಮ ಮತ್ತು ಪ್ರತಿಜ್ಞೆಯ ಪಾತ್ರವು ಮಹತ್ತರವಾದುದು. ಅವನು ನೈತಿಕವಾಗಿ ನಡೆದುಕೊಳ್ಳಲು, ಋಜುತ್ವ ಮಾರ್ಗದಲ್ಲಿ ಮುನ್ನಡೆಯಲು ಸಹಾಯಕವಾಗುತ್ತದೆ. ಆಕಾರಣ ಸ್ಕೌಟ್ ಶಿಕ್ಷಣದಲ್ಲಿ ಈ ಅಂಶಗಳನ್ನು ನೇರವಾದ ನೂಲಿನೆಳೆ (Warp)ಗಳೆಂತಲೂ, ಚಟುವಟಿಕೆಗಳನ್ನು ಅಡ್ಡನೂಲಿನೆಳೆ (Weft)ಗಳೆಂತಲೂ ಹೇಳಬಹುದು. ಉತ್ತಮ ಸ್ಕೌಟ್ ಆಗಲು ಬೇಕಾದ ಸದಾಚಾರ ಸಂಪನ್ನತೆಯ ಲಕ್ಷಣಗಳನ್ನೂ ಈ ಮೂಲತತ್ವದಲ್ಲಿ ನೆಯ್ಯಲಾಗಿದೆ. ಸ್ಕೌಟ್‌ನ ಉತ್ತಮ ವ್ಯಕ್ತಿತ್ವವೆಂಬ ವಸ್ತ್ರದ ಸದ್ವಿಕಾಸವು ಇದರ ಅಂತಿಮ ಗುರಿಯಾಗಿದೆ.



ಅಧ್ಯಾಯ–20

# ಸ್ಕೌಟ್ ಗುರುತು, ವಂದನೆ ಮತ್ತು ಧ್ಯೇಯ

ಸ್ಕೌಟ್ ದಳದ ಸದಸ್ಯನೆಂದ ಮೇಲೆ, ಸ್ಕೌಟು ಹಲವಾರು ವಿಷಯಗಳ ಬಗ್ಗೆ ತಿಳಿದಿರಲೇ ಬೇಕು. ಉದಾ॥ ಸ್ಕೌಟ್ ಗುರುತು, ಸ್ಕೌಟ್ ವಂದನೆ, ಸ್ಕೌಟ್ ಹಸ್ತಲಾಘವ, ಸ್ಕೌಟ್ ಪದಕ ಮತ್ತು ಸ್ಕೌಟ್ ಧ್ಯೇಯ.

**ಸ್ಕೌಟ್ ಗುರುತು:** ಅಂಗೈಯನ್ನು ನೇರವಾಗಿ ಮೇಲಕ್ಕೆ ತೋರುತ್ತಿರುವಂತೆ ಹಿಡಿಯಬೇಕು. ಕಿರುಬೆರಳಿನ ಉಗುರು ಭಾಗವನ್ನು ಹೆಬ್ಬೆರಳ ತುದಿಯಿಂದ ಒತ್ತಿಹಿಡಿಯಬೇಕು. ಉಳಿದ ಮೂರು ಬೆರಳುಗಳನ್ನು, ಒಟ್ಟಾಗಿ ಮೇಲಕ್ಕೆ ತೋರುತ್ತಿರುವಂತೆ, ನೇರವಾಗಿ ಹಿಡಿಯುಬೇಕು. ಈ ಗುರುತನ್ನು ಸಾಮಾನ್ಯವಾಗಿ ಬಲಗೈನಿಂದ ಮಾಡಲಾಗುತ್ತದೆ. ಬಲತೋಳು ಭೂಮಿಗೆ ಸಮಾನಾಂತರವಾಗಿ, ಮೊಣಕೈನಿಂದ $90^0$ಯಲ್ಲಿ ಮುಂದೋಳು ಮತ್ತು ಹಸ್ತ ನೇರವಾಗಿರುತ್ತದೆ.



ಸ್ಕೌಟ್‌ನ ಈ ಗುರುತು ಪ್ರತಿಜ್ಞೆಯ ಸೂಚಕವಾಗಿದೆ. ಪ್ರತಿ ಬಾರಿ ವಂದನೆ ಮಾಡಿದಾಗಲೂ ಅವನು ಮಾಡಿದ ಪ್ರತಿಜ್ಞೆಯನ್ನೂ, ಅದರ ಮೂರು ಭಾಗಗಳನ್ನೂ ನೆನಪು ಮಾಡುತ್ತದೆ.

ದೀಕ್ಷಾ ಸಮಾರಂಭದ ವೇಳೆ ಸ್ಕೌಟ್ ಗುರುತನ್ನು ಮಾಡಲಾಗುತ್ತದೆ.

**ಸ್ಕೌಟ್ ವಂದನೆ:** ಸ್ಕೌಟು ವಂದನೆ ಮಾಡಲು ಬಲತೋಳನ್ನು ಭೂಮಿಗೆ ಸಮಾನಾಂತರವಾಗಿ ಬರುವಂತೆ ಚಕ್ಕನೆ ಮೇಲೆತ್ತುವುದು. ಸ್ಕೌಟ್ ಗುರುತು ಮಾಡಿ, ಕೈಯನ್ನು ಹಣೆಯ ಕಡೆಗೆ ಮೊಣಕೈನಿಂದ $45^0$ ಬಾಗಿಸಬೇಕು. ತೋರ್ಬೆರಳು ನಡುಬೆರಳು, ಬಲಗಣ್ಣಿನ ಹೊರತುದಿಯ ಬಳಿ ಹಣೆ ಮುಟ್ಟುವಂತೆ ಹಿಡಿಯುವುದು. ಈ ಸ್ಥಿತಿಯಲ್ಲಿ ಮಾನಸಿಕವಾಗಿ ಮೂರರವರೆಗೆ ಎಣಿಸುವಷ್ಟು ವೇಳೆ ಮಾತ್ರ ಇರುವುದು. ಆ ಕೂಡಲೇ ಕೈಯನ್ನು ನೇರವಾಗಿ, ವೇಗವಾಗಿ, ಚಕ್ಕನೆ, ಸಾವಧಾನ್ ಸ್ಥಿತಿಯಲ್ಲಿರುವಂತೆ ಕೆಳಗಿಳಿಸಬೇಕು.



ವಂದನೆಯನ್ನು ಮಾಡುವಾಗಲೆಲ್ಲಾ ಬಲಗೈನಲ್ಲಿ ಮಾಡಬೇಕು. ದಂಡವನ್ನು ಹಿಡಿದಿರುವಾಗ ಚಿತ್ರದಲ್ಲಿ ತೋರಿಸುವಂತೆ, ಎಡಗೈನಲ್ಲಿ ವಂದಿಸಬಹುದು.

---

ಪಥಸಂಚಲನೆಯಲ್ಲಿರಲಿ, ಸಾವಧಾನ್‌ನಲ್ಲಿರಲಿ, ಎಡಗೈನ ಸ್ಕೌಟ್ ಗುರುತು, ದಂಡವನ್ನು ಮುಟ್ಟುತ್ತದೆ. ಅಂಗೈ ಕೆಳಮುಖವಾಗಿರುತ್ತದೆ.

ವಂದನೆ ಮಾಡುವುದು, ಇತರರನ್ನು ಕುಶಲ ಪ್ರಶ್ನೆ ಕೇಳಿದಂತೆ. ವಂದನೆ ಮಾಡುವುದು ಒಂದು ಸುಯೋಗವೆನ್ನಬೇಕು.

**ಸ್ಕೌಟ್ ವಂದನೆಯ ಅರ್ಥ:** ಆ ರೀತಿ ವಂದನೆ ಮಾಡುವ ಎಲ್ಲರೂ, ವಿಶ್ವವ್ಯಾಪಿ ಸ್ಕೌಟ್ ಸೋದರತೆಗೆ ಸೇರಿದವರೆಂದು ಹೇಳುತ್ತದೆ. ಹಾಗಾಗಿ ಸ್ಕೌಟ್ ವಂದನೆ ಮಾಡುವುದೊಂದು ಸುಯೋಗ ಹಾಗೂ ಹೆಮ್ಮೆಪಡುವ ವಿಷಯ. ಯಾರು ಮೊದಲು ನೋಡಿದರೆ ಅವರು ವಂದಿಸಬೇಕು. ಎದುರು ಕಡೆಯವರು ಕೂಡಲೇ ಅದನ್ನು ಸ್ವೀಕರಿಸಿ ಮರು ವಂದಿಸಬೇಕು. ವಂದಿಸುವುದರಲ್ಲಿ ಮೇಲುಕೀಳೆಂಬ ಬೇಧಭಾವವಿರುವುದಿಲ್ಲ.



**ಸ್ಕೌಟ್ ಹಸ್ತಲಾಘವ:** ಸ್ಕೌಟುಗಳು ಎಡಗೈನಿಂದ ಹಸ್ತಲಾಘವ ನೀಡುತ್ತಾರೆ. ನಿರಾಯುಧರಾಗಿದ್ದು, ಮೈತ್ರೀ ಭಾವನೆಯನ್ನು ತೋರುವುದು ಈ ಹಸ್ತಲಾಘವದ ಸಂಕೇತ.

**ಸ್ಕೌಟ್ ಪದಕ:** ಸ್ಕೌಟ್ ಪದಕದಲ್ಲಿ ಸ್ಕೌಟುಗಳ ತ್ರಿದಳ ಕಮಲವೂ, ಗೈಡುಗಳ ತ್ರಿಭುಜ ಪತ್ರವೂ (ಎಲೆ) ಇದ್ದು, ಇವುಗಳ ಮಧ್ಯೆ ಭಾರತವನ್ನು ಬಿಂಬಿಸುವ ಅಶೋಕ ಚಕ್ರವನ್ನು ಅಳವಡಿಸಲಾಗಿದೆ. ಇದರ ಉದ್ದ:ಅಗಲ=3:2

ಸ್ಕೌಟ್ ಪದಕವು, ಹಸಿರು ಒಡಲಿನ ಬಟ್ಟೆಯ ಮೇಲೆ, ಹಳದಿಯ ಬಣ್ಣದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಲಾಂಛನವನ್ನು ಹೊಂದಿರುತ್ತದೆ. ಸ್ಕೌಟ್ ಷರ್ಟಿನ ಎಡ ಜೇಬಿನ ಮಧ್ಯದಲ್ಲಿ ಇದನ್ನು ಧರಿಸಲಾಗುತ್ತದೆ.

ಒಂದಲ್ಲ ಒಂದು ರೀತಿಯಲ್ಲಿ ತ್ರಿದಳ ಕಮಲವು ವಿಶ್ವದ ಎಲ್ಲಾ ದೇಶಗಳಲ್ಲಿಯೂ, ಸ್ಕೌಟುಗಳ ಪದಕವಾಗಿದೆ. ಹಾಗೆಯೇ ತ್ರಿಭುಜ ಪತ್ರವು (ಮೇಪಲ್ ಮರದ ಎಲೆ) ಗೈಡುಗಳ ಪದಕವಾಗಿದೆ.



ಲಾಂಛನದ ಮೂರು ದಳಗಳು (ಭುಜಗಳು) ಅವರು ಮಾಡುವ ಪ್ರತಿಜ್ಞೆಯ ಮೂರು ಭಾಗಗಳನ್ನು, ಸ್ಕೌಟ್ ಮತ್ತು ಗೈಡ್‌ಗಳಿಗೆ ಸದಾ ನೆನಪಿಗೆ ತರುತ್ತದೆ.

**ಸ್ಕೌಟ್ ಧ್ಯೇಯ:** ಸ್ಕೌಟುಗಳ ಧ್ಯೇಯವು "ಸದಾಸಿದ್ಧನಾಗಿರು" ಎಂದು, ಎಲ್ಲಾ ರೀತಿಯ ತುರ್ತು ಸಂದರ್ಭಗಳಲ್ಲಿಯೂ, ಸ್ಕೌಟುಗಳು ಮಾನಸಿಕವಾಗಿಯೂ, ದೈಹಿಕವಾಗಿಯೂ, ಸೇವೆ ಸಲ್ಲಿಸಲು ತಯಾರಿರಬೇಕೆಂದು ಇದರ ಅರ್ಥ. ಈ ಧ್ಯೇಯವು ಇನ್ನೂ ಒಂದು ಮಾತನ್ನು ಹೇಳುತ್ತದೆ. ಸಂದರ್ಭಾನುಸಾರವಾಗಿ, ಯಾವುದೇ ರೀತಿಯ ಸೇವೆ ಸಲ್ಲಿಸಬೇಕಾದರೂ, ಅವಶ್ಯಕವೆನಿಸುವ ತಿಳುವಳಿಕೆಯನ್ನೂ, ಕೌಶಲಗಳನ್ನೂ, ಸೂಕ್ತ ರೀತಿಯಲ್ಲಿ ಕಲಿತು, ತಯಾರಿರಬೇಕೆಂದು ತಿಳಿಸುತ್ತದೆ. ಸೇವೆ ಮಾಡುವ ಅವಕಾಶವೊದಗಿದ ಕೂಡಲೇ, ಏನು ಮಾಡಬೇಕು? ಯಾವ ರೀತಿ ಮುಂದುವರಿಯಬೇಕು? ಎಂದೆಲ್ಲಾ ಕೂಡಲೇ ಯೋಚಿಸಿ, ಪೂರ್ವಯೋಜನೆ ಹಾಕಿಕೊಂಡು, ಸಂಸಿದ್ಧರಾಗಬೇಕು ಮತ್ತು ಕಾರ್ಯರಂಗಕ್ಕಿಳಿಯಬೇಕು. ಇದನ್ನೇ ಮಾನಸಿಕ ಹಾಗೂ ದೈಹಿಕ ತಯಾರಿ ಎನ್ನುವುದು. ಈ ರೀತಿಯ ತಯಾರಿಯು, ತುರ್ತು ಸಮಯದಲ್ಲಿ, ಕಾರ್ಯವನ್ನು ಹಗುರಗೊಳಿಸುತ್ತದೆ.



## ಅಧ್ಯಾಯ–21

# ದೀಕ್ಷೆ ವಹಿಸುವುದು / ದೀಕ್ಷಾ ಸಮಾರಂಭ

ಬಾಲಕನು ಸ್ಕೌಟ್ ಆಗಬೇಕಾದರೆ, ದೀಕ್ಷಾ ಸಮಾರಂಭದಲ್ಲಿ ಅವನಿಗೆ ದೀಕ್ಷೆ ವಹಿಸಬೇಕು. ದಳದ ಎಲ್ಲಾ ಸ್ಕೌಟುಗಳು ಮತ್ತು ಸ್ಕೌ.ಮಾ.ರ ಸಮ್ಮುಖದಲ್ಲಿ ಬಾಲಕನು ಸ್ಕೌಟುಗಳ ಪ್ರತಿಜ್ಞೆಮಾಡಿ ಅವರುಗಳಲ್ಲೊಬ್ಬನಾಗುತ್ತಾನೆ.

ದೀಕ್ಷಾ ಸಮಾರಂಭಕ್ಕೆ ಮುಂಚಿತವಾಗಿ ಬಾಲಕನು ಹಲವಾರು ಷರತ್ತುಗಳನ್ನು ಪೂರೈಸಬೇಕೆಂದು ಎಪಿ.ಆರ್.ಓ. ಹೇಳುತ್ತದೆ–ವಿಧಿಸುತ್ತದೆ. ಅವುಗಳು ಮುಗಿದ ಕೂಡಲೇ, ಸ್ಕೌಟ್ ಮಾಸ್ಟರು ದೀಕ್ಷಾ ಸಮಾರಂಭವನ್ನೇರ್ಪಡಿಸುತ್ತಾರೆ. ಈ ಸಮಾರಂಭವನ್ನು ದಳದ ಸಭೆಯ ಅಂತ್ಯದಲ್ಲಿ ಮಾಡಬಹುದು ಅಥವಾ ಅದನ್ನೇ ಒಂದು ದಿನದ ಕಾರ್ಯಕ್ರಮವನ್ನಾಗಿ ರೂಪಿಸಬಹುದು. ದಳದ ಸಭೆಯ ಅಂತ್ಯದಲ್ಲಾದರೆ ಬಾಲಕರಿಗೆ ಸ್ವಚ್ಛಮಾಡಿಕೊಂಡು ತಯಾರಾಗಲು ಸ್ವಲ್ಪ ಕಾಲಾವಕಾಶ ಕೊಡಬೇಕು.

ಸಮಾರಂಭವು ಸರಳವಾಗಿರಬೇಕು. ಗಂಭೀರವಾಗಿರಬೇಕು. ವಿಧಿವಿಹಿತ ವಾಗಿರಬೇಕು. ಎಲ್ಲಾ ಸ್ಕೌಟುಗಳೂ, ಸ್ಕೌಟರುಗಳೂ, ಸಮವಸ್ತ್ರ ಧರಿಸಿರಬೇಕು. ಬಾಲಕನು ಬಯಸುವುದಾದರೆ ಅವನ ತಾಯ್ತಂದೆಯರನ್ನು/ಪೋಷಕರನ್ನು ಆಹ್ವಾನಿಸಬಹುದು. ಇತರ ತಾಯ್ತಂದೆಯರನ್ನು, ಸಾರ್ವಜನಿಕರನ್ನು ಕರೆಯಬಾರದು. ಅದು ಗುಂಪು (ಮಂಡಲ) ಆಗಿದ್ದರೆ, ಗ್ರೂಪ್ ಲೀಡರ್ ಹಾಜರಿರಬೇಕು. ಅಷ್ಟೇ ಅಲ್ಲದೆ ಸಕ್ರಿಯವಾಗಿ ಭಾಗವಹಿಸಬೇಕು. ಎಲ್ಲಾ ಸಹಾಯಕ ಸ್ಕೌಟ್ ಮಾಸ್ಟರುಗಳಿಗೂ ಅವರವರ ಪಾತ್ರವಿರಬೇಕು. ತಾವೇ ಸಮಾರಂಭವನ್ನು ನಡೆಸುವ ಹಕ್ಕು ಬಾಧ್ಯತೆಗಳು ಸ್ಕೌಟ್ ಮಾಸ್ಟರಿಗೆ ಸೇರಿದ್ದು. ಬಾಲಕನು ಪ್ರತಿಜ್ಞೆ ಮಾಡಬೇಕಾದದ್ದು ಸ್ಕೌಟ್ ಮಾಸ್ಟರ ಸಮ್ಮುಖದಲ್ಲಿ. ವಚನ ನೀಡಬೇಕಾದದ್ದೂ ಸ್ಕೌಟ್ ಮಾಸ್ಟರಿಗೇನೆ. ಯಾವುದೇ ಕಾರಣದಿಂದಲೂ ಸ್ಕೌಟ್ ಮಾಸ್ಟರು ತಮ್ಮ ಈ ಹಕ್ಕು ಬಾಧ್ಯತೆಯನ್ನು ಮರೆಯಬಾರದು. ಜಿಲ್ಲಾ ಆಯುಕ್ತರು, ಶಾಲಾ ಹೆ.ಮಾ.ರು. ಇತ್ಯಾದಿ., ಯಾರೇ, ಎಷ್ಟೇ ಉನ್ನತ ಪದವಿಯವರಾಗಲೀ, ತಮ್ಮ ಈ ಹಕ್ಕು ಬಾಧ್ಯತೆಯನ್ನು ಅವರಿಗೆ

ವಹಿಸಿಕೊಡುವ ಯೋಚನೆ ಮಾಡಬಾರದು. ಒಮ್ಮೆ ಒಬ್ಬರಿಗೆ ಮಾತ್ರ ದೀಕ್ಷೆ ನೀಡಬೇಕು. ಹೆಚ್ಚೆಂದರೆ ಇಬ್ಬರೋ-ಮೂವರೋ ಅಷ್ಟೆ. ಅದಕ್ಕೆ ಮೀರಿದ ಸಂಖ್ಯೆಯ ದೊಂಬಿ ಮಾಡಬಾರದು. ಸಮಾರಂಭವು ಕ್ಲುಪ್ತವಾಗಿರಬೇಕು. ದೀಕ್ಷಿತನಾಗುವ ಸಡಗರದಲ್ಲಿ, ಬಾಲಕನಿಗೆ ತಬ್ಬಿಬ್ಬಾಗಿ, ಸರಿಯಾಗಿ ಪ್ರತಿಜ್ಞೆ ಮಾಡಲು ಕಷ್ಟವಾಗಬಹುದು. ಸ್ಕೌಟ್ ಮಾಸ್ಟರು ಮಧ್ಯೆ ಮಧ್ಯೆ ಅವನ ಸಹಾಯಕ್ಕೆ ಬರಲು ತಯಾರಿರಬೇಕು ಅಥವಾ ಬೋಧಿಸಬೇಕು.




● ಸ್ಕೌ.ಮಾ.; × ಸ.ಸ್ಕೌ.ಮಾ.; □ ಗ್ರೂ.ಲೀ.

**ಸಮಾರಂಭದ ವಿವರ:** ಸಮಾರಂಭಕ್ಕೆ ದಳವು ಕುದುರೆಲಾಳದ ಆಕಾರದಲ್ಲಿ ನಿಲ್ಲುತ್ತದೆ. ಪೆಟ್ರೋಲ್ ಲೀಡರುಗಳು ಅವರವರ ಪೆಟ್ರೋಲ್‌ಗಳ ಬಲಗಡೆಗೂ, ದ್ವಿತೀಯಕರು ಎಡಭಾಗದ ಕೊನೆಯಲ್ಲೂ ಇರುತ್ತಾರೆ. ಇತರ ಸ್ಕೌಟುಗಳು ಅವರಿಬ್ಬರ ಮಧ್ಯೆ ಪೆಟ್ರೋಲ್ ಲೀಡರನ ಎಡಗಡೆಯಿಂದ ಸಕ್ರಮವಾಗಿ ನಿಲ್ಲುತ್ತಾರೆ. ದೀಕ್ಷೆವಹಿಸಲಿರುವ ಸ್ಕೌಟು ದ್ವಿತೀಯಕನ ಬಲಭಾಗದಲ್ಲಿರುತ್ತಾನೆ.

ಕುದುರೆ ಲಾಳದ ಬುಡ ಮುಖದಲ್ಲಿ ಅಥವಾ ಅನುಕೂಲಕರವಾದ ಸ್ಥಳದಲ್ಲಿ ಒಂದು ಹೊಸ ಕಂಠವಸ್ತ್ರ, ಸ್ಕೌಟ್ ಪದಕ, ಭುಜಪಟ್ಟಿಗಳು ಮತ್ತು ಬೆರ್ರೆ ಟೋಪಿಯನ್ನು ಮೇಜಿನ ಮೇಲಿಟ್ಟಿರಬೇಕು. ಸಮಾರಂಭದ ವೇಳೆ ಅದು ಸುಲಭವಾಗಿ ಸಿಗುವಂತಿರಬೇಕು. ದಳದ ಧ್ವಜವನ್ನೂ ತಯಾರಾಗಿಟ್ಟಿರಬೇಕು.

ಸಮಾರಂಭದ ಪ್ರಾರಂಭದಲ್ಲಿ, ಸ್ಕೌ.ಮಾ.ರು ಪೆ.ಲೀ.ನನ್ನುದ್ದೇಶಿಸಿ, ದೀಕ್ಷೆ ವಹಿಸಲಿರುವ ಉಮೇದುವಾರನನ್ನು ಕರೆತರಲು ಹೇಳುತ್ತಾರೆ. ಪೆ.ಲೀ.ನು ಹಾಗೆಯೇ ಮಾಡುತ್ತಾನೆ. ಉಮೇದುವಾರನ್ನು ಕರೆತಂದು, ಸ್ಕೌ.ಮಾ.ರ. ಎದುರಿಗೆ ನಿಲ್ಲಿಸಿ, ಪೆ.ಲೀ.ನು ಹಿಂದೆ ಸರಿಯುತ್ತಾನೆ. ದೀಕ್ಷಾ ಸಮಾರಂಭವು ಈಗ ಪ್ರಾರಂಭ ಆಗುತ್ತದೆ. ಅದನ್ನು ಸ್ಕೌ.ಮಾ.ರು ಮತ್ತು ಉಮೇದುವಾರ ಇವರಿಬ್ಬರ ನಡುವಣ ಆಂತರಿಕ ಹಾಗೂ ಶ್ರದ್ಧಾಪೂರ್ವಕ ಸಂಭಾಷಣೆಯೆಂದೇ ಹೇಳಬೇಕು.

–। ಸ್ಕೌ.ಮಾ.: ನಿನಗೆ 'ಗೌರವ' ಎಂದರೇನು ತಿಳಿದಿದೆಯೇ?

–। ಉ: ಹೌದು, ತಿಳಿದಿದೆ

–। ಸ್ಕೌ.ಮಾ.: "ನೀನು, ನಿನ್ನ ಗೌರವ ಸಾಕ್ಷಿಯಾಗಿ, ನಿನ್ನ ಕೈಲಾದ ಮಟ್ಟಿಗೆ ದೇವರಿಗೂ ನಮ್ಮ ದೇಶಕ್ಕೂ, ನಿನ್ನ ಕರ್ತವ್ಯವನ್ನು ಪಾಲಿಸುವೆ ಎಂದೂ, ಇತರರಿಗೆ ಸಹಾಯ ಮಾಡುವೆ ಎಂದೂ, ಸ್ಕೌಟ್ ನಿಯಮವನ್ನು ಪಾಲಿಸುವೆಯೆಂದೂ ನಾನು ನಿನ್ನನ್ನು ನಂಬಬಹುದೇ?" ಎಂದು ಕೇಳುತ್ತಾರೆ.

–। ಉ: ನಂಬಬಹುದು

ಈಗ ದಳನಾಯಕ / ಸಹಾಯಕ ಸ್ಕೌಟ್ ಮಾಸ್ಟರು, ಸ್ಕೌಟ್ ಮಾಸ್ಟರರಿಗೂ ಮತ್ತು ಉಮೇದುವಾರನಿಗೂ ನಡುವೆ ದಳದ ಧ್ವಜವನ್ನು, ಭೂಮಿಗೆ ಸಮಾನಾಂತರವಾಗಿ, ನೆಲಕ್ಕೆ ತಗುಲದಂತೆ ಹಿಡಿಯುತ್ತಾರೆ.

–। ಸ್ಕೌ.ಮಾ.: ದಳವನ್ನುದ್ದೇಶಿಸಿ ಸಾವಧಾನ್ ಹೇಳುತ್ತಾರೆ ಮತ್ತು ಸ್ಕೌಟ್ ಗುರುತನ್ನು ಮಾಡಲು ಆದೇಶಿಸುತ್ತಾರೆ. ದೀಕ್ಷಾಬದ್ಧರಾದ ಎಲ್ಲಾ ಸ್ಕೌಟ್‌ಗಳೂ, ಉಮೇದುವಾರನೂ ಹಾಗೆಯೇ ಮಾಡುತ್ತಾರೆ. (ಗ್ರೂಪ್ ಲೀಡರೂ, ಸ.ಸ್ಕೌ.ಮಾ.ರೂ ಹಾಗೆಯೇ ಮಾಡುತ್ತಾರೆ.)

–। ಸ್ಕೌ.ಮಾ.: ನಿನ್ನ ಎಡಗೈನಿಂದ ಸ್ಕೌಟ್ ಧ್ವಜವನ್ನು ಹಿಡಿ ಎಂದು ಉಮೇಧುವಾರನಿಗೆ ಆದೇಶಿಸುತ್ತಾರೆ. ಈಗ ಸ್ಕೌಟ್ ಮಾಸ್ಟರರೂ, ಉಮೇದುವಾರನೂ, ತಮ್ಮ ಎಡಗೈಗಳಿಂದ ಧ್ವಜವನ್ನು ಹಿಡಿಯುತ್ತಾರೆ.

–। ಸ್ಕೌ.ಮಾ.: ನಾನು ಹೇಳಿಕೊಟ್ಟಂತೆ ಸ್ಕೌಟ್ ಪ್ರತಿಜ್ಞೆಯನ್ನು ಪುನರುಚ್ಚರಿಸು (Repeat after me) ಎಂದು ಹೇಳಿ, ಉಮೇದುವಾರನಿಗೆ ಅನುಕೂಲವಾಗುವಂತೆ ಹೇಳಿಕೊಡುತ್ತಾರೆ.

"ನಾನು, ನನ್ನ ಗೌರವ ಸಾಕ್ಷಿಯಾಗಿ,
ನನ್ನ ಕೈಲಾದ ಮಟ್ಟಿಗೆ

ದೇವರಿಗೂ, ನನ್ನ ದೇಶಕ್ಕೂ, ನನ್ನ ಕರ್ತವ್ಯವನ್ನು
ಪಾಲಿಸುತ್ತೇನೆ ಎಂದೂ,
ಇತರರಿಗೆ ಸಹಾಯ ಮಾಡುತ್ತೇನೆ ಎಂದೂ,
ಸ್ಕೌಟ್ ನಿಯಮವನ್ನು ಪಾಲಿಸುತ್ತೇನೆ ಎಂದೂ
ನಾನು ನನ್ನ ಗೌರವ ಸಾಕ್ಷಿಯಾಗಿ ಪ್ರತಿಜ್ಞೆಯನ್ನು ಮಾಡುತ್ತೇನೆ.

ಪ್ರತಿಜ್ಞೆಯು ಮುಗಿದ ಬಳಿಕ ಸ್ಕೌಟ್ ಮಾಸ್ಟರರೂ, ಉಮೇದುವಾರನೂ, ಧ್ವಜದಿಂದ ಕೈಗಳನ್ನು ಹಿಂತೆಗೆಯುತ್ತಾರೆ. ದಳನಾಯಕ/ಸಹಾಯಕ ಸ್ಕೌಟ್ ಮಾಸ್ಟರರು ಧ್ವಜವನ್ನು ನೇರವಾಗಿ ಮೇಲೆತ್ತಿ ಹಿಡಿಯುತ್ತಾರೆ. ಸ್ಕೌಟ್ ಮಾಸ್ಟರೊಡನೆ, ಎಲ್ಲರೂ ಸ್ಕೌಟ್ ಗುರುತನ್ನು ಬಿಟ್ಟು ಸಾವಧಾನ್ ಸ್ಥಿತಿಗೆ ಬರುತ್ತಾರೆ.

**–। ಸ್ಕೌ.ಮಾ.:** ಹೊಸ ಸ್ಕೌಟ್‌ಗೆ ಎಡಗೈ ಹಸ್ತಲಾಘವ ನೀಡುತ್ತಾರೆ ಮತ್ತು ನೀನು ಗೌರವ ಸಾಕ್ಷಿಯಾಗಿ ಪ್ರತಿಜ್ಞೆಯನ್ನು ಪಾಲಿಸುವೆಯೆಂದು ನಂಬುತ್ತೇನೆ. "ನೀನೀಗ ಸ್ಕೌಟುಗಳ ವಿಶ್ವವ್ಯಾಪಿ ಸೋದರತೆಯಲ್ಲಿ ಒಬ್ಬ ಸ್ಕೌಟ್ ಆಗಿದ್ದೀಯೆ" ಎಂದು ಹೇಳುತ್ತಾರೆ.

**ಸೂಚನೆ :** ಬಾಲಕನು ಈ ಹಿಂದೆ ದೀಕ್ಷೆ ಪಡೆದವನಾಗಿದ್ದರೆ ನೀನೀಗ ಸ್ಕೌಟುಗಳ ವಿಶ್ವವ್ಯಾಪೀ ಸ್ಕೌಟ್ ಸೋದರತೆಯಲ್ಲಿ ಒಬ್ಬ ಸ್ಕೌಟ್ ಆಗಿ ಮತ್ತೆ ದೀಕ್ಷೆ ಪಡೆದಿದ್ದೀಯೇ" ಎಂದು ಹೇಳುತ್ತಾರೆ.

**–। ಸ್ಕೌ.ಮಾ.:** ದಳವನ್ನು "ವಿಶ್ರಾಮ್" ಸ್ಥಿತಿಗೆ ಆದೇಶಿಸುತ್ತಾರೆ.

ಸ್ಕೌಟ್ ಮಾಸ್ಟರರು ಈಗ ಅವನಿಗೆ ಪ್ರವೇಶ ಪದಕ (ಸ್ಕೌಟ್ ಪದಕ)ವನ್ನೂ "ಲೋಹ ಪದಕ"ವನ್ನೂ ಕೊಟ್ಟು ಅವುಗಳ ಅರ್ಥವನ್ನು ವಿವರಿಸುತ್ತಾರೆ. ಸ್ಕೌಟ್ ಅವನ್ನು ಜೇಬಿಗಿಳಿಸುತ್ತಾನೆ. ಗ್ರೂಪ್ ಲೀಡರ್ ಇದ್ದರೆ (ಇಲ್ಲದಿದ್ದರೆ ಸ್ಕೌಟ್ ಮಾಸ್ಟರರೇ) ದಳದ ಕಂಠವಸ್ತ್ರವನ್ನು ಹೊದಿಸಿ ವೋಗಲ್ ತೊಡಿಸುತ್ತಾರೆ. ಸಹಾಯಕ ಸ್ಕೌಟ್ ಮಾಸ್ಟರು ಬೆರ್ರೆ ಟೋಪಿಯನ್ನು ತೊಡಿಸುತ್ತಾರೆ. ಪೆ.ಲೀ.ರು ಭುಜಪಟ್ಟಿಗಳನ್ನು ಪಿನ್ ಮಾಡುತ್ತಾನೆ. ಈ ರೀತಿ ಮಾಡುವುದರ ಮಾಲಕ, ದಳದ ಸ್ಕೌಟರುಗಳೂ, ಪೆಟ್ರೋಲ್ ಲೀಡರರು ಅವನನ್ನು ದಳಕ್ಕೆ ಸ್ವಾಗತಿಸಿದಂತಾಯಿತು. ಇದೆಲ್ಲವೂ ಮುಗಿದ ಬಳಿಕ ಸ್ಕೌಟ್ ಮಾಸ್ಟರರು, ಹೊಸ ಸ್ಕೌಟನ್ನುದ್ದೇಶಿಸಿ, "ಪೀಛೇ ಮೂಢ್" ಹೇಳುತ್ತಾರೆ.

ಹೊಸ ಸ್ಕೌಟು ಹಿಂದಕ್ಕೆ ತಿರುಗಿ, ದಳಕ್ಕೆ ಮುಖ ಮಾಡಿ ನಿಲ್ಲುತ್ತಾನೆ. ಸ್ಕೌಟ್ ಮಾಸ್ಟರರು. ಅವನನ್ನು ಕುರಿತು, ದಳಕ್ಕೆ ವಂದಿಸಲು ಹೇಳುತ್ತಾರೆ. ಅವನು ವಂದಿಸುತ್ತಾನೆ. ದಳವು ಅವನ ವಂದನೆಯನ್ನು ಹಿಂದಿರುಗಿಸುತ್ತದೆ. ಇದರಿಂದ ದಳವು ಅವನನ್ನು ಸ್ವಾಗತಿಸಿದಂತಾಯಿತು.

ಈಗ ಸ್ಕೌಟ್ ಮಾಸ್ಟರರು ಹೊಸ ಸ್ಕೌಟನ್ನು ಹೆಸರಿಸಿ, ಅವನ ಪೆಟ್ರೋಲ್‌ನ್ನು ಸೇರಿಕೊಳ್ಳಲು ತಿಳಿಸಿ, "ತೇಜ್‌ಚಲ್" ಹೇಳುತ್ತಾರೆ. ಪೆಟ್ರೋಲ್ ಲೀಡರು ಅವನನ್ನು ಕರೆದೊಯ್ದು, ಪೆಟ್ರೋಲ್‌ನಲ್ಲಿ ಅವನ ಸ್ಥಳಕ್ಕೆ ಸೇರಿಸುತ್ತಾನೆ.

ಇಲ್ಲಿಗೆ ದೀಕ್ಷಾ ಸಮಾರಂಭವು ಮುಗಿಯಿತು. ದಳವು ವಿಸರ್ಜನೆಗೊಂಡು, ಸಾಧಾರಣ ವಾತಾವರಣಕ್ಕೆ ಬರುತ್ತದೆ. ದಳದ ಸ್ಕೌಟುಗಳು, ಅವನನ್ನು ಒಬ್ಬೊಬ್ಬರಾಗಿ ಅಭಿನಂದಿಸಿ, ಸ್ವಾಗತ ಬಯಸುತ್ತಾರೆ.

ಇದೆಲ್ಲವೂ ಆದ ಬಳಿಕ, ಬೇಕಾದರೆ, ಒಂದು ಸಣ್ಣ ಟೀಪಾರ್ಟಿ ಇಡಬಹುದು.

ಸಮಾರಂಭಕ್ಕೆ ಬರುವ ಮುನ್ನ, ಉಮೇದುವಾರನು ಕಂಠವಸ್ತ್ರ, ಟೋಪಿ ಮತ್ತು ಪದಕವನ್ನು ಬಿಟ್ಟು, ಉಳಿದ ಸಮವಸ್ತ್ರವನ್ನು, ಮೊದಲ ಬಾರಿಗೆ ಧರಿಸಿ, ಹಾಜರಾಗುತ್ತಾನೆ. ದೀಕ್ಷೆವಹಿಸಿಕೊಂಡ ಬಳಿಕ, ಪದಕ ಇತ್ಯಾದಿ ಧರಿಸಿ ಹಾಜರಾಗುತ್ತಾನೆ. ಇಲ್ಲಿಂದ ಮುಂದೆ ಅವನು ಸ್ಕೌಟ್ ಸಮವಸ್ತ್ರಧಾರಿಯಾಗಿ, ಸ್ಕೌಟ್ ಎಂದು ಕರೆದುಕೊಳ್ಳಲು ಅರ್ಹನಾಗುತ್ತಾನೆ.



## ಅಧ್ಯಾಯ–22

# ಚೂಟಿತನ ಮತ್ತು ಸುವ್ಯವಸ್ಥೆ

## Smartness and Good Order

ಸ್ಕೌಟುಗಳು ಸಮವಸ್ತ್ರಧಾರಿಗಳ ವಿಶ್ವ ವ್ಯಾಪಿ ಸಂಸ್ಥೆಗೆ ಸೇರಿದವರು. ಅವರು ನಿಗದಿತವಾದ ಸಮವಸ್ತ್ರವನ್ನು ಧರಿಸಬೇಕು. ಸಮವಸ್ತ್ರ ಧರಿಸಿದರೆ ಮಾತ್ರ ಸಾಲದು, ಅದರಲ್ಲಿ ಹೇಳುವ ನೀತಿ ನಿಯಮಗಳನ್ನು ಪಾಲಿಸಬೇಕು.

ಸ್ಕೌಟಿಂಗ್ ಬಗ್ಗೆ ಸಾರ್ವಜನಿಕ ಅಭಿಪ್ರಾಯವು ಬಹು ಮುಖ್ಯವಾದುದು. ಸ್ಕೌಟುಗಳು ಸಮವಸ್ತ್ರವನ್ನು ಸರಿಯಾದ ಕ್ರಮದಲ್ಲಿ ಧರಿಸಬೇಕು. ಸಮವಸ್ತ್ರವು ಅಂದವಾಗಿರಬೇಕು, ಟೀಕಾಗಿರಬೇಕು. ಸಾರ್ವಜನಿಕ ಸ್ಥಳಗಳಲ್ಲಿ ಅವನ ನಡೆವಳಿಕೆಯು ಶಿಸ್ತಿನಿಂದ ಕೂಡಿರಬೇಕು. ಭೇಷ್ ಎನ್ನುವಂತಿರಬೇಕು. ಇದರಿಂದ ಸಂಸ್ಥೆಗೆ ಒಳ್ಳೆಯ ಹೆಸರು ಬರುತ್ತದೆ.

ಸ್ಕೌಟ್‌ನ ಸಮವಸ್ತ್ರದಲ್ಲಿ ಷರ್ಟು, ಷಾರ್ಟ್ಸ್/ ಟ್ರೌಜರ್ಸ್, ಬೆಲ್ಟು, ಕಡುನೀಲಿ ಬೆರ್ರೆ ಟೋಪಿ, ಷೂಸ್, ಮತ್ತು ಸಾಕ್ಸ್, ಸ್ಟಾಕಿಂಗ್ಸ್ ಹಾಗೂ ಸ್ಕಾರ್ಫ್ ಮತ್ತು ಭುಜಪಟ್ಟಿ ಇರುತ್ತದೆ. ಗಂಟುಗಳನ್ನು ಅಭ್ಯಸಿಸುವ ಹಗ್ಗ (3 ಮೀ. ಉದ್ದ) ಮತ್ತು ಸ್ಕೌಟ್ ಚಾಕು ಸಹ ಸಮವಸ್ತ್ರದ ಮೇಲೆ ಒಯ್ಯಬಹುದು. ಕರ್ತವ್ಯನಿರತರಾಗಿರುವಾಗ ಮತ್ತು ಸಾರ್ವಜನಿಕರೊಂದಿಗೆ ಸೇವೆ ಸಲ್ಲಿಸುವಾಗ ಸ್ಕೌಟುಗಳು, ಸಮವಸ್ತ್ರವನ್ನು ಸಕ್ರಮವಾಗಿಯೂ, ಸಂಪೂರ್ಣವಾಗಿಯೂ ಧರಿಸುವಂತೆ ಪ್ರೋತ್ಸಾಹಿಸಬೇಕು. ಸಮವಸ್ತ್ರವು ಅಂದವಾಗಿರಬೇಕು, ಸ್ವಚ್ಛವಾಗಿರಬೇಕು, ಸುಸ್ಥಿತಿಯಲ್ಲಿರಬೇಕು.

ಬೇರೆಲ್ಲಾ ವಿಷಯಗಳಂತೆ, ಸಮವಸ್ತ್ರದ ವಿಷಯದಲ್ಲಿಯೂ, ಸ್ಕೌ.ಮಾ.ರು ಸಮವಸ್ತ್ರವನ್ನು ಧರಿಸುವ ರೀತಿಯು, ಬಾಲಕರಿಗೆ ಅನುಕರಣೀಯವಾಗುತ್ತದೆ. ಆದ್ದರಿಂದ ಸ್ಕೌಟ್ ಮಾಸ್ಟರು ತಮ್ಮ ಸಮವಸ್ತ್ರದ ಬಗ್ಗೆ ಎಚ್ಚರವಹಿಸಬೇಕು. ನಿಯಮ ಪ್ರಕಾರವೇ ಸಮವಸ್ತ್ರವನ್ನು ಧರಿಸಬೇಕು. ಯಾವುದೇ ರೀತಿಯ ಇತರ, ವಿಚಿತ್ರ ರೀತಿಯ ವಸ್ತ್ರಗಳನ್ನು ಧರಿಸಬಾರದು. ನಿಯಮಾನುಸಾರವಾಗಿ, ಕ್ರಮಬದ್ಧವಾಗಿ ಸಮವಸ್ತ್ರವನ್ನು ಧರಿಸುವುದು ಶಿಸ್ತಿನ ವಿಷಯವಾಗಿದೆ.

ಅಚ್ಚುಕಟ್ಟಿಲ್ಲದೆ, ಕೊಳಕಾಗಿದ್ದರೆ ಬಾಲಕರು ಸಹಿಸುವುದಿಲ್ಲ. ಅದು ಬಾಲಕರಿಗೆ ಶೋಭಿಸುವುದಿಲ್ಲ. ಬಾಹ್ಯ ಶಿಸ್ತು, ಅವರ ಅಂತಶ್ಶಿಸ್ತಿಗೆ ಪೂರಕವಾಗಿರಬೇಕು. ಸ್ಕೌಟ್ ಮಾಸ್ಟರ್ ಆದರ್ಶವು ಈ ವಿಷಯದಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ.

ಸಾರ್ವಜನಿಕವಾಗಿ ಅವರು ಕಾರ್ಯನಿರತರಾದಾಗ ಮಾತ್ರ ಕ್ರಮಬದ್ಧವಾಗಿ ಸಮವಸ್ತ್ರಧಾರಿಗಳಾಗಿ ಇರಲೇಬೇಕು. ಜೊತೆಗೆ, ಇತರ ವೇಳೆಯಲ್ಲಿಯೂ ಸಹ ಅವರು ಕ್ರಮಬದ್ಧವಾಗಿ ಇರುವುದು ಬಹಳ ಮುಖ್ಯ. ಒಂಟಿಯಾಗಿರಲಿ, ಒಟ್ಟಾಗಿರಲಿ ಅವರು ಶಿಸ್ತುಬದ್ಧರಾಗಿ, ಅಂದವಾಗಿ, ಚೂಟಿಯಾಗಿ ಚಾಕಚಕ್ಯತೆಯಿಂದ ಇರುವುದನ್ನು ರೂಢಿಸಿಕೊಳ್ಳಬೇಕು. ಗುಂಪಿನಲ್ಲಿ ಇದ್ದಾಗಲಂತೂ ಅವರು ಒಟ್ಟಾಗಿ, ಕ್ರಮಬದ್ಧ ರೀತಿಯಲ್ಲಿ ಶಿಸ್ತಿನಿಂದ ವರ್ತಿಸಬೇಕು

ನಮ್ಮ ಸಂಸ್ಥಾಪಕರಾದ ಬೇಡನ್ ಪೊವೆಲ್ ಅವರು ಕವಾಯಿತು ಬೇಡವೆಂದೇನೂ ಅಭಿಪ್ರಾಯಪಡಲಿಲ್ಲ. ಬದಲು ಬೇಕೆಂಬುದು ಅವರ ಇಚ್ಛೆಯಾಗಿತ್ತು. ಗೊತ್ತು ಗುರಿ ಇಲ್ಲದ, ಭಾವನಾತ್ಮಕವಲ್ಲದ ಕವಾಯತನ್ನು ಮಕ್ಕಳ ಮೇಲೆ ಹೇರಬಾರದೆಂಬುದು ಅವರ ಅಭಿಪ್ರಾಯವಾಗಿತ್ತು. (ಬಹುಶಃ ಆರೀತಿ ಬಲವಂತವಾಗಿ ಹೇರುವುದರಿಂದಾಗುವ ಮಾನಸಿಕ ಪರಿಣಾಮಗಳ ಬಗ್ಗೆ ಅವರು ಗಮನ ಹರಿಸಿರಬೇಕು) ಅಲ್ಲದೆ ವರ್ಷಪೂರಾ, ಕಾಲದ ಪರಿವೆ ಇಲ್ಲದೆ ಕವಾಯತು ಮಾಡಬಾರದು. ಶಕ್ತಿಗೆ ಮೀರಿದ ಕವಾಯತು ಆಗಬಾರದು. ಕವಾಯತ್ತೇ ಎಲ್ಲವೂ ಅಲ್ಲ. ಸ್ಕೌಟುಗಳು ಮಾಡಬಹುದಾದ, ಮುಖ್ಯವಾದ ಸಾವಿರಾರು ಕೆಲಸಗಳಿವೆ. ಈ ಉಳಿದೆಲ್ಲವನ್ನೂ ಕಡೆಗಣಿಸಿ, ಕವಾಯತ್ತನ್ನೇ ಮಾಡುತ್ತಾ ಕಾಲ ಕಳೆಯುವುದನ್ನು ಬಿ.ಪಿ. ಅವರು ವಿರೋಧಿಸಿದರು.

ಸ್ಕೌಟುಗಳಿಗೆ ಸರಿಯಾದ ರೀತಿಯ ನಿಲುವು ಮತ್ತು ನಡಿಗೆಗಳು ತಿಳಿದಿರಬೇಕು. ನಿಲ್ಲುವಾಗ ನೇರವಾಗಿ, ಸರಿಯಾಗಿ ನಿಲ್ಲಬೇಕು. ನಡಿಗೆಯು ಲಯಬದ್ಧವಾಗಿಯೂ, ನೇರ ನಿಲುವಿನಿಂದಲೂ ಕೂಡಿರಬೇಕು. ಈ ಬಗ್ಗೆ "ಬಾಲಕರಿಗಾಗಿ ಸ್ಕೌಟಿಂಗ್" ಪುಸ್ತಕದಲ್ಲಿ ಬಿ.ಪಿ. ಹೀಗೆ ಹೇಳಿದ್ದಾರೆ.

**ಕವಾಯತು:** ಸ್ಕಾಟುಗಳು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ತ್ವರಿತ ಗತಿಯುಲ್ಲಿ ವ್ಯವಸ್ಥಿತವಾಗಿ ಅಥವಾ ಪೆಟ್ರೋಲ್‌ಗಳು ಒಂದಾಗಿ ಹೇಗೆ ಮುನ್ನಡೆಯಬೇಕು? ಎಂದು ತಿಳಿದಿರಬೇಕು. ಆಗಾಗ್ಗೆ ಕವಾಯತು ಅಭ್ಯಾಸ ಮಾಡುತ್ತಿದ್ದರೆ ಈ ಬಗ್ಗೆ ಅವರಿಗೆ ಸೂಕ್ತ ಶಿಕ್ಷಣ ದೊರಕುತ್ತದೆ ಮತ್ತು ಅವರು ಚಾಕಚಕ್ಯತೆಯಿಂದಿರಲು ಅನುಕೂಲವಾಗುತ್ತದೆ. "ತ್ವರಿತಗತಿಯ, ವ್ಯವಸ್ಥಿತವಾದ



ಚಲನೆಗಳ ಅಭ್ಯಾಸವು ಅವರನ್ನು ಸುಸ್ಥಿತಿಯಲ್ಲಿ ಇರಿಸಿ, ಚುರುಕಾಗಿಯೂ, ಚಾಕಚಕ್ಯತೆಯಿಂದಿರುವಂತೆಯೂ ಮಾಡುತ್ತದೆ" ಎಂದು ಬಿ.ಪಿ. ಹೇಳಿದ್ದಾರೆ. ಶರೀರಕ್ಕೆ ಆಸರೆ ಕೊಡುವ ಸ್ನಾಯುಗಳಿಗೆ, ಕವಾಯತ್ತಿನಿಂದ ಪುಷ್ಟಿ ದೊರಕುತ್ತದೆ. ದೇಹವು ನೇರವಾಗಿರುವುದರಿಂದ ಹೃದಯಕ್ಕೂ, ಶ್ವಾಸಕೋಶಗಳಿಗೂ ಕೆಲಸ ಮಾಡಲು ಹೆಚ್ಚು ಸ್ಥಳಾವಕಾಶವು ದೊರಕುತ್ತದೆ. ಆಹಾರವು ಸರಿಯಾಗಿ ಜೀರ್ಣವಾಗಲೂ ದೇಹದೊಳಗಿನ ಇತರ ಅಂಗಾಂಗಗಳು ಸರಿಯಾದ ಸ್ಥಿತಿಯಲ್ಲಿರುವಂತೆಯೂ ಸಹಾಯ ಮಾಡುತ್ತದೆ.



ಬಿ.ಪಿ. ಅವರು ಮುಂದುವರೆದು, ಅದೇ ಜೋಲುಬಿದ್ದವನ (ಬಾಗಿದ ಸ್ಥಿತಿಯಲ್ಲಿರುವ–Sloppy fellow) ಅಂಗಾಂಗಗಳು ಕುಗ್ಗಿ, ಸರಿಯಾಗಿ ಕೆಲಸ ಮಾಡಲು ತೊಂದರೆಯುಂಟಾಗುತ್ತದೆ. ಸಾಮಾನ್ಯವಾಗಿ ಜೋತು ಬಿದ್ದವನು ಅಶಕ್ತನೂ, ರೋಗಿ ವ್ಯಕ್ತಿಯೂ ಆಗಿರುತ್ತಾನೆ.



"ನಿಂತಾಗ ನೇರವಾಗಿ ನಿಲ್ಲಿ, ಕುಳಿತಾಗ ನೇರವಾಗಿ ಕುಳಿತುಕೊಳ್ಳಿ, ನಿಮ್ಮ ಬೆನ್ನು ಕುರ್ಚಿಯ ನೇರ ಭಾಗಕ್ಕೆ ಹೊಂದಿಕೊಳ್ಳಲಿ. ಕುಳಿತಿರಿ, ನಿಂತಿರಿ, ಚಲಿಸುತ್ತಿರಿ, "ದೇಹದ ಚುರುಕುತನವು", ಮನಸ್ಸಿನ ಚುರುಕುತನವನ್ನು ತೋರಿಸುತ್ತದೆ. ಅದು ಲಾಭದಾಯಕವೂ ಕೂಡ, ಏಕೆಂದರೆ ಬಹಳ ಮಂದಿ ವ್ಯವಸ್ಥಾಪಕ ವರ್ಗದವರು, ಚುರುಕಾದ ಬಾಲಕರನ್ನೇ ಕೆಲಸ ಮಾಡಲು ಆರಿಸಿಕೊಳ್ಳುತ್ತಾರೆಯಾಗಲೀ, ಜೋತಿರುವವನನ್ನಲ್ಲ. ನೀವು ಮೇಜಿನ ಮೇಲೆ ಬರೆಯಲು ಬಾಗುವಾಗ ಅಥವಾ ಬೂಟ್‌ನ ಲೇಸನ್ನು ಕಟ್ಟುವಾಗ, ನಿಮ್ಮ ಬೆನ್ನನ್ನು ಬಿಲ್ಲಿನಂತೆ ಬಾಗಿಸಬೇಡಿ. "ನಡು"ವನ್ನು ಬಾಗಿಸಿ, ಇದರಿಂದ ದೇಹಕ್ಕೂ ಬಲವು ಬರುತ್ತದೆ.

**ಕವಾಯತಿನ ಉದ್ದೇಶ:** ಶಿಸ್ತಿನ ಮನೋಭಾವನೆಯನ್ನು ರೂಢಿಸುವುದು, ದೈಹಿಕ ನಿಲುವನ್ನು ಉತ್ತಮಪಡಿಸುವುದು ಕವಾಯತಿನ ಉದ್ದೇಶ. ಕವಾಯತಿನಿಂದ ಚಾಕಚಕ್ಯತೆ ಮತ್ತು ಚುರುಕುತನವು ಬೆಳೆಯುತ್ತದೆ, ನಾಯಕತ್ವ ಲಕ್ಷಣಗಳು ಅಭಿವೃದ್ಧಿ ಹೊಂದುತ್ತವೆ. ನೇತಾರರಾಗಿ ಆದೇಶಿಸಲು ಬರುತ್ತದೆ. ಯಾವುದೇ ಆದೇಶವನ್ನು ಚಾಚೂ ತಪ್ಪದೆ ಪಾಲಿಸಲು ಬರುತ್ತದೆ. ಕವಾಯತು ಮೈದಾನದಲ್ಲಿ ಉತ್ತಮ ಮಟ್ಟದ ಸುಬದ್ಧ ಹಾಗೂ ಸ್ಥಿಮಿತ ಚಲನೆಗಳನ್ನು ಅಭ್ಯಾಸ ಮಾಡಲೂ, ರೂಢಿಸಿಕೊಳ್ಳಲೂ ಬರುತ್ತದೆ.

ಕವಾಯತು ಎಂದರೆ, ವ್ಯಕ್ತಿಯು ಸ್ವಾಭಾವಿಕವಾಗಿ ಆದೇಶವನ್ನನುಸರಿಸಿ, ಕೂಡಲೇ ಹಲವಾರು ಚಲನೆಗಳನ್ನು ಮಾಡಲು ಕಲಿತಿರುವುದು.

ಕವಾಯತನ್ನು ಎರಡು, ವಿಧಗಳಾಗಿ ವಿಂಗಡಿಸಬಹುದು.

(1) ನಿರಾಯುಧ ಕವಾಯತು ಅಥವಾ ಪದವಿನ್ಯಾಸ

(2) ಸಾಯುಧ ಕವಾಯತು

ತುರ್ತು ಸಂದರ್ಭಗಳಲ್ಲಿ ದೇಶ-ಸೇವೆ ಮಾಡಲು ಇಷ್ಟಪಡುವುದಾದರೆ ಸ್ಕೌಟುಗಳು ಎರಡೂ ವಿಧದ ಕವಾಯತನ್ನು ತಿಳಿದಿರಬೇಕು.

ದಳ ಸಭೆಗಳ ಸಮಯದಲ್ಲಿ ಪದವಿನ್ಯಾಸ ಕವಾಯತಿನ ಅಭ್ಯಾಸ ಮಾಡಬಹುದು. ಅದೇ ಸಾಯುಧ ಕವಾಯತಿನ ಅಭ್ಯಾಸ ಮಾಡಬೇಕಾದರೆ, ಅವಕಾಶಗಳು ವಿರಳ ಹಾಗೂ ಸುಲಭ ಸಾಧ್ಯವಲ್ಲ.

'ಬಾಲಕರಿಗಾಗಿ ಸ್ಕೌಟಿಂಗ್'ನ ಶಿಬಿರಾಗ್ನಿ ಉದಂತ 19 ರಲ್ಲಿ ಪದವಿನ್ಯಾಸ ಕವಾಯತಿನ ಬಗ್ಗೆ ವಿವರವಾಗಿ ಹೇಳಲಾಗಿದೆ. ಸ್ಕೌಟು ದಂಡ ಹಿಡಿದು ಮಾಡುವ ಕವಾಯಿತಿನ ಬಗ್ಗೆಯೂ ವಿವರಿಸಲಾಗಿದೆ. **ಸಾಯುಧ ಕವಾಯಿತಿನ ಸಾಂಪ್ರದಾಯಿಕ ಶಿಕ್ಷಣವನ್ನು, ಪೋಲೀಸ್ ಅಥವಾ ಸೈನ್ಯದಳದವರ ಸಹಯೋಗದೊಂದಿಗೆ, ವಿಶೇಷವಾಗಿ ವ್ಯವಸ್ಥೆ ಮಾಡಬೇಕಾಗುತ್ತದೆ.**

## ಪದವಿನ್ಯಾಸ ಕವಾಯತು

**ಸಾಮಾನ್ಯ ಆದೇಶ ಪದಗಳು:**

(1) ಸಾವಧಾನ್ - Attention

(2) ವಿಶ್ರಾಮ್ - Stand at ease

(3) ಆರಾಮ್ ಸೇ - Stand easy
(4) ಲೈನ್ ಬನ್ - Fall in
(5) ಸಚ್‌ಜಾ–ದಹಿ ನೇ ಸೇ - Dress up from the right
(6) ದಹಿನೆಸೇ ಗಿನ್ ಥಿ ಕರ್ - Number from the right
(7) (ಮೂಢ್) –ದಹಿನೇ ಮೂಢ್ - (Truning) Right turn
(8) ನಿಕಟ್ ಲೈನ್ ಚಲ್/ಕುಲೀ ಲೈನ್ ಚಲ್ - Open order march/ close order march
(9) ವಿಸರ್ಜನ್ - Dismiss
(10) ಕತಾರ್ ಥೋಡ್ - Fall out
(11) ತೇಜ್‌ಚಲ್ - Quick March)
ಧೀರೇಚಲ್ - Slow March
ದೌಡ್‌ಕೆಚಲ್ - Double March
ದಹೀನೇರುಕ್, ಕತಾರ್ ಖೋಲ್ - Side pace, Stepout
(12) ಥಂ - Halt
(13) ಪೆರೇಡ್ ಪರ್ - Getting on Parade
(14) ತಾಲ್ ಸೇ ಕದಂ - Marking time
ಆಗೇಚಲ್ – - Forward, march
ತೇಜ್‌ಸೇ - In Quick time
(15) ದಹಿನೇ / ಬಾಯೇ / ಫೀಚೇ ಮೂಡ್ - Right. Left, about turn on
ಆಗೇಸೇ ತೇಜ್‌ಚಲ್ From the front quick march
(16) ದಹಿನೇ ಸೇ, ದಹಿನೇ/ From the right
ಬಾಯೇ ಘೂಂ - Right / Left Wheel
(17) ಸಲಾಮಿ - Saluting
ಆಗೇ ಸಲಾಮಿ Saluting front
ದಹಿನೇ–ಬಾಯೇ–ಆಗೇ To right - To left - To front
ತೇಜ್ ಸೇ While Marching
ಸ್ಕೌಟ್ ಆಫೀಸರ್ ಭೇಟ್ While approaching Scout officer
ಟೋಪಿ ಡಾಲ್ಕೆ ಸಮಯ್ While Passing Scout wearing a cap
ಗಾಡೀ ಡುರುಸ್ಟ್ವಮೇ ಸಮಯ್ While driving a mechanical vehicle
ಸೈಕಲ್ ಚಲಾತೇ ಸಮಯ್ Or Riding a cycle

## ತಾಂತ್ರಿಕ ಕವಾಯತಿನ ಕ್ರಮಾನುಗತಿ

(ಅ) ಪೆಟ್ರೋಲ್/ದಳವು ಕುದುರೆ ಲಾಳದಾಕಾರದಲ್ಲಿ ಬೋಧಕನ ಸುತ್ತಲೂ, ಎದುರು ಸೂರ್ಯ ಇಲ್ಲದಂತೆ ನಿಲ್ಲುತ್ತದೆ.

(ಆ) ಬೋಧನೆಯ ಬಗ್ಗೆ ಪೆಟ್ರೋಲ್ / ದಳಕ್ಕೆ ವಿವರಿಸಿ

(ಇ) ತ್ವರಿತಗತಿಯಲ್ಲಿ ಪ್ರದರ್ಶನ ನೀಡಿ

(ಈ) ಅದನ್ನೇ ನಿಧಾನವಾಗಿ ಮಾಡಿತೋರಿಸಿ

(ಉ) ವಿವರಣೆಯೊಂದಿಗೆ ಮಾಡಿ ತೋರಿಸಿ

(ಊ) ಈಗ ಪ್ರತಿಯೊಬ್ಬರೂ ಅಭ್ಯಾಸ ಮಾಡುವುದು, ತಪ್ಪು ತಿದ್ದುವುದು

(ಎ) ಪೆಟ್ರೋಲ್‌ವಾರು, ನಂಬರು ಪ್ರಕಾರ, "ಕಾಲಗಮನ" ಇಟ್ಟುಕೊಂಡು ಅಭ್ಯಾಸ

**ಆದೇಶಗಳು:**

ಆದೇಶದಲ್ಲಿ ಎರಡು ಭಾಗಗಳಿರುತ್ತವೆ.

(i) ಎಚ್ಚರಿಕೆ ನೀಡುವುದು

(ii) ನಿರ್ವಹಣಾದೇಶ

ಭಾರತೀಯ ಸೇನೆಯಲ್ಲಿ ಉಪಯೋಗಿಸುವ ಆದೇಶ ಪದಗಳನ್ನೇ ಸ್ಕೌಟುಗಳೂ ಉಪಯೋಗಿಸಬೇಕು.

**ಕವಾಯತಿನಲ್ಲಿ ಉಪಯೋಗಿಸುವ ಆದೇಶ ಪದಗಳು:**

| | | |
|---|---|---|
| (1) | ಲೈನ್ ಬನ್ (Rank): (ಸಾಲು) | ಸ್ಕೌಟುಗಳು ಒಬ್ಬರ ಪಕ್ಕದಲ್ಲೊಬ್ಬರು ಸಾಲಾಗಿ ನಿಲ್ಲುತ್ತಾರೆ. |
| (2) | ಕತಾರ್ (file): (ಅರೆ) | ಸ್ಕೌಟುಗಳು ಒಬ್ಬರ ಹಿಂದೊಬ್ಬರು, ನಿಡುತೋಳು ದೂರದಲ್ಲಿ ನಿಲ್ಲುತ್ತಾರೆ. |
| (3) | ಸಜ್‌ಚಾ (Dressing): (ಸವರಣೆ) | ಸಾಲು ಸರಿಯಾಗಿರುವಂತೆ, ಸಾವರಿಸಿ ನಿಲ್ಲುವುದು. |
| (4) | ಕತಾರ್ ಲೈನ್ (Close order): (ಸಮೀಪಸಾಲು) | ಸಾಲಿನಿಂದ ಸಾಲಿಗೆ 76.2 ಸೆ.ಮೀ. ದೂರ ಇರುವಂತೆ ನಿಲ್ಲುವುದು. |

(5) ಕುಲೀ ಲೈನ್ (open order) : ಸಾಲಿನಿಂದ ಸಾಲಿಗೆ 190.5 ಸೆ.ಮೀ.
(ದೂರ ಸಾಲು) ದೂರವಿರುವಂತೆ ನಿಲ್ಲುವುದು.

**ಸಾವ್‌ಧಾನ್:**

ಕವಾಯತಿನ ಎಲ್ಲಾ ಚಟುವಟಿಕೆಗಳಿಗೂ ಈ ಸ್ಥಿತಿಯು ಮುಖ್ಯವಾದುದು. ಸಾವ್‌ಧಾನ್ ಸ್ಥಿತಿಗೆ ಬಂದ ಸ್ಕೌಟುಗಳು, ಮುಂದಿನ ಆದೇಶಕ್ಕಾಗಿ ತಯಾರಿರುವರೆಂದರ್ಥ. ಸ್ಕೌಟರುಗಳೊಡನೆ, ಪೆ.ಲೀ.ಗಳೊಡನೆ ಮಾತನಾಡುವಾಗ 'ಸಾವ್‌ಧಾನ್' ಸ್ಥಿತಿಯಲ್ಲಿರಬೇಕು.

**ಸಾವ್‌ಧಾನ್ ಸ್ಥಿತಿ:**

ಅ) ಹಿಮ್ಮಡಿಗಳು ಒಟ್ಟಿಗಿರಬೇಕು. ಪಾದಗಳು $30^0$ ಕೋನದಲ್ಲಿ ಅಗಲಿಸಿರಬೇಕು.

ಆ) ದೇಹವು ನೇರವಾಗಿರಬೇಕು. ಎದೆಯು ಸೆಟೆದಿರಬೇಕು. ಭುಜಗಳು ನೇರವಾಗಿರಬೇಕು.

ಇ) ತೋಳು, ಕೈಗಳು, ನೇರವಾಗಿ ಕೆಳಕ್ಕಿರಬೇಕು. ಕೈಬೆರಳುಗಳನ್ನು ಮಡಿಸಿರಬೇಕು ಮತ್ತು ಹೆಬ್ಬೆರಳು ನೇರವಾಗಿ ಮುಂದುಗಡೆ ಟ್ರೌಜರ್ಸ್‌ನ ಹೊಲಿಗೆಯ ಹಿಂಭಾಗಕ್ಕೆ ಸರಿಯಾಗಿರಬೇಕು. ಮೇಲ್ತೋಳು ದೇಹಕ್ಕೆ ಅಂಟಿಕೊಂಡಿರಬೇಕು.

ಈ) ತಲೆಯನ್ನು ಮೇಲೆತ್ತಿರಬೇಕು. ಗದ್ದವು ಲಂಬವಾಗಿರಬೇಕು. ಕಣ್ಣುಗಳು ನೇರವಾಗಿ ಎದುರಿಗೆ ನೋಡಬೇಕು.

ಉ) ದೇಹದ ತೂಕವು ಎರಡೂ ಹಿಮ್ಮಡಿಗಳ ಮೇಲೆ ಸಮವಾಗಿರಬೇಕು.

ಸಾವ್‌ಧಾನ್ ಹೇಳಿದಾಗ, ಎಡಪಾದವನ್ನು ನೆಲದಿಂದ ಸುಮಾರು 2.5 ಸೆ.ಮೀ. ಮೇಲೆತ್ತಿ, ಮಟ್ಟವಾಗಿ ತಂದು, ಚುರುಕಾಗಿ ಬಲಪಾದಕ್ಕೆ ಸೇರಿಸಬೇಕು. ಹಾಗೆ ಸೇರಿಸುವಾಗ ಪಾದವನ್ನು ನೆಲಕ್ಕೆ ಘಟ್ಟಿಸಬಾರದು.

**ವಿಶ್ರಾಮ್:** ಸಾವ್‌ಧಾನ್ ಇಂದ ವಿಶ್ರಾಮ್ ಸ್ಥಿತಿಗೆ ಬರುವಾಗ, ಎಡಪಾದವನ್ನು ನೆಲದಿಂದ ಸುಮಾರು 2.5 ಸೆ.ಮೀ. ಮೇಲೆತ್ತಿ, 30 ಸೆ.ಮೀ. ಎಡ ಪಕ್ಕಕ್ಕೆ ಸರಿಸಿ. ಅದೇ ಸಮಯಕ್ಕೆ ಸರಿಯಾಗಿ ಎರಡೂ ಕೈಗಳನ್ನು ಹಿಂದಕ್ಕೆ ತೆಗೆದುಕೊಂಡು, ಎಡಗೈನ ಅಂಗೈನಿಂದ ಬಲಗೈನ ಹಿಂಭಾಗವನ್ನು ಹಿಡಿಯಬೇಕು. ಕೈಗಳು ಮತ್ತು ಕಾಲಿನ ಚಲನೆಯು ಒಂದೇ ಕಾಲದಲ್ಲಿ ಆಗಬೇಕು.

**ಗಮನಿಸಿ:** ಸಾವಧಾನ್ ಮತ್ತು ವಿಶ್ರಾಂ ಸ್ಥಿತಿಗಳಿಗಿರುವ ವ್ಯತ್ಯಾಸ ಎರಡೇ. 1) ಕಾಲುಗಳು ಅಗಲಿರಿಸುತ್ತವೆ. 2) ಕೈಗಳು ಹಿಂದೆ ಇರುತ್ತವೆ. ಉಳಿದಂತೆ ಸಾವಧಾನ್‌ನಲ್ಲಿರುವಂತೆಯೇ ಇರಬೇಕು.

**ಆರಾಂಸೇ:** ವಿಶ್ರಾಂ ಸ್ಥಿತಿಯಲ್ಲಿದ್ದಂತೆ ಕಾಲುಗಳು ಕದಲದೆ ಅಚಲವಾಗಿರಬೇಕು. ಪೃಷ್ಠ ಭಾಗದಿಂದ ಮೇಲೆ (ಉದಾ: ಕೈಗಳು, ತಲೆ) ಚಲನೆ ಇರಬಹುದು. ಮಾತನಾಡಬಾರದು. ಎಚ್ಚರದಿಂದ ಮುಂದಿನ ಆದೇಶಕ್ಕಾಗಿ, ಕಿವಿಗೊಟ್ಟು ಎದುರು ನೋಡಬೇಕು. ಪಾಲಿಸಲು ಸಿದ್ಧನಿರಬೇಕು.

**ಸಾಲುನಿಲ್ಲಿ:** ಎಂದರೆ ಒಂದು ಸಾಲಿನಲ್ಲಿ ನಿಲ್ಲುವುದು. ಪೆಟ್ರೋಲ್‌ಗಳಲ್ಲಿ ನಿಂತಾಗ ಸಾಲಿನಿಂದ ಸಾಲಿಗೆ ಒಂದು ತೋಳಳತೆ ದೂರವಿರಬೇಕು. ಎಂಟು ಪೆಟ್ರೋಲ್‌ಗಳಿಗಿಂತಲೂ ಹೆಚ್ಚು ಪೆಟ್ರೋಲ್‌ಗಳಿದ್ದಾಗ (ರ‍್ಯಾಲಿ, ಜಾಂಬೋರೆಟ್ ಇತ್ಯಾದಿ ಸಮಯದಲ್ಲಿ) 3 ಸಾಲುಗಳನ್ನು ಮಾಡಬಹುದು (ಎಂದರೆ ಮುಂದೆ 3 ಸಾಲು, ಹಿಂದೆ ಮೂರು ಪೆಟ್ರೋಲ್ ಸಾಲು, ಮಧ್ಯೆ 2–3 ಪೆಟ್ರೋಲ್‌ಗಳ ಸಾಲು ಹೀಗೆ), 5 ಪೆಟ್ರೋಲ್‌ಗಳಿಗೆ ಹೆಚ್ಚಿದ್ದರೆ 2 ಸಾಲು ಮಾಡಬಹುದು. 5 ಪೆಟ್ರೋಲ್‌ಗಳಿಗೆ ಕಡಿಮೆ ಇದ್ದರೆ ಒಂದೇ ಸಾಲು ಮಾಡಬಹುದು. ಸಾಲಿನಲ್ಲಿ ನಿಂತಾಗ, ಎತ್ತರದವರು ಸಾಲಿನ ಬಲಗಡೆಗೂ, ಅತಿ ಕಡಿಮೆ ಎತ್ತರದವರು ಸಾಲಿನ ಎಡಗಡೆಗೂ ಇರಬೇಕು.

**ಸಜ್‌ಜಾ:** ಪೆಟ್ರೋಲ್/ದಳ ಸಾಲಿನಲ್ಲಿ ನಿಂತಾಗ ಅಥವಾ ಪೆರೇಡ್‌ಗಾಗಿ ನಿಂತಾಗ ಸಾಲು ಸವರಣೆ ಆಗಬೇಕಾಗುತ್ತದೆ. ಸವರಣೆ ಎಂದರೆ ಸಾಲಿನಲ್ಲಿ ಬಲಗಡೆ ಮೊದಲನೆಯವರು ಅಚಲವಾಗಿರುತ್ತಾರೆ. ಸಾಲಿನಲ್ಲಿ ಒಬ್ಬೊಬ್ಬರ ಮಧ್ಯೆ ಅಂತರವು ಸರಿಯಾಗಿರುವಂತೆ (ಮುಂದೋಳು ದೂರ) ಹಾಗೂ ಭುಜಗಳು ನೇರವಾಗಿರುವಂತೆ ಅದರಿಂದ ಸಾಲು ನೇರವಾಗಿರುವಂತೆ ಸವರಣೆ ಮಾಡಿಕೊಳ್ಳಬೇಕು. ಇನ್ನು ಸಾಲಿನಿಂದ ಸಾಲಿಗೆ ತೋಳಳತೆ ಇರುವಂತೆ, ಇಲ್ಲೂ ಮೊದಲನೆಯವರು ಅಚಲವಾಗಿದ್ದು ಉಳಿದವರು, ಒಬ್ಬೊಬ್ಬರು ಮಧ್ಯದ ಅಂತರ ಹಾಗೂ ಭುಜಕ್ಕೆ ಭುಜ ನೇರವಾಗಿರುವಂತೆ ಸವರಿಸಿ ನಿಲ್ಲಬೇಕು. ಸಾಲು ಸಾಲುಗಳ, ವ್ಯಕ್ತಿಗಳ ಅಂತರ ಹಾಗೂ ಸಾಲುಗಳು ನೇರವಾಗಿರುವುದು. ಕರಾರುವಕ್ಕಾಗಿ ಸರಿ ಇರುವುದು ಬಹು ಮುಖ್ಯ. ಸವಕರಣೆಯಿಂದ ಕವಾಯತಿನ ಚಲನೆಗಳು ಸುಸೂತ್ರವಾಗುವುದಲ್ಲದೆ, ಚಾಕಚಕ್ಯತೆಯೂ ಕಾಣಬರುತ್ತದೆ.

**ದಹನೆ ಸಾ ಸಚ್‌ಜಾ:** ಈ ಆದೇಶವು ಬಂದ ಕೂಡಲೇ ಎಲ್ಲರೂ ತಮ್ಮ ಬಲಗಡೆಯಲ್ಲಿ ಈ ಕೆಳಕಾಣಿಸಿರುವಂತೆ ಸಾವರಿಸಿ ನಿಲ್ಲಬೇಕು.

(i) ಸಾಲಿನ ಬಲಗಡೆಯಲ್ಲಿ ಮೊದಲ ವ್ಯಕ್ತಿ ಅಲುಗದಂತೆ, ಅಚಲವಾಗಿರಬೇಕು.

(ii) ಇತರರು 38 ಸೆಂ.ಮೀ.ನಷ್ಟು ಮುಂದೆ ಬರಬೇಕು.

(iii) ತಲೆಯನ್ನು ಬಲಕ್ಕೆ ತಿರುಗಿಸಿ, ಬಲಕ್ಕೆ ದೃಷ್ಟಿಹರಿಸಬೇಕು.

(iv) ಹಿಂದಿನ ಸಾಲುಗಳಲ್ಲಿ ಮೊದಲ ಸ್ಕೌಟುಗಳು ಮಾತ್ರ ತಮ್ಮ ಮುಂದಿರುವವರಿಂದ ಕರಾರುವಾಕ್ಕಾಗಿ 2 ಹೆಜ್ಜೆ ಅಂತರವಿರುವಂತೆ ನಿಲ್ಲಬೇಕು.

(v) ಸಾಲಿನಿಂದ ಸಾಲಿಗೆ 76 ಸೆಂ.ಮೀ. ಅಂತರವಿರಬೇಕು.

(vi) ಹಿಂದಿನ ಹಾಗೂ ಮಧ್ಯದ ಸಾಲುಗಳವರು ಮುಂದಿನ ಸಾಲಿಗೆ ಸರಿಯಾಗಿ ಸಾವರಿಸಿ ನಿಲ್ಲಬೇಕು.

(vii) ಸಾಲುಗಳು ಸರಿಯಾಗಿರುವ ಬಗ್ಗೆ ಖಾತರಿ ಆದ ಕೂಡಲೇ, ಬೋಧಕರು ಮುಂದಕ್ಕೆ ದೃಷ್ಟಿಹರಿಸಲು ಆದೇಶ ನೀಡಬೇಕು.

**ಗಮನಿಕೆ:** ತೋಳಳತೆ ನೋಡಿ ನಿಲ್ಲುವುದು ಪ್ರಾರಂಭದಲ್ಲಿ ಮಾತ್ರ. ಅಭ್ಯಾಸವಾದಂತೆ ಬಾಲಕರು, ಅರಿವಿಲ್ಲದೆ ತಾವೇ ತಾವಾಗಿ, ಸಹಜವೆಂಬಂತೆ ನಿಂತುಬಿಡುತ್ತಾರೆ.

**ಗಣನೆ (Numbering):** ಬೋಧಕರು ಪೆಟ್ರೋಲ್/ದಳದಲ್ಲಿ ಯಾರೊಡನೆಯಾದರೂ ವೈಯಕ್ತಿಕ ಮಾತನಾಡಲು ಗಣನೆಯು ಸಹಾಯಕ ವಾಗುತ್ತದೆ. ಮುಂದಿನ ಸಾಲಿನವರು ಮಾತ್ರ ಬಲದಿಂದ ಎಡಕ್ಕೆ, ಬೇಗಬೇಗ 1,2 ಹೀಗೆ ತಮ್ಮ ಸಂಖ್ಯೆಯನ್ನು ಹೇಳುತ್ತಾರೆ. ಹಿಂದಿನ ಹಾಗೂ ಮಧ್ಯ ಸಾಲಿನವರು ತಮ್ಮ ಮುಂದಿನ ಸಾಲಿನವರು ಹೇಳಿದ ಸಂಖ್ಯೆಯನ್ನು ಗಮನಿಸಿಕೊಳ್ಳುತ್ತಾರೆ. ಅವರವರ ಮುಂದಿರುವ ಸಂಖ್ಯೆಯೇ ಅವರಿಗೂ ಅನ್ವಯಿಸುತ್ತದೆ.

**ಬಲತಿರುವು:** ಬಲಗಾಲಿನ ಹಿಮ್ಮಡಿ ಹಾಗೂ ಎಡಪಾದದ ಬೆರಳುಗಳನ್ನು ಉಪಯೋಗಿಸಿ, ಬಲಕ್ಕೆ $90^0$ (ಎಂದರೆ ಪಕ್ಕಕ್ಕೆ) ತಿರುಗಬೇಕು. ದೇಹದ ತೂಕವು ಬಲಗಾಲಿನ ಮೇಲಿರಲಿ. ಬಲಪಾದವು ನೆಲದ ಮೇಲೆ ಮಟ್ಟವಾಗಿ ಊರಿರಲಿ. ಎಡಗಾಲನ್ನು ನೆಲದಿಂದ 15.2 ಸೆಂ.ಮೀ. ಮೇಲೆತ್ತಿ, ಬಲಗಡೆಗೆ ತಂದು

ಬಲಹಿಮ್ಮಡಿಗೆ ಸೇರಿಸಿ (ಸಾವ್‌ಧಾನ್ ಸ್ಥಿತಿಯಲ್ಲಿದ್ದಂತೆ) ತಿರುಗುವಾಗ ಎತ್ತರ ಆದಂತೆ ಭಾಸವಾಗುತ್ತದೆ.

ಕೈಗಳು ಅಲುಗದಂತೆ ಪಕ್ಕದಲ್ಲಿರಲಿ, ಹಿಂಗಾಲು ಹಿಡಿತದಲ್ಲಿರಲಿ. ಪೆಟ್ರೋಲ್/ದಳವು ಪ್ರತಿನಿಮಿಷಕ್ಕೆ 40 ಹೆಜ್ಜೆಗಳಂತೆ ಚಲಿಸಿ, ಮಧ್ಯೆ ವಿರಾಮನೀಡಬೇಕು. ಮತ್ತೆ ಚಲಿಸಬೇಕು.

**ಹಿಂದಿರುವು:** ಮೇಲಿನಂತೆಯೇ. ಆದರೆ ಬಲ ಭಾಗದಲ್ಲಿ $180^0$ (ಎಂದರೆ ಹಿಂದಕ್ಕೆ) ತಿರುಗಬೇಕು. (ಹಾಗೆ ತಿರುಗುವಾಗ ಚೆಕ್ 1, 2, 3 ಹೇಳಿಕೊಳ್ಳಬೇಕು) ಕಾಲುಗಳು ಹಿಡಿತದಲ್ಲಿರಬೇಕು. ದೇಹವು ಆಯ ತಪ್ಪದಂತೆ ಎಚ್ಚರದಿಂದಿರಬೇಕು. (ತೊಡೆಗಳ ಭಾಗವು ಒಟ್ಟಾಗಿಯೇ ಇರಬೇಕು). ಎಡಗಾಲನ್ನು 15.2 ಸೆಂ.ಮೀ. ಮೇಲೆತ್ತಿ ಬಲಗಾಲಿಗೆ ಕೂಡಿಸಬೇಕು.

**ಸಮೀಪ ಹಾಗೂ ದೂರ ಸಾಲುಗಳು:**

ತಪಾಸಣೆಗಾಗಿ ಸ್ಕೌಟುಗಳು ದೂರ ಸಾಲಿನಲ್ಲಿ ನಿಲ್ಲಬೇಕಾಗುತ್ತದೆ.

**ದೂರ ಸಾಲಿನಲ್ಲಿ ಪಥಚಲನೆ (Open Order March)**

ಮೂರು ಸಾಲುಗಳಲ್ಲಿ ಮುಂದಿನ ಸಾಲು 115.3 ಸೆಂ.ಮೀ. ಮುಂದಕ್ಕೆ ಬರುತ್ತದೆ. ಹಾಗೆ ಚಲಿಸುವಾಗ ಕೈಗಳು ಪಕ್ಕದಲ್ಲೇ ಇರಬೇಕು.

ಹಿಂದಿನ ಸಾಲು ಅದೇ ರೀತಿಯಲ್ಲಿ 115.3 ಸೆಂ.ಮೀ. ಹಿಂದಕ್ಕೆ ಚಲಿಸುತ್ತದೆ. ಮಧ್ಯದ ಸಾಲು ಅಲ್ಲಾಡದೆ ನಿಂತಿರುತ್ತದೆ.

ಚಲನೆಯು ಮುಗಿದಾಗ ಸಾಲಿನಿಂದ ಸಾಲಿಗೆ 190.5 ಸೆಂ.ಮೀ ಅಂತರವಿರುತ್ತದೆ.

(ಈ ಅಂತರವು ಆಯಾ ಸಾಲಿನ ಕಾಲು ಹೆಬ್ಬೆರಳುಗಳಿಂದ ಮುಂದಿನ ಸಾಲಿನ ಹಿಮ್ಮಡಿಗಳವರೆಗಿನದಾಗಿರುತ್ತದೆ.)

**ಸಮೀಪ ಸಾಲಿನಲ್ಲಿ ಪಥಚಲನೆ** (Close Order March): ದೂರ ಸಾಲಿನಲ್ಲಿ ಮಾಡಿದಂತಲ್ಲದೆ ಅದರ ವಿರುದ್ಧ ಮಾಡಬೇಕು. ದೃಷ್ಟಿಯು ನೇರವಾಗಿರಬೇಕು. ನೆಲವನ್ನು ನೋಡಬಾರದು. ಕೈಗಳು ಪಕ್ಕದಲ್ಲೇ ಇರಬೇಕು. ಭುಜವು ಮಟ್ಟವಾಗಿರಬೇಕು.

**ವಿಸರ್ಜನೆ:** ವಿಸರ್ಜನ್ ಆದೇಶವನ್ನು ಕವಾಯತು ಮುಗಿದಾಗ ಅಥವಾ ಪ್ರದರ್ಶನದ ಕೊನೆಯಲ್ಲಿ ನೀಡಲಾಗುತ್ತದೆ. ಪೆಟ್ರೋಲ್‌ಗಳು ಸಮೀಪ ಸಾಲಿನಲ್ಲಿ ನಿಂತಿರುತ್ತವೆ. ಅವುಗಳು ಆದೇಶ ಬಂದ ಕೂಡಲೇ ಬಲಕ್ಕೆ ತಿರುಗಿ, ವಂದಿಸಿ ಬಲಕ್ಕೆ ಒಂದು ಹೆಜ್ಜೆ ಚಲಿಸಿ ಹೊರಕ್ಕೆ ಹೆಜ್ಜೆ ಹಾಕುತ್ತಾರೆ.

**ಪಥಚಲನೆ** (Marching): ಪಥಚಲನೆಯ ವೇಳೆಯಲ್ಲಿ ಹೆಜ್ಜೆಯಿಂದ ಹೆಜ್ಜೆಗಿರುವ ದೂರ ಹಾಗೂ ಒಂದು ನಿಮಿಷದಲ್ಲಿ ಮುಂದಕ್ಕೆ ಇಡಬಹುದಾದ ಹೆಜ್ಜೆಗಳ ಸಂಖ್ಯೆಯಲ್ಲಿ ವ್ಯತ್ಯಾಸವು ಬರುತ್ತದೆ. ಸುಮಾರು ವಯಸ್ಸಾದ ಬಾಲಕರಲ್ಲಿ ಗಮನಿಸಬಹುದಾದ ದೂರ ಹಾಗೂ ಹೆಜ್ಜೆಗಳ ಸಂಖ್ಯೆಯನ್ನು ಈ ರೀತಿ ಹೇಳಬಹುದು.

| ಹೆಜ್ಜೆಯಗತಿ | ಹೆಜ್ಜೆಯಿಂದ ಹೆಜ್ಜೆಗೆ ದೂರ | ಒಂದು ನಿಮಿಷದಲ್ಲಿ ಮುಂದಕ್ಕಿಡಬಹುದಾದ ಹೆಜ್ಜೆಗಳ ಸಂಖ್ಯೆ |
|---|---|---|
| ವೇಗಗತಿ (Quick March) | 76.2 ಸೆಂ.ಮೀ.(30 ಇಂಚು) | 120 (92 ಮೀ.) |
| ನಿಧಾನಗತಿ (Slow March) | 76.2 ಸೆಂ.ಮೀ. (30 ಇಂಚು) | 70 |
| ಓಟಗತಿ (Double March) | 101.6 ಸೆಂ.ಮೀ. (40 ಇಂಚು) | 180 (184 ಮೀ.) |
| ಪಕ್ಕಕ್ಕೆ ಜರುಗುವುದು (Side pace) | 30.48 ಸೆಂ.ಮೀ. (12 ಇಂಚು) | 120 |
| ಸಣ್ಣ ಹೆಜ್ಜೆ (Step Short) | 53.34 ಸೆಂ.ಮೀ. (21. ಇಂಚು) | 120 |
| ಹೊರ ಹೆಜ್ಜೆ (Step out) | 83.82 ಸೆಂ.ಮೀ. (33 ಇಂಚು) | 120 |

ಪಥಚಲನೆಯ ಗತಿಯು ಸ್ಥಿಮಿತಗೊಂಡು, ಪ್ರತಿ ಸ್ಕೌಟೂ, ಅರಿವಿಲ್ಲದೆ ತಂತಾನೇ ಚಲಿಸುವಂತಿರಬೇಕು. ಪಥಚಲನೆಯಿಂದ ಶಿಸ್ತು ಉಂಟಾಗುತ್ತದೆ. ನಿಧಾನ ಅಥವಾ ಮಂದಗತಿಯ ಚಲನೆಯು, ದೇಹವನ್ನು ಸಮತೂಕದಲ್ಲಿರಿಸಿಕೊಂಡು ನಡೆಯಲೂ, ಆಕರ್ಷಕ ರೀತಿಯ ನಿಲುವಿಗೂ ಸಹಾಯವಾಗುತ್ತದೆ.

'ತೇಜ್‌ಚಲ್' ಆದೇಶವು ಬಂದೊಡನೆಯೇ, ಎಡಗಾಲನ್ನು ಚಿಮ್ಮಿದಂತೆ ಎತ್ತಿ 76.2 ಸೆಂ.ಮೀ. ದೂರದಲ್ಲಿಡಬೇಕು. ಅದೇ ಸಮಯಕ್ಕೆ ಸರಿಯಾಗಿ ಬಲಗೈಯನ್ನು ಭುಜಮಟ್ಟಕ್ಕೆ ಬರುವವರೆಗೆ ಮುಂದಕ್ಕೆ ಬೀಸಿ ತೂಗಬೇಕು. ಕೈಬೀಸಿ ತೂಗುವಾಗ ಬೆರಳುಗಳು ಮಡಿಚಿರಬೇಕು. ಹೆಬ್ಬೆರಳಿನಿಂದ ಉಳಿದ ಬೆರಳುಗಳನ್ನು ಅದುಮಿ ಇಟ್ಟಂತಿರಬೇಕು. ಕೈಗಳು ನಡುಪಟ್ಟಿಯ ಮಟ್ಟದಿಂದ ಭುಜಮಟ್ಟದವರೆಗೆ

ಮುಂದಕ್ಕೆ ತೂಗಿದಂತೆಯೇ, ಹಿಂದಕ್ಕೂ ಭುಜಮಟ್ಟದವರೆಗೆ ಬೀಸಿ ತೂಗಬೇಕು, ಮೊಣಕೈಗಳು ನೇರವಾಗಿರಬೇಕು. ಕಾಲುಗಳು ಪೃಷ್ಠಭಾಗದಿಂದ ಮುಂದಕ್ಕೆ ನೇರವಾಗಿಯೂ, ಅಡೆತಡೆ ಇಲ್ಲದೆಯೂ, ಸಹಜವಾಗಿಯೂ ಮುಂದೆ ಬರಬೇಕು. ಪಾದವನ್ನು ನೆಲದ ಮೇಲಿಡುವಾಗ ಹಿಮ್ಮಡಿಯು ನೆಲವನ್ನು ಮುಟ್ಟುತ್ತದೆ. ಮೊಣಕಾಲುಗಳು ನೇರವಾಗಿರುತ್ತವೆ. ದೇಹದ ಉಳಿದ ಭಾಗಗಳು ಸಾವ್‌ಧಾನ್ ಸ್ಥಿತಿಯಲ್ಲಿರುವಂತಿರುತ್ತದೆ. ಎಡಗಾಲು ಮುಂದಾದಾಗ ಬಲಗೈ ಮುಂದಕ್ಕೆ ಬೀಸಿ ತೂಗಿದರೆ, ಬಲಗಾಲು ಮುಂದಾದಾಗ ಎಡಗೈ ಮುಂದಕ್ಕೆ ಬೀಸಿ ತೂಗುತ್ತದೆ. ಯಾವುದೇ ಚಲನೆಯೂ ಸಹಜವಾಗಿರಬೇಕು.

ಬಲಗಾಲು ಎಡಗಾಲನ್ನು ಕ್ರಮಿಸಿ ಮುಂದಕ್ಕೆ ಹೋದಾಗ 'ಥಂ' ಹೇಳಲಾಗುತ್ತದೆ. ಎಂದರೆ ಎಡಗಾಲು ಮುಂದಕ್ಕೆ ಚಲಿಸಿ ನೆಲವನ್ನು ಮುಟ್ಟುತ್ತಿದ್ದಂತೆಯೇ ಆದೇಶ ಆರಂಭವಾಗಿ (ಸ್ಕ್ವಾಡ್) ಬಲಗಾಲು ಮೇಲೆದ್ದಾಗ ಆದೇಶವು (ಥಂ) ಮುಗಿಯುತ್ತದೆ. ಈಗ ಬಲಗಾಲು ಇನ್ನೇನು ನೆಲಮುಟ್ಟಿತು ಎನ್ನುವಾಗ ಎಡಗಾಲನ್ನೆತ್ತಿ, ಹೆಜ್ಜೆಯಗತಿಯನ್ನು ಕಡಿಮೆ ಮಾಡಿ, ಸಣ್ಣ ಹೆಜ್ಜೆಯನ್ನು (38.1 ಸೆಂ.ಮೀ.) ಮುಂದಿಟ್ಟು, ಅದು ನೆಲವನ್ನು ಮುಟ್ಟುತ್ತಿದ್ದಂತೆಯೇ (ಒನ್) ಬಲಮಂಡಿಯನ್ನು ಮಡಿಸಿದಂತೆ ಮಾಡುತ್ತಾ, ಬೀಸುತ್ತಿರುವ, ಕೈ ತೂಗನ್ನು ನಡುಪಟ್ಟಿಯ ಮಟ್ಟಕ್ಕೆ ಕತ್ತರಿಸಿ, ಬಲಗಾಲನ್ನು ಚಕ್ಕನೆ, ಎಡಗಾಲಿನ ಪಕ್ಕಕ್ಕೆ ಸೇರಿಸಿ (ಟೂ) ಸಾವ್‌ಧಾನ್ ಸ್ಥಿತಿಗೆ ಬರಬೇಕು.

**'ದೌಡ್‌ಚಲ್'** ಆದೇಶವು ಬಂದ ಕೂಡಲೇ ಪೆಟ್ರೋಲ್/ದಳವು ಓಡಲು ಪ್ರಾರಂಭ ಮಾಡಬೇಕು. ವೇಗಗತಿಯು ನಿಮಿಷಕ್ಕೆ 180 ಹೆಜ್ಜೆಗಳು, ಕೈಗಳನ್ನು ಬೀಸಿ ತೂಗಬಾರದು. ಮೊಣಕೈ ಮಡಿಸಿರಬೇಕು. ಮುಂದೋಳು ಎದೆಯ ಮಟ್ಟದಲ್ಲಿ ಮುಟ್ಟುವಂತಿರಬೇಕು. ಬೆರಳುಗಳನ್ನು ಮಡಚಿ, ಬಿಗಿಹಿಡಿತದಲ್ಲಿಟ್ಟಿರಬೇಕು.

**'ಧೀರೇಚಲ್'** ಆದೇಶ ಪಾಲನೆಯಲ್ಲಿ, ಕೈಗಳನ್ನು ಬೀಸಿ ತೂಗುವಂತಿಲ್ಲ. ಪ್ರತಿ ಹೆಜ್ಜೆಯನ್ನು ಮುಂದಿಡುವಾಗಲೂ, ಕಾಲು ನೇರವಾಗಿರಲಿ. ಕಾಲ್ಬೆರಳುಗಳು ನೇರವಾಗಿ ಕೆಳಕ್ಕಿರಲಿ. ಪಾದವು ಸ್ವಲ್ಪ ಪಕ್ಕಕ್ಕಿದ್ದರೆ ($30^0$), 'ಥಂ' ಹೇಳಿದಾಗ ಪಾದವನ್ನು ಆ ಕೋನದಲ್ಲಿ ನೆಲಕ್ಕೆ ಊರಲು ಅನುಕೂಲವಾಗುತ್ತದೆ. ಮುಂದಿರುವ ಕಾಲಿನ ಹಿಮ್ಮಡಿಯು ಹಿಂದಿರುವ ಪಾದದ ಕಾಲ್ಬೆರಳುಗಳ ಸಮ ಇರುವಾಗ, ಕೆಲವು ಕ್ಷಣಗಳ ಕಾಲ ವಿರಾಮ ಹೇಳಿಕೊಂಡು, ದೇಹವು ಮುಂದಕ್ಕೆ ತೇಲಿದಂತೆ ಚಲಿಸಿ, ಮುಂದಿರುವ ಪಾದವನ್ನು ನೆಲದ ಮೇಲೆ ಊರಬೇಕು.

**ಕಾಲಗಮನ (Marking time):** ಎಡಗಾಲು ಮೇಲೆತ್ತಿ, ಮೊಣಕಾಲು ಮಡಚಿ. ಕೆಳಗಾಲು ನೇರವಾಗಿ ಕಂಬದಂತೆ ಇದ್ದು, ಪಾದವು ಸಹಜ ಸ್ಥಿತಿಯಲ್ಲಿರುತ್ತದೆ. ಬಲಗಾಲು ನೇರವಾಗಿ ಸೆಟೆದಂತಿರುತ್ತದೆ.

ಈಗ ಎಡಗಾಲನ್ನು ಕೆಳ ತಂದು, ಪಾದವನ್ನು ನೆಲದ ಮೇಲೆ ಊರುತ್ತಿದ್ದಂತೆಯೇ ಬಲಗಾಲನ್ನು ಮೇಲೆತ್ತಿ. ದೃಷ್ಟಿಯು ನೇರವಾಗಿರಬೇಕು. ಕೆಳಗೆ ನೋಡಬಾರದು, ಕೈಗಳು ಪಕ್ಕಗಳಲ್ಲಿರಬೇಕು, ಚಲನೆ ಇರಬಾರದು. ಏಕಗತಿಯಲ್ಲಿ ಕಾಲುಗಳನ್ನು ಒಂದಾದ ಮೇಲೊಂದರಂತೆ ಮೇಲೆ ಕೆಳಗೆ ಚಲಿಸುತ್ತಿರಬೇಕು.

"ಕಾಲಗಮನ" ಮಾಡುತ್ತಿರುವಾಗ, 'ತೇಜ್‌ಚಲ್' ಆದೇಶ ಬಂದರೆ, ಬಂದ ಕೂಡಲೇ ಎಡಗಾಲು ಚಿಮ್ಮಿ, ಮುಂದಕ್ಕೆ ಬರಬೇಕು. ಎಡಗಾಲನ್ನು ಮೇಲೆತ್ತಿರುವಾಗ ಪ್ರಾರಂಭಿಸಿ (ತೇಜ್) ಬಲಗಾಲು ತನ್ನ ಸರದಿ ಮುಗಿಸುವುದರೊಳಗೆ, ಆದೇಶವನ್ನು ಮುಗಿಸಬೇಕು (ಚಲ್). ಈಗ ಎಡಗಾಲು (ಚೆಕ್) ಬಲಗಾಲು (ಒನ್) ಆಗಿ, ಎಡಗಾಲು ಮುಂದಕ್ಕೆ ಹೆಜ್ಜೆ ಹಾಕುತ್ತದೆ. ಎಡಗಾಲು ಮುಂದೆ ಹೋದಂತೆ ಬಲಗೈ ಮುಂದಕ್ಕೆ ಬೀಸಿ ತೂಗುತ್ತದೆ.

**"ಪಥಚಲನೆ"ಯಲ್ಲಿರುವಾಗ ತಿರುಗುವುದು:**

i) **ಪೀಛೇ ಮೂಡ್** (about turn): ಎಡಗಾಲಿನ ಮೇಲೆ ಆದೇಶ ನೀಡಬೇಕು. ಬಲಗಾಲಿನ ಮೇಲೆ 'ಚೆಕ್' ಹೇಳಿಕೊಂಡು, ಕೈಗಳನ್ನು ಪಕ್ಕಕ್ಕೆ ತಂದು ಅಲುಗದಂತೆ ಇಟ್ಟುಕೊಳ್ಳಬೇಕು. ಎಡಗಾಲನ್ನು 15.2 ಸೆಂ.ಮೀ. ಮೇಲೆತ್ತಬೇಕು. ಬಲಹಿಮ್ಮಡಿಯ ಮೇಲೆ ಬಲಗಡೆಗೆ $90^0$ ತಿರುಗಬೇಕು. ಎಡಗಾಲು ಕೆಳಕ್ಕೆ ತರಬೇಕು ಮತ್ತೆ $90^0$ ತಿರುಗಬೇಕು. ಮತ್ತೆ ಎಡಗಾಲು ಸೇರಬೇಕು. 4ನೇ ಎಣಿಕೆಗೆ ಬಲಗಾಲು ಕಾಲ ಗಮನಮಾಡಿ ನೆಲವನ್ನು ಮುಟ್ಟುತ್ತಿದ್ದಂತೆ, ಎಡಗಾಲು ಮುಂದಿಡಬೇಕು.

ii) **ದಹಿನೇ ಮೂಡ್** (Right turn): ಎಡಪಾದದ ಮೇಲೆ ಎಂದರೆ ಬಲಪಾದವು ಎಡಪಾದವನ್ನು ಬಳಸುತ್ತಿರುವಾಗ, ಆದೇಶವನ್ನು ನೀಡಬೇಕು. ಬಲಗಾಲಿನ ಮೇಲೆ ಚೆಕ್ ಹೇಳಿಕೊಂಡು, ಚಿಮ್ಮಿದಂತೆ ಬಲಗಡೆ ತಿರುಗಿ 1,2 ಎಣಿಕೆ ಮಾಡಿ ಎಡಗಾಲನ್ನು ಮುಂದಿಡಬೇಕು.

iii) **ಬಾಯೇ ಮೂಡ್** (Left turn) ಮೇಲಿನಂತೆಯೇ. ಬಲಗಡೆಗೆ ಬದಲು ಎಡಗಡೆ ತಿರುಗುವುದು.

iv) **ಹೊರ ಹೆಜ್ಜೆ** (Step out) ಮುಂದಿಡುತ್ತಿರುವ ಹೆಜ್ಜೆಯ ದೂರವನ್ನು 7.6 ಸೆಂ.ಮೀ. ಹೆಚ್ಚಿಸಿ ಮುಂದುವರೆದು, ಪಕ್ಕಕ್ಕಿಡಬೇಕು.

v) **ಸಣ್ಣ ಹೆಜ್ಜೆ** (Step Short) ಮುಂದಿಡುತ್ತಿರುವ ಹೆಜ್ಜೆಯ ದೂರವನ್ನು 22.8 ಸೆಂ.ಮೀ. ಕಡಿಮೆ ಮಾಡಿ, ನೆಲಕ್ಕೆ ಊರಿ, ಮುಗಿಸಬೇಕು.

vi) **ಪಕ್ಕಹೆಜ್ಜೆ – ಎಡ ಅಥವಾ ಬಲ** (Side step left or Right): ದಳವನ್ನು 12 ಹೆಜ್ಜೆಗಳಷ್ಟು ಪಕ್ಕಗಳಿಗೆ ಸರಿಸಬಹುದು. ಪ್ರತಿ ಸರಿದ ಹೆಜ್ಜೆಯ ದೂರವು, ಹಿಮ್ಮಡಿಯಿಂದ ಹಿಮ್ಮಡಿಗೆ 30.48 ಸೆಂ.ಮೀ. ಹಾಗೆ ಸರಿಯಲು ಹೇಳುವಾಗ, ಒಂದು ಬಾರಿಗೆ 4 ಹೆಜ್ಜೆಗಳಂತೆ ಸರಿಯಲು ಆದೇಶಿಸಬಹುದು. ಅಷ್ಟಾದ ಕೂಡಲೇ ದಳವು ನಿಲ್ಲುತ್ತದೆ. ಪಕ್ಕಕ್ಕೆ ಸರಿಯುವಾಗ ಹೆಜ್ಜೆಯಿಂದ ಹೆಜ್ಜೆಗೆ 30.48 ಸೆಂ.ಮೀ. ಇರುವಂತೆ ಸರಿಯಬೇಕು. ಕೈಗಳು ಪಕ್ಕದಲ್ಲಿ ಅಲುಗದಂತೆ ಇರಬೇಕು.

vii) **ಮುಂದಕ್ಕೆ ಅಥವಾ ಹಿಂದಕ್ಕೆ ಹೆಜ್ಜೆ ಇಡುವುದು** (Paces forward or Rear): ಕೈಗಳು ಪಕ್ಕದಲ್ಲಿರಲಿ ಹೆಜ್ಜೆಯಿಂದ ಹೆಜ್ಜೆಗೆ 79.2 ಸೆಂ.ಮೀ. ಇರಲಿ. ಆದೇಶವು ಒಂದು ಬಾರಿಗೆ 3 ಹೆಜ್ಜೆಗಳಿಗೆ ಸೀಮಿತವಾಗಿರಲಿ. ಕೊನೆಯ ಹೆಜ್ಜೆಯ ದೂರವು 38.1 ಸೆಂ.ಮೀ. ಮಾತ್ರ.

viii) **ಚಕ್ರಾಕಾರ ಅರೆಯ ರೂಪದಲ್ಲಿ ತಿರುಗುವುದು** (Wheeling): ಒಳಗಿನ ಸ್ಕೌಟು 1 ಮೀ 22.8 ಸೆಂ.ಮೀ. (4 ಅಡಿ) ವರ್ತುಲದ ಸೀಮಾ ರೇಖೆಯ ಮೇಲೆ $90^0$ ತಿರುವಿನಲ್ಲಿ ದಿಕ್ಕನ್ನು ಬದಲಾಯಿಸುತ್ತಾ ಹೋಗುತ್ತಾನೆ. ಹೊರಗಿನ ಸ್ಕೌಟು ಹೊರ ಹೆಜ್ಜೆ ಹಾಕುತ್ತಾ ಚಲಿಸಿದರೆ, ಒಳಗಿನ ಸ್ಕೌಟು ಕಣ್ತುದಿಯಲ್ಲಿ ಹೊರಗೆ ಗಮನಿಸುತ್ತಾ ಸಣ್ಣ ಹೆಜ್ಜೆ ಹಾಕುತ್ತಾ ಮುಂದುವರಿಯಬೇಕು. ಚಕ್ರ ತಿರುವು $90^0$ ಒಳಗಿದ್ದರೆ ತಿರುಗುತ್ತಿರುವಾಗ 'ತೇಜ್‌ಚಲ್' ಆದೇಶವನ್ನು ನೀಡಬೇಕು. $90^0$ ಗಳಿಗೆ ಮೀರಿದ್ದರೆ, ಎರಡನೆಯ ಬಾರಿಗೆ ದಾಹಿನೇ ರುಖ್/ ಬಾಯೇ ರುಖ್ ಹೇಳಬೇಕಾಗುತ್ತದೆ.

**ವಂದಿಸುವುದು** (Saluting): ವಂದಿಸುವುದು ಗೌರವ ಸೂಚಕವಾದ ಕಾರ್ಯ. ಸನ್ನಡತೆಯ ಲಕ್ಷಣ, ಶಿಸ್ತುಭಾವನೆ ಹಾಗೂ ಸ್ಕೌಟರನ ಬಗ್ಗೆ ಗೌರವ ತೋರಿಸುವ ಕ್ರಿಯೆ. ವಂದಿಸುವ ರೀತಿಯನ್ನು ಗಮನಿಸಿದರೆ, ಶಿಸ್ತಿನ ಗುಣಮಟ್ಟವನ್ನೂ, ತರಬೇತಿ ಪಡೆದಿರುವ ಬಗ್ಗೆ ಮಾಹಿತಿಯನ್ನೂ, ದಳದ ನೈತಿಕ ಮಟ್ಟವನ್ನೂ ಹೇಳಿ ಬಿಡಬಹುದು. ವಂದಿಸುವುದು ಪರಸ್ಪರರ ಆತ್ಮಗೌರವವನ್ನೂ, ಸದ್ಭಾವನೆಯನ್ನೂ ಸೂಚಿಸುತ್ತದೆ.

i) **ಎದುರಿನಲ್ಲಿ ವಂದಿಸುವುದು** (Salute to the front) (1) ಬಲತೋಳು ನೇರವಾಗಿ, ಪಕ್ಕದಲ್ಲಿರಬೇಕು. ನೆಲಕ್ಕೆ ಸಮಾನಾಂತರ ವಾಗಿ ಮೇಲೆತ್ತಿರಬೇಕು. ಅಂಗೈ ಮುಂದಿರುವಂತೆ ಸ್ಕೌಟ್ ಗುರುತನ್ನು ತೋರಬೇಕು. (2) ಮೊಣಕೈ ಮಡಚುತ್ತಾ, ತೋರ್ಬೆರಳು ಬಲಗಣ್ಣಿನಿಂದ 2.5 ಸೆಂ.ಮೀ. ದೂರದಲ್ಲಿರುವ ಸ್ಥಿತಿಗೆ ತರಬೇಕು. (3) ಕ್ಷಣಕಾಲ (1–2 ಎಣಿಕೆ) ಬಿಟ್ಟು ಕೈಯನ್ನು ಚಕ್ಕನೆ ಕೆಳಕ್ಕೆ ತರಬೇಕು. ಕೈಗಳು ಕೆಳಗೆ ಬರುತ್ತಿದ್ದಂತೆಯೇ ಬೆರಳುಗಳು ಮಡಿಚಿಕೊಳ್ಳಬೇಕು.

ii) **ಬಲಗಡೆಗೆ ವಂದಿಸುವುದು:** (1) ತಲೆಯೂ, ದೃಷ್ಟಿಯೂ ಪೂರ್ಣವಾಗಿ ಬಲಗಡೆಗೆ ತಿರುಗಬೇಕು. ತಲೆಯನ್ನು ತಿರುಗಿಸಿದಾಗ ಬಲತೋಳಿನ ಸ್ಥಿತಿಯು ಬದಲಾಗಬಾರದು. ಬಲಮಣಿಕಟ್ಟು ಹಾಗೂ ಬಲಗೈನ ಸ್ಥಿತಿ ಸಹ ಬದಲಾಗಬಾರದು (2) ಬಲಗಣ್ಣಿನ ದೃಷ್ಟಿಯು, ಬಲ ಅಂಗೈನ ಮೂಲಕ ನೇರ ಹಾಯ್ದು ಹೋಗಬೇಕು. (3) ವಂದಿಸುವಾಗಿನ ದೃಷ್ಟಿಯು ನೇರವಾಗಿ ಸ್ಕೌಟರನ ಮೇಲೆ ನೆಟ್ಟಿರಬೇಕು. (4) ತಲೆ, ಕೈ ಮತ್ತು ದೃಷ್ಟಿಯ ಚಲನೆಯು ಏಕ ಕಾಲದಲ್ಲಿ ಆಗಬೇಕು.

iii) **ಎಡಗಡೆಗೆ ವಂದಿಸುವುದು:** ಮೇಲಿನಂತೆಯೇ ಆದರೆ ಕಣ್ಣಿನ ಮೇಲಿನ ತೋರ್ಬೆರಳು ಸುಸ್ಥಿತಿಗೆ ಬರುವಂತೆ, ಬಲತೋಳು ಸ್ವಲ್ಪ ಎಡಕ್ಕೆ ಬರಬೇಕು.

iv) **ಪಥಚಲನೆಯಲ್ಲಿ ವಂದಿಸುವುದು:** 'ಥಂ' ಸ್ಥಿತಿಯಲ್ಲಿರುವಂತೆಯೇ. ವಂದಿಸುವಾಗ ಎಡತೋಳು, ಎಡಗೈ ಚಲನೆಯಿಲ್ಲದೆ, ಪಕ್ಕದಲ್ಲಿರಬೇಕು. ಅದನ್ನು ತೂಗಬಾರದು, ಬೀಸಬಾರದು.

v) **ಸ್ಕೌಟ್ ಅಧಿಕಾರಿಗಳ ಬಳಿ ಬಂದಾಗ ವಂದಿಸುವುದು:** ಅಧಿಕಾರಿಗಳ ಮುಂದೆ ಎರಡು ಹೆಜ್ಜೆ ದೂರದಲ್ಲಿ ನಿಲ್ಲಬೇಕು, ವಂದಿಸಬೇಕು. ಸಂದೇಶವನ್ನು ತಲುಪಿಸಬೇಕು. ಹಿಂದೆ ಹೊರಡುವ ಮುನ್ನ ಮತ್ತೆ ವಂದಿಸಬೇಕು.

vi) **ಕುಳಿತಿರುವಾಗ ವಂದಿಸುವುದು:** ಸ್ಕೌಟ್ ಅಧಿಕಾರಿಯು ಹತ್ತಿರ ಬರುತ್ತಿದ್ದಂತೆ ಮೇಲೆದ್ದು, ಅಧಿಕಾರಿಗೆ ಮುಖಮಾಡಿ, ಸಾವ್‌ಧಾನ್ ಸ್ಥಿತಿಯಲ್ಲಿ ನಿಲ್ಲಬೇಕು. ಬಲಗೈನಿಂದ ವಂದಿಸಬೇಕು. ಇಬ್ಬರು ಅಥವಾ ಮೂವರು, ಇನ್ನೂ ಹೆಚ್ಚು ಸ್ಕೌಟುಗಳು ಕುಳಿತೋ, ನಿಂತೋ ಇದ್ದರೆ, ಎಲ್ಲರೂ ಎದ್ದು ನಿಂತು, ಅವರಲ್ಲಿ ಹಿರಿಯವನು, ಉಳಿದವರಿಗೆ "ಸಾವ್‌ಧಾನ್" ಆದೇಶ ನೀಡಿ, ತಾನು ಮಾತ್ರ ವಂದಿಸಬೇಕು.

vii) **ಸ್ಕೌಟ್ ಅಧಿಕಾರಿಯನ್ನುದ್ದೇಶಿಸಿ ಮಾತನಾಡುವಾಗ:** ಹಾಗೆ ಮಾಡ ಬೇಕಾದಾಗ, ಸ್ಕೌಟು ಅವರಿಂದ 2 ಹೆಜ್ಜೆದೂರದಲ್ಲಿ ನಿಂತು ವಂದಿಸಬೇಕು. ವಾಪಸ್ ಹೊರಡುವಾಗ ಕೂಡ ವಂದಿಸಬೇಕು.

viii) **ಸ್ಕೌಟ್ ಅಧಿಕಾರಿಯು ಹಾದು ಹೋಗುವಾಗ:** ಸ್ಕೌಟು ಬೆರ್ರೆ ಟೋಪಿ ಧರಿಸಿರಲಿ, ಇಲ್ಲದಿರಲಿ, ನಿಂತಿದ್ದರೆ (ಕುಳಿತಿದ್ದರೆ ಎದ್ದು ನಿಂತು) ಕೂಡಲೆ ಸಾವ್‌ಧಾನ್‌ಗೆ ಬರಬೇಕು. ನಡಿಗೆಯಲ್ಲಿದ್ದರೆ, ಚೂಟಿಯಾಗಿ ತಲೆ ತಿರುಗಿಸಿ, ಅವರನ್ನು ನೋಡಬೇಕು. ತಲೆಗೆ ಬೇರೆ ಟೋಪಿ ಧರಿಸದಿದ್ದರೂ ಸಹ, ಸ್ಕೌಟು ವಂದಿಸಬೇಕು. ಈ ನಿಯಮವನ್ನು ನಮ್ಮ ದೇಶದಲ್ಲಿ ಸಹ ತಪ್ಪದೆ ಪಾಲಿಸಬೇಕು. ಇದರಿಂದ ಚಾಲಾಕಿತನವು ಅಭಿವೃದ್ಧಿ ಹೊಂದುತ್ತದೆ.

xi) **ಮೋಟಾರ್ ವಾಹನದಲ್ಲಿ ಚಲಿಸುವಾಗ/ಸೈಕಲ್ ಸವಾರಿ ಮಾಡುವಾಗ:** ಸೈಕಲ್ ಸವಾರ ಅಥವಾ ಮೋಟಾರು ವಾಹನ ಚಾಲಕನು, ವಾಹನವು ಚಾಲನೆಯಲಿದ್ದಾಗ ವಂದಿಸುವುದಿಲ್ಲ. ಏಕೆಂದರೆ ಅವನು ದೃಷ್ಟಿ ಬದಲಾಯಿಸಿದರೆ ರಸ್ತೆಯಲ್ಲಿ ಅಪಘಾತವಾಗುವ ಸಂಭವವು ಹೆಚ್ಚು. ವಾಹನವು ನಿಂತಿರುವಾಗ ಅವನನ್ನು ಹಾದುಹೋಗುವ ಅಧಿಕಾರಿಯ ಕಡೆ, ತಲೆ ತಿರುಗಿಸಿ ವಂದಿಸಿದಂತೆ ಮಾಡಬೇಕು. ಯಾವುದೇ ಕಾರಣ ದಿಂದಲೂ ಸೈಕಲ್‌ನ ಅಥವಾ ವಾಹನದ ಚಾಲನ ಚಕ್ರದ ಹಿಡಿತವನ್ನು ಸಡಿಲಿಸಬಾರದು.

ದಳಗಳಲ್ಲಿ/ಪೆಟ್ರೋಲ್‌ಗಳಲ್ಲಿ ಈ ವಿವಿಧ ಚಲನೆಗಳ ಬಗ್ಗೆ ಶಿಕ್ಷಣ ನೀಡಬೇಕು. ಪೆ.ಲೀ.ಗಳು ಈ ಕಾರ್ಯದಲ್ಲಿ ಪೂರ್ಣ ಜವಾಬ್ದಾರಿ ತೆಗೆದುಕೊಳ್ಳಬೇಕು.

ಈ ಎಲ್ಲಾ ಕವಾಯತುಗಳ ಚಲನೆ ಹಾಗೂ ವಂದನೆಗಳ ಬಗ್ಗೆ ಸಾಕಷ್ಟು ಕಾಲಾವಕಾಶ ಮಾಡಿಕೊಂಡು, ಸ್ಕೌ.ಮಾ.ರು ಅಧಿಕೃತವಾಗಿ ಶಿಕ್ಷಣ ಪಡೆಯುವುದು ಸೂಕ್ತ. ಆ ಬಳಿಕ ದಳಕ್ಕೆ ಕ್ರಮಬದ್ಧವಾಗಿ ಶಿಕ್ಷಣ ನೀಡಿದರೆ ಹೆಚ್ಚು ಪರಿಣಾಮಕಾರಿ ಯಾಗಿರುತ್ತದೆ.

ಶಿಬಿರಾಗ್ನಿ ಉದಂತ 19ರಲ್ಲಿ ಬಿ.ಪಿ.ರವರು ಕವಾಯತು ಆದೇಶಗಳಾದ ಅಲರ್ಟ್, ಅಟೆನ್‌ಷನ್, ಈಜಿ, ಎಟ್‌ಈಜ್, ಸಿಟ್‌ಈಜಿ, ಡಬಲ್ ಸ್ಕೌಟ್‌ಪೇಸ್, ಕ್ವಿಕ್ ಮಾರ್ಚ್, ಹಾಲ್ಟ್, ರೈಟ್‌ಟರ್ನ್, ಫಾಲೋಯುವರ್ ಲೀಡರ್, ಲೀಡರ್ ರೈಟ್‌ಟರ್ನ್, ಇವುಗಳ ಬಗ್ಗೆಯೂ, ದಳದ ಇತರ ರಚನೆಗಳಾದ ಫ್ರಂಟ್ ಫಾರ್ಮ್ ಲೈನ್, ಫಾರ್ಮ್‌ಲೈನ್, ಓಪನ್ ಕಾಲಂ, ಪೆಟ್ರೋಲ್ ರೈಟ್ ವೀಲ್ ಕ್ಲೋಸ್‌ಕಾಲಂ ಮುಂತಾದವುಗಳ ಬಗ್ಗೆಯೂ ಪ್ರಸ್ತಾಪಿಸಿರುತ್ತಾರೆ.

**ಸಿಟ್ ಈಜಿ:** ಆದೇಶವನ್ನು ನೀಡಿದಾಗ, ಅವರವರಿಗೆ ತೋರಿದ ಯಾವುದೇ ರೀತಿಯಲ್ಲಿ, ಬಾಲಕರು ನೆಲದ ಮೇಲೆ ಕೂಡುವಂತಿರಬೇಕೆಂಬುದು ಬಿ.ಪಿ.ರವರ ಅಭಿಪ್ರಾಯವಾಗಿದೆ. ನೆಲವು ತೇವವಿಲ್ಲದೆ ಒಣಗಿರುವುದಾದರೆ, ಈ ಆದೇಶವನ್ನು ನೀಡಿದರೆ, ಬಾಲಕರಿಗೆ ಸ್ವಲ್ಪ ಮಟ್ಟಿಗೆ ವಿಶ್ರಾಂತಿಯು ದೊರಕಿದಂತಾಗುತ್ತದೆ.

**"ಸ್ಕೌಟ್ ನಡಿಗೆ"**ಯು (Scout pace) ಸ್ಕೌಟುಗಳ ವಿಶಿಷ್ಠ ಚಟುವಟಿಕೆ ಆಗಿದೆ. ಆದೇಶ ಬಂದ ಕೂಡಲೇ ಅವರು 20 ಹೆಜ್ಜೆ 'ತೇಜ್‌ಚಲ್'ನಲ್ಲೂ, 20 ಹೆಜ್ಜೆ 'ದೌಡ್‌ಚಲ್'ನಲ್ಲೂ, ನಡೆಯುವುದು, ಓಡುವುದು ಮಾಡುತ್ತಿರುತ್ತಾರೆ. 'ಥಂ' ಎಂದೋ, 'ತೇಜ್‌ಚಲ್' ಎಂದೋ ಆದೇಶ ಬರುವವರೆಗೂ ಸ್ಕೌಟ್ ನಡಿಗೆಯು ಮುಂದುವರಿಯುತ್ತದೆ.

ಇದರಿಂದ ಸ್ಕೌಟುಗಳು (ಸುಲಭದಲ್ಲಿ) ಅನತಿಕಾಲದಲ್ಲಿ, ಅತಿದೂರವನ್ನು ಕ್ರಮಿಸಲು ಸಹಾಯವಾಗುತ್ತದೆ. ಸ್ಕೌಟ್‌ನಡಿಗಯನ್ನು ಕಾಲಮಾನವಾಗಿಯೂ ಉಪಯೋಗ ಮಾಡಿಕೊಳ್ಳಬಹುದು. ಉದಾ: 12 ನಿ.ಗಳಲ್ಲಿ 1ಮೈಲಿ (1.6 ಕಿ.ಮೀ.) ದೂರವನ್ನು ಕ್ರಮಿಸಬಹುದು ಹಾಗೆಯೇ 7.5 ನಿ.ಗಳಲ್ಲಿ 1 ಕಿ.ಮೀ. ಅಥವಾ 15 ನಿ.ದಲ್ಲಿ 2 ಕಿ.ಮೀ. ಕ್ರಮಿಸಲು ಬರುತ್ತದೆ.

ಇದರಿಂದ ದೂರವು ತಿಳಿದಾಗ ಕಾಲವನ್ನೂ, ಕಾಲವು ತಿಳಿದಾಗ ದೂರವನ್ನೂ ಹೇಳಬಹುದು.

**ಮೂಕಸೂಚನೆಗಳ ಮೂಲಕ ರಚನೆಗಳು:**

ಚುರುಕಾಗಿರುವ ದಳದವರು, ಆದೇಶಗಳನ್ನು ಬಾಯಿ ಮೂಲಕ ನೀಡದೇ ಇದ್ದರೂ, ಈ ಕೆಳ ಕಾಣಿಸಿರುವ ರಚನೆಗಳನ್ನು ಸುಲಭವಾಗಿ ಮಾಡಿಬಿಡಬಹುದು. ಸ್ಕೌ.ಮಾ.ರು ಸೂಚನೆ ನೀಡಿದ ಕೂಡಲೇ, ಸ್ಕೌಟುಗಳು ಓಡುತ್ತಾ ತಮ್ಮ ತಮ್ಮ ಪೆಟ್ರೋಲ್‌ನ ನಿಗದಿತ ಸ್ಥಾನವನ್ನು ಸೇರಿ, ಸೂಚಿಸಿದ ರಚನೆಯನ್ನು ಮಾಡಿ ಮುಗಿಸುತ್ತಾರೆ.



ಉದಾ:

| | ಸೂಚನೆ | ರಚನೆ |
|---|---|---|
| i) | ಎರಡು ಕೈಗಳನ್ನೂ, ಪಕ್ಕಗಳಲ್ಲಿ, ಭುಜಮಟ್ಟದಲ್ಲಿ ಅಂಗೈ ಹೊರಗಿರುವಂತೆ, ಹೊರಚಾಚುವುದು. | .... ಸಾಲು ಮಾಡುವುದು. (ಲೈನ್) |
| ii) | ಅದೇ ರೀತಿ ಕೈಮಡಚಿ ಹೊರಚಾಚಿ, ಮೊಣಕೈ ಬಳಿ ಮಡಚಿ ಕೈಗಳನ್ನು ಮೇಲಕ್ಕೆತ್ತುವುದು. | .... ದೂರಸಾಲು (Open–ಕಾಲಂ) |
| iii) | ಕೈಗಳನ್ನು ಮೇಲಿನಂತೆ ಹೊರಚಾಚಬೇಕು ಆದರೆ ಅವನ್ನು ಮುಂಭಾಗದಲ್ಲಿ ಒಟ್ಟಿಗೆ ಚಾಚಿರಬೇಕು. | .... ಸಮೀಪ ಸಾಲು (Close–ಕಾಲಂ) |
| iv) | ಎರಡು ಕೈಗಳನ್ನೂ ಚಾಚಿ, ದೇಹದ ಮುಂಭಾಗದಲ್ಲಿ ಅರ್ಧವೃತ್ತಾಕಾರದಲ್ಲಿ, ಹಿಂದಕ್ಕೂ, ಮುಂದಕ್ಕೂ ಚಲಿಸುವುದು (ಸಾಮಾನ್ಯವಾಗಿ ದಳದಸಭೆಗಳಿಗೆ) | .... ಕುದುರೆಲಾಳದ ಆಕಾರದಲ್ಲಿ ನಿಲ್ಲುವುದು. |
| v) | ಎರಡೂ ಕೈಗಳನ್ನು, ಭುಜ ಮಟ್ಟದಲ್ಲಿ ಮುಂದಕ್ಕೆ ಅಂಗೈಗಳನ್ನು ಎದುರುಮಾಡಿ ಚಾಚುವುದು. (ಸಾಮಾನ್ಯವಾಗಿ ಅಂತರ ಪೆಟ್ರೋಲ್ ಆಟಗಳಿಗೆ) | .... ಎದುರು ಸಾಲುಗಳು. ಇದಕ್ಕೆ ಇಂಡಿಯನ್ ಸಾಲು ಎಂದೂ ಹೇಳುತ್ತಾರೆ. (ಮುಂದೆ ಪೆಟ್ರೋಲ್ ಲೀಡರು ಅವನ ಹಿಂದೆ ಇತರರು. ಕೊನೆಯಲ್ಲಿ ದ್ವಿತೀಯಕ ಹೀಗೆ ಸ್ಕೌಟ್ ಮಾಸ್ಟರಿಗೆ ಮುಖಮಾಡಿ ನಿಲ್ಲುತ್ತಾರೆ) |

ಸಾಮಾನ್ಯವಾಗಿ ಓಟದಲ್ಲಿರುವಾಗ, ನಿಶ್ಯಬ್ದವಾಗಿರುವಾಗ ಮೂಕ ಸೂಚನೆಗಳನ್ನು ನೀಡಲಾಗುತ್ತದೆ.

ಸ್ಕೌ.ಮಾರು ಸೂಚನೆ ನೀಡಿದ ಕೂಡಲೇ ಸ್ಕೌಟುಗಳು ಓಡುತ್ತಾ ಬೇಗನೆ ಉದ್ದೇಶಿತ ರಚನೆಯನ್ನು ಮಾಡಿ ಮುಗಿಸಬೇಕು. ದಳದ ರಚನೆಯು ಪೂರ್ತಿ ಆಗುವವರೆಗೂ, ಸ್ಕೌ.ಮಾ.ರು ಸೂಚನೆಯನ್ನು ನೀಡುತ್ತಲೇ ಇರಬೇಕು.

ಬಯಲು ಆಟಗಳ ವೇಳೆಯಲ್ಲಿ ಪೆ.ಲೀ.ಗಳು ತಮ್ಮದೇ ಆದ ಸೂಚನೆಗಳನ್ನು ಕೈಗಳ ಮೂಲಕವೂ, ಪೆಟ್ರೋಲ್ ಪತಾಕೆಗಳನ್ನು ಉಪಯೋಗಿಸಿಯೂ ಮಾಡಿಕೊಳ್ಳುತ್ತಾರೆ.

| | ಸೂಚನೆ | ಅರ್ಥ |
|---|---|---|
| i) | ಕೈಗಳು ಅಥವಾ ಬಾವುಟವನ್ನು ಮುಖದ ಎದುರಿಗೆ ಅಡ್ಡಡ್ಡವಾಗಿ ಬೀಸುತ್ತಿರುವುದು. | ಸ್ವಸ್ಥಾನ್, ....... ಪರವಾಗಿಲ್ಲ, ಇಲ್ಲ; |
| ii) | ಕೈ ಅಥವಾ ಬಾವುಟ ಮೇಲೆತ್ತಿ, ನಿಧಾನವಾಗಿ ಭುಜ ಮಟ್ಟದಲ್ಲಿ ಎಡಕ್ಕೂ, ಬಲಕ್ಕೂ ಆಡಿಸುವುದು. | ವಿಸ್ತರಿಸಿ, .......ಇನ್ನೂ ಮುಂದೆ ಹೋಗಿ, ಚದುರಿ ಹೋಗಿ, |
| iii) | ಕೈ ಅಥವಾ ಬಾವುಟವನ್ನು ಮೇಲೆತ್ತಿ, ತೋಳು ಬೀಸುವಷ್ಟು ಪೂರಾ ದೂರ ಬೇಗ, ಬೇಗ ಆಡಿಸುವುದು. | ಹತ್ತಿರ ಬನ್ನಿ, ಒಟ್ಟು ಸೇರಿ, ಇಲ್ಲಿಗೆ ಬನ್ನಿ |
| iv) | ಕೈ ಅಥವಾ ಬಾವುಟವನ್ನು ಒಂದು ನಿರ್ದಿಷ್ಟವಾದ ದಿಕ್ಕಿನಲ್ಲಿ ಮಾತ್ರ ಆಡಿಸುವುದು. | ಆ ದಿಕ್ಕಿಗೆ ಹೋಗಿ |
| v) | ಮುಷ್ಟಿ ಹಿಡಿದ ಕೈ/ಬಾವುಟವನ್ನು ಬೇಗ ಬೇಗ ಮೇಲೆ ಕೆಳಗೆ ಆಡಿಸುವುದು. | ಓಡಿ |
| vi) | ಕೈ/ಬಾವುಟ ತಲೆಯ ಮೇಲೆ ನೇರವಾಗಿ ಹಿಡಿಯುವುದು | ನಿಲ್ಲಿ |

ನಾಯಕರು ಯಾವುದಾದರೂ ಸ್ಕೌಟ್‌ಗೆ ಆದೇಶ/ಸಂದೇಶವನ್ನು ಕೂಗಿ ಹೇಳಿದರೆ ಆ ಸ್ಕೌಟು ಅದನ್ನು ಕೇಳಿಸಿಕೊಂಡ ಕುರುಹಾಗಿ, ಕೈಯನ್ನು ತಲೆಯ ಮೇಲೆ ಇಟ್ಟುಕೊಳ್ಳಬೇಕು. ಹಾಗೆ ಕೇಳಿಸಿಕೊಳ್ಳದೆ ಹೋದರೆ, ಯಾವುದೇ ಸೂಚನೆ ಮಾಡದೆ ನಿಲ್ಲಬೇಕು. ಆಗ ನಾಯಕನು ಆದೇಶ ಅಥವಾ ಸಂದೇಶವನ್ನು ಪುನಃ ಕೂಗಿ ಹೇಳುತ್ತಾರೆ ಅಥವಾ ಸ್ಕೌಟನ್ನು ಹತ್ತಿರ ಬರಲು ಹೇಳುತ್ತಾರೆ.

## ಶೀಟಿಯ ಸಂಕೇತಗಳು

ಸಂಕೇತಗಳನ್ನು ಶೀಟಿಯ ಮೂಲಕವೂ ನೀಡಬಹುದು. ಹೊರಾಂಗಣದ ಬಯಲು ಆಟಗಳ ವೇಳೆಯಲ್ಲಿ, ಇದು ಬಹಳ ಉಪಯೋಗಕ್ಕೆ ಬರುತ್ತದೆ. ಈ ಕೆಳಗೆ ಕೆಲವನ್ನು ಕೊಡಲಾಗಿದೆ.

| | ಸಂಕೇತ | ಅರ್ಥ |
|---|---|---|
| i) | – (ಒಂದು ದೀರ್ಘ ಊದು) | – ನಿಶ್ಯಬ್ದ<br>– ಗಮನವಿಡಿ<br>– ಮುಂದಿನ ಸಂಕೇತಕ್ಕೆ ಕಾಯಿರಿ |

| | | |
|---|---|---|
| ii) | – – – – (ನಿಧಾನವಾದ ದೀರ್ಘ ಊದುಗಳು) | – ಹೊರ ಹೊರಡಿ –ದೂರ ಹೋಗಿ<br>– ಮುಂದುವರೆಯಿರಿ – ವಿಸ್ತರಿಸಿ<br>– ಚದುರಿ ಹೋಗಿ |
| iii) | .–. –. – (ಒಂದಾದ ಮೇಲೊಂದರಂತೆ ಹ್ರಸ್ವ ಮತ್ತು ದೀರ್ಘ ಊದುಗಳು) | – ಎಚ್ಚರಿಕೆ<br>– ಮುನ್ಸೂಚನೆ<br>– ನಿಮ್ಮ ಕಾವಲು ತಾಣ ಸೇರಿರಿ, ಹುಷಾರಾಗಿ |
| iv) | . . . . . (ಖಚಿತವಾದ ಹ್ರಸ್ವ ಧ್ವನಿಗಳು) | – ಒಂದುಗೂಡಿ – ಹತ್ತಿರ ಬನ್ನಿ<br>– ಒಂದೆಡೆ ಸೇರಿ – ಸಾಲು ಮಾಡಿ |
| v) | . . . – (ಮೂರು ಹ್ರಸ್ವ, ಒಂದು ದೀರ್ಘಧ್ವನಿ) | – ಪೆಟ್ರೋಲ್ ಲೀಡರುಗಳಿಗೆ, ಸ್ಕೌಟ್‌ಮಾಸ್ಟರ ಕರೆ ಪೆಟ್ರೋಲ್ ನಾಯಕರೇ ಇಲ್ಲಿ ಬನ್ನಿ. |

ಯಾವುದೇ ಕೆಲಸವಾದರೂ ಸರಿ, ಏನೇ ಕೆಲಸ ಮಾಡುತ್ತಿದ್ದರೂ ಅದನ್ನು ಬಿಟ್ಟು ಕೂಡಲೇ ಓಡಿ ಬಂದು, ಆದೇಶವನ್ನು ಪಾಲಿಸಬೇಕು.

## ಪೆಟ್ರೋಲ್ ರಚನೆಗಳು:

ಸಾಮಾನ್ಯವಾಗಿ, ತಮ್ಮ ತಮ್ಮ ಪೆಟ್ರೋಲ್‌ಗಳಲ್ಲಿ, ಸ್ಕೌಟುಗಳು ಸ್ಕೌಟಿಂಗ್ ಕಾರ್ಯಕ್ರಮಗಳನ್ನು ನಡೆಸುತ್ತಾರೆ. ಆದರೂ ಹಲವಾರು ಅಂಶಗಳ ಬಗ್ಗೆ ಇಬ್ಬಿಬ್ಬರು ಅಥವಾ ಒಬ್ಬೊಬ್ಬರೇ ಕಾರ್ಯ ನಿರ್ವಹಿಸಬೇಕಾಗುತ್ತದೆ.

ಪೆಟ್ರೋಲ್ ಸಂಚಾರ ಹೊರಟರೆ, ಅವರು ಒಟ್ಟಿಗಂತೂ ಇರುವುದಿಲ್ಲ. ಪೆ.ಲೀ.ನು ಅವರುಗಳು ಚದುರಿ ಇರುವಂತೆ ವ್ಯವಸ್ಥೆ ಮಾಡುತ್ತಾನೆ. ಹೀಗೆ ಮಾಡುವುದರಿಂದ ಗ್ರಾಮಾಂತರ ಪ್ರದೇಶದ ಹೆಚ್ಚು ಭಾಗವನ್ನು ಗಮನಿಸಲು ಅನುಕೂಲವಾಗುತ್ತದೆ.

ಪೆಟ್ರೋಲ್ ಸ್ಕೌಟುಗಳು ಹದ್ದಿನಾಕಾರದಲ್ಲಿ ಮುಂದುವರೆಯುವುದಾದರೆ ಅನುಕೂಲಕರವಾಗಿರುತ್ತದೆ. ಆ ಚಲನೆಯ ರಚನೆಯನ್ನು ಹದ್ದಿನಾಕಾರದ ರಚನೆ ಎಂದೇ ಹೇಳಲಾಗುತ್ತದೆ. ಅದೊಂದು ರೀತಿಯ 'ವಜ್ರಮುಖಿ' (Rhombus) ಎಂದೇ ಹೇಳಬಹುದು. ಈ ರಚನೆಯ ಮುಂತುದಿ ಸ್ವಲ್ಪ ಮೊನಚು. ಹಾಗೆಯೇ ಹಿಂದಿನ ತುದಿ ಸಹ ಸ್ವಲ್ಪ ಜಾಸ್ತಿ ಎನ್ನಬೇಕು. ಸ್ಕೌಟುಗಳಿಗೆ ಈ ಬಗ್ಗೆ ಚೆನ್ನಾಗಿಯೇ ತಿಳಿದಿರುತ್ತದೆ.

ಈ ಉಪಯುಕ್ತ ರಚನೆಯಲ್ಲಿ ಪೆ.ಲೀ. ಮಧ್ಯದಲ್ಲಿ ನಿಲ್ಲುತ್ತಾನೆ. ಅವನ ಜೊತೆ ಪೆಟ್ರೋಲ್‌ನ ಕಿರಿಯ ಸ್ಕೌಟ್ ನಂ.6 ಇರುತ್ತಾನೆ. 2ನೆಯ ನಂಬರು ಸ್ಕೌಟು ಪೆ.ಲೀ.ನಷ್ಟೇ ಜವಾಬ್ದಾರಿ ಉಳ್ಳವನಾದ್ದರಿಂದ ಮುಂದೆ ನಿಲ್ಲುತ್ತಾನೆ. ಅವನ ಸ್ಥಾನವು ಒಂದು ರೀತಿಯಲ್ಲಿ ಈಟಿಯ ಮೊನೆಯ ತುದಿ ಎನ್ನಿ. ನಂ.3 ಸ್ಕೌಟು ಹಿಂದಿರುತ್ತಾನೆ. ಇನ್ನು ನಂ.4 ಮತ್ತು ನಂ.5 ಸ್ಕೌಟುಗಳು ಎಡ, ಬಲ ಪಕ್ಕಗಳಿಗೆ ಬರುತ್ತಾರೆ.

ಈ ಹದ್ದಿನಾಕಾರದ ರಚನೆಯಿಂದ ಹಲವಾರು ಅನುಕೂಲಗಳುಂಟು.

i) ಪೆಟ್ರೋಲು, ಪೆಟ್ರೋಲ್ ಲೀಡರನ ಹದ್ದುಬಸ್ತಿನಲ್ಲಿರುತ್ತದೆ. (ii) ನಂ.2 ಸ್ಕೌಟ್‌ಗೆ ಮುಖ್ಯವಾದ ಶಿಕ್ಷಣ ದೊರಕುತ್ತದೆ. ಅವನು ಮುಂದಿರುವುದರಿಂದ, ಸಮಸ್ಯೆಗಳು ಎದುರಾದಂತೆ, ಪೆ.ಲೀ.ಗೆ ತೃಪ್ತಿಯಾಗುವ ರೀತಿಯಲ್ಲಿ, ಅಲ್ಲಿಂದಲ್ಲೇ ಪರಿಹರಿಸುತ್ತಾ ಹೋಗುತ್ತಾನೆ. ನಂ.1 ಮತ್ತು ನಂ.2 ಸ್ಕೌಟುಗಳು ವ್ಯವಹರಿಸುವ ರೀತಿಯನ್ನು ಗಮನಿಸುತ್ತಾ, ಪೆಟ್ರೋಲ್‌ನ ಅತ್ಯಂತ ಅನುಭವೀ ಸ್ಕೌಟುಗಳ ಸಾಹಚರ್ಯದಿಂದ ನಂ.6 ಸ್ಕೌಟು ಬಹಳಷ್ಟು ಕಲಿಯುತ್ತಾನೆ. ಪೆಟ್ರೋಲ್ ಲೀಡರನಾದರೂ ಅವನನ್ನು ತಾಯಿ ಹದ್ದು, ತನ್ನ ಮರಿಯನ್ನು ಕಾಪಾಡುವಂತೆ, ಅಪಾಯಗಳಿಂದಲೂ, ಅವಿವೇಕದ ನಡೆಗಳಿಂದಲೂ ರಕ್ಷಿಸುತ್ತಾನೆ.

ಎಲ್ಲಕ್ಕಿಂತಲೂ ಹೆಚ್ಚಾಗಿ, ಈ ಹದ್ದಿನಾಕಾರ ರಚನೆಯಲ್ಲಿ, ಪೆಟ್ರೋಲ್ ಹೆಚ್ಚು ಪ್ರದೇಶವನ್ನು ಅವಲೋಕಿಸಲು ಬರುತ್ತದೆ. "ಒಟ್ಟುಗೂಡಿ ಕೆಲಸ ಮಾಡುವ" ಬುದ್ಧಿಯನ್ನು ಹೆಚ್ಚಿಸುತ್ತದೆ.

ಈ ರಚನೆಯನ್ನು ಸ್ಕೌಟುಗಳ ವಿಶೇಷತೆ ಎಂದೇ ಹೇಳಬೇಕು.



## ಅಧ್ಯಾಯ-23

# ಆಟಗಳು ಮತ್ತು ದೈಹಿಕ ಚಟುವಟಿಕೆಗಳು

ಬಾಲಕರಿಗೆ ಅತ್ಯಂತ ಆಕರ್ಷಕ ಚಟುವಟಿಕೆ ಎಂದರೆ ಆಟಗಳು. ಅವರ ದೈಹಿಕ ಹಾಗೂ ಮಾನಸಿಕ ಬೆಳೆವಣಿಗೆಗೆ ಇದೊಂದು ಅತ್ಯಮೂಲ್ಯವಾದ ಸಾಧನವಾಗಿದೆ. ಔಪಚಾರಿಕ (Formal) ವ್ಯಾಯಾಮಕ್ಕಿಂತಲೂ ಇದು ಉತ್ತಮವಾದುದು. ಏಕೆಂದರೆ ಕೈಕಾಲುಗಳಿಗೆ ವ್ಯಾಯಾಮ, ದೇಹದ ಎಲ್ಲಾ ಭಾಗಗಳ ಚಲನವಲನಗಳಿಂದ. ಮಾಂಸಖಂಡಗಳ ಬೆಳವಣಿಗೆ ಆಗುತ್ತದೆ. ಜೊತೆಗೆ ಆಟವಾಡುವಷ್ಟೂ ಕಾಲ, ಮಾನಸಿಕವಾದ, ಸ್ವಾರಸ್ಯಪೂರ್ಣ ನಿಮಗ್ನತೆಯೂ ಸೇರಿ (ಎಂದರೆ ಮುಂದೇನು? ಎಂದು ಮನಸ್ಸು ಕೆಲಸಮಾಢುತ್ತಾ ಹೋಗುವುದರಿಂದ) ಆಟಗಳು ಹೆಚ್ಚು ಉಪಯುಕ್ತವೆನಿಸುತ್ತವೆ.

ಆಟಗಳಿಂದ ಸಚ್ಚಾರಿತ್ರ್ಯ, ಸನ್ನಡತೆ, ಸಂಭಾವ್ಯತೆ, ಕ್ರೀಡಾಮನೋಭಾವನೆ, ಸಮೈಕ್ಯತಾಭಾವನೆ, ನಿಸ್ವಾರ್ಥಭಾವನೆ, ಛಲ (ಪಟ್ಟುಹಿಡಿದು ಸಾಧಿಸುವುದು) ಮತ್ತು ಶಿಸ್ತು ಇವುಗಳು ಅಭಿವೃದ್ಧಿ ಹೊಂದುತ್ತವೆ.

ಬಿ.ಪಿ.ರವರು, ಸೈನ್ಯದ ಉಪಯೋಗಕ್ಕಾಗಿ ಬರೆದ "ಎಯ್‌ಡ್ಸ್ ಟು ಸ್ಕೌಟಿಂಗ್" ಪುಸ್ತಕದಲ್ಲಿ ಹೀಗೆ ಹೇಳುತ್ತಾರೆ. "ಸೈನ್ಯ ಸ್ಕೌಟಿಂಗ್‌ನ ಒಂದು ಮುಖ್ಯವಾದ ಉದ್ದೇಶವೆಂದರೆ ತಂಡ ಆಟಗಳು (Team games) ಮತ್ತು ಚಟುವಟಿಕೆಗಳನ್ನು ನೀಡುವುದು." ಇದರಿಂದ ಬಾಲಕರ ಆರೋಗ್ಯ ಮತ್ತು ಶಕ್ತಿಗಳು ಅಭಿವೃದ್ಧಿ ಹೊಂದುತ್ತವೆ. ಮತ್ತು ಸಚ್ಚಾರಿತ್ರ್ಯ ಬೆಳವಣಿಗೆಗೆ ಅನುಕೂಲವಾಗುತ್ತದೆ. ಆಟಗಳು ಆಕರ್ಷಕವಾಗಿರಬೇಕು ಮತ್ತು ಸ್ಪರ್ಧಾತ್ಮಕವಾಗಿರಬೇಕು. ಹಾಗಿದ್ದರೆ ಮಾತ್ರ ನಾವು ಬಾಲಕರಲ್ಲಿ ಉತ್ಸಾಹ, ಕೆಚ್ಚು, ನಿಯಮಪಾಲನೆ, ಶಿಸ್ತು, ಸಂಯಮ, ಚುರುಕುತನ, ತಾಳ್ಮೆ, ನಾಯಕತ್ವ ಮತ್ತು ನಿಸ್ವಾರ್ಥ ಹಾಗೂ ಸ್ವವರ್ಗ ಪರ (Unselfish team play) ಆಟಗಾರಿಕೆಗಳನ್ನು ಬೆಳೆಸಬಹುದು.

ದಳದ ಸಭೆಗಳಿಗಾಗಿ ದಳದವರೆಲ್ಲರೂ ಒಟ್ಟುಗೂಡಿ, ಪ್ರತಿಬಾರಿಯೂ ವಿವಿಧ ರೀತಿಯ ಆಟಗಳನ್ನಾಡಲು ಸ್ಕೌಟುಗಳಿಗೆ ಅವಕಾಶವೊದಗಿಸಬೇಕು. ಆಟಗಳು ದಿನದ ಕಾರ್ಯಕ್ರಮದ ಅಂಗವಾಗಬೇಕು. ಕಾರ್ಯಕ್ರಮದಲ್ಲಿ ಪರೀಕ್ಷಾಂಶಗಳು ಮತ್ತು ಆಟಗಳು ಅವಿಭಾಜ್ಯ ಅಂಗವಾಗಬೇಕು.

ಆಟಗಳು ಅನೇಕ ರೀತಿಯವು. ವೈವಿಧ್ಯಮಯವಾದುವುಗಳು. ಅವುಗಳನ್ನು 8 ಮುಖ್ಯ ಗುಂಪುಗಳನ್ನಾಗಿ ವಿಂಗಡಿಸಬಹುದು.

| | | | |
|---|---|---|---|
| 1) | ಸಾಮಾನ್ಯ / ದಳದ ಆಟಗಳು | 2) | ತಂಡ ಆಟಗಳು |
| 3) | ಮಜಲು ಆಟಗಳು | 4) | ಇಂದ್ರಿಯ ಶಿಕ್ಷಣ ಆಟಗಳು |
| 5) | ಪರೀಕ್ಷಾಂಶ ಆಟಗಳು | 6) | ನಿಶ್ಯಬ್ದ ಆಟಗಳು |
| 7) | ಪೆಟ್ರೋಲ್ ಆಟಗಳು | 8) | ಹೊರಾಂಗಣ ಬಯಲು ಆಟಗಳು |

ಆಟಗಳ ಬಗ್ಗೆ ಅನೇಕ ಒಳ್ಳೆಯ ಪುಸ್ತಕಗಳು ಲಭ್ಯವಿದೆ. ಈಗ ಬಹುಶಃ ಅಲಭ್ಯವಿರುವ ಇಂಗ್ಲೀಷ್‌ನ ಬಿ.ಪಿ.ರವರೇ ಬರೆದಿದ್ದ 'ಸ್ಕೌಟ್ ಗೇಮ್ಸ್', ಗಿಲ್‌ಕ್ರಾಫ್ಟ್ ಸರಣಿಯ 'ಇಂಡೋರ್ ಗೇಮ್ಸ್ ಫಾರ್ ಸ್ಕೌಟ್ಸ್' ಮತ್ತು ಔಟ್‌ಡೋರ್ ಗೇಮ್ಸ್ ಫಾರ್ ಸ್ಕೌಟ್ಸ್ ಹಾಗೂ "ದಿ॥ ಎಂ.ಹೆಚ್. ಆರ್.ರವರ ಕನ್ನಡದ "ಸ್ಕೌಟ್ ಆಟಗಳು" ಹಾಗೂ ರಾಷ್ಟ್ರೀಯ ಕಛೇರಿಯಿಂದ ಪ್ರಸ್ತುತ ಪಡಿಸಿರುವ "ಗೇಮ್ಸ್ ಗೆಲೋರ್" ಪುಸ್ತಕಗಳನ್ನು ಪರಾಮರ್ಶಿಸಿ, ಭಾಷಾಂತರಿಸಿ ಪುನರ್ಮುದ್ರಿಸಬಹುದಾಗಿದೆ.

ಆಟಗಳನ್ನಾಡಿಸುವ ಆಸಕ್ತಿ ಇರುವ ಸ್ಕೌಟರುಗಳಿಗೆ, ಇವುಗಳು ಬಹಳ ಉಪಯುಕ್ತವೆನಿಸುತ್ತವೆ. ಆದರೂ ಸ್ಕೌಟರನು ತನ್ನದೇ ಆದ ಆಟಗಳ ಪುಸ್ತಕವನ್ನು ಇಟ್ಟುಕೊಂಡು, ಒಂದೆರಡು ವರ್ಷ ಕಾಲ, ಆಡಿಸಿದ ಆಟಗಳನ್ನು ಗುರುತಿಸಿಕೊಳ್ಳುತ್ತಾ, ಮಕ್ಕಳ ಪ್ರತಿಕ್ರಿಯೆಯನ್ನು ಗಮನಿಸುತ್ತಾ, ಆ ಬಗ್ಗೆ ಟಿಪ್ಪಣಿ ಮಾಡಿಕೊಳ್ಳುತ್ತಾ ಹೋದಲ್ಲಿ ಸಣ್ಣ ಪುಟ್ಟ ಮಾರ್ಪಾಟುಗಳೊಂದಿಗೆ, ಅನೇಕ ಆಟಗಳು ಅವನ ಕೈ ತುದಿಯಲ್ಲಿರುತ್ತವೆ. ಬೇಕೆಂದಾಗ ಪರಾಮರ್ಶಿಸಿ, ಮಕ್ಕಳಿಗೆ ಹಿಡಿಸುವಂತಹ, ಸಮಯಕ್ಕೆ ತಕ್ಕಂತಹ ಆಟಗಳನ್ನು ಆಡಿಸಲು ಬರುತ್ತದೆ.

ಹಾಗೆ ಟಿಪ್ಪಣಿ ಮಾಡಿಕೊಳ್ಳುವಾಗ ಈ ಕೆಳಕಂಡ ಐದಾರು ಅಂಶಗಳನ್ನು ಮರೆಯದೆ ಗುರುತಿಸಿಕೊಳ್ಳಬೇಕು.

| | | | |
|---|---|---|---|
| (i) | ಆಟದ ಹೆಸರು | (iv) | ಆಟಕ್ಕೆ ಬೇಕಾದ ವಸ್ತುಗಳು |
| (ii) | ಆಟದ ವಿವರ | (v) | ಆಡಿಸಿದ ತಾ॥ ಮತ್ತು ಮಕ್ಕಳ ಪ್ರತಿಕ್ರಿಯೆ |
| (iii) | ಯಾವ ಪುಸ್ತಕ (ಪುಟ ಸಂಖ್ಯೆ) ದಿಂದ ಆಯ್ಕೆ ಮಾಡಿಕೊಂಡದ್ದು | (vi) | ಮಾಡಿಕೊಳ್ಳಬಹುದಾದ ಮಾರ್ಪಾಟುಗಳು |

ನೀವೇ ಯೋಜಿಸಿಕೊಂಡ ಆಟಗಳು ಅನೇಕ ವೇಳೆಗಳಲ್ಲಿ ಬಾಲಕರಿಗೆ ಆಕರ್ಷಕವಾಗಿಯೂ, ಸ್ವಾರಸ್ಯಕರವಾಗಿಯೂ ಇರುತ್ತವೆ. ಸ್ಕೌ॥ಮಾ॥ರು ಈ ದಿಶೆಯಲ್ಲಿ ತನ್ನದೇ ಆದ ರೀತಿನೀತಿಗಳನ್ನು ಅನುಸರಿಸಿ, ಹೊಸದಾಗಿ ಕಾಣಬಹುದಾದಂತಹ ಆಟಗಳನ್ನು ಆಡಿಸಲು ಪ್ರಾರಂಭಿಸಬೇಕು.

ಗೌರವಾನ್ವಿತ ನ್ಯಾಯ ಸಭೆಯು ಹೊಸ ಆಟಗಳನ್ನಾಡಿಸುವ ಬಗ್ಗೆ ಯೋಜಿಸಿಕೊಳ್ಳುವುದೂ ಸೂಕ್ತವಾಗಿರುತ್ತದೆ. ಪೆ.ಲೀ.ಗಳು ಮತ್ತು ದ್ವಿತೀಯಕರುಗಳನ್ನು ಸೇರಿಸಿ ಈ ಹೊಸ ಆಟಗಳನ್ನು ಆಡಿಸಬಹುದು.

ಸಾಮಾನ್ಯವಾಗಿ ದಳದ ಆಟಗಳನ್ನು, ದಳದ ಸಭೆಗಳ ಪ್ರಾರಂಭದಲ್ಲಿ ಆಡಿಸಬಹುದು. ಅವುಗಳು ತೆಗೆದುಕೊಳ್ಳುವ ಅವಧಿಯನ್ನು ಅನುಸರಿಸಿ 1/2/3 ಆಟಗಳನ್ನು ಅಡಿಸಬಹುದು. ಈ ಆಟಗಳನ್ನಾಡಿಸುವುದರಿಂದ, ಬಾಲಕರು ಚುರುಕುಗೊಳ್ಳುತ್ತಾರೆ. ಶಿಸ್ತು ಅಭಿವೃದ್ಧಿ ಹೊಂದುತ್ತದೆ. ಈ ಆಟಗಳು ದೈಹಿಕ ಶ್ರಮವುಳ್ಳವುಗಳಾಗಿರಬೇಕು. ಎಲ್ಲಾ ಸ್ಕೌಟುಗಳೂ ಭಾಗವಹಿಸುವಂತಿರಬೇಕು.

ಸಾಮಾನ್ಯ ಆಟಗಳ ಬಳಿಕ, ತಂಡ ಆಟಗಳನ್ನಾಡಿಸಬಹುದು. ದಳವನ್ನು 2 ಗುಂಪುಗಳಾಗಿ ಮಾಡಬೇಕು. ತಂಡ ಆಟಗಳನ್ನು ಹೆಚ್ಚು ಹೆಚ್ಚಾಗಿ ಆಡಿಸಬೇಕು. ಇದರಿಂದ ದೈಹಿಕ ಹಾಗೂ ಮಾನಸಿಕ ಚುರುಕುತನವು ಹೆಚ್ಚುತ್ತದೆ. ಇವು ಸಾಮಾನ್ಯವಾಗಿ ಹೊರಾಂಗಣ ಆಟಗಳಾಗಿರುತ್ತವೆ. ಹೊರಾಂಗಣ ಸಭೆಗಳಲ್ಲಿಯೂ, ಶಿಬಿರಗಳಲ್ಲಿಯೂ ಈ ಆಟಗಳು ಉತ್ತಮವೆನಿಸುತ್ತವೆ.

ಅಂತರ ಪೆಟ್ರೋಲ್ ಆಟಗಳು ಹೆಚ್ಚು ಮಹತ್ವವುಳ್ಳವುಗಳಾಗಿವೆ. ಅದೇ ರೀತಿ ರಿಲೇ (ಮಜಲು) ಆಟಗಳೂ ಸಹ. ಇವು ಸ್ಪರ್ಧಾತ್ಮಕವಾದ ಆಟಗಳು. ಇವುಗಳನ್ನು ಹೆಚ್ಚಾಗಿ ಆಡಿಸಬಾರದು. ಪೆಟ್ರೋಲ್‌ಗಳಲ್ಲಿ, ಅವಶ್ಯಕತೆಗಿಂತಲೂ ಹೆಚ್ಚು ಸ್ಪರ್ಧೆಯ ಭಾವನೆಯು ಒಳ್ಳೆಯದಲ್ಲ. ಅಂತರ ಪೆಟ್ರೋಲು ಆಟಗಳು, ತಿಳುವಳಿಕೆಯನ್ನೂ, ಕೌಶಲಗಳನ್ನೂ, ಪುನರಾವರ್ತಿಸಲು, ಸ್ಕೌಮಾರಿಗೆ, ಸುಲಭ ಸಾಧನಗಳಾಗಿ ಒದಗಿ ಬರುತ್ತವೆ.

**ಇಂದ್ರಿಯ ಶಿಕ್ಷಣ ಆಟಗಳು:**

ಇವು ಮುಖ್ಯವಾದ ಹಾಗೂ ಉಪಯುಕ್ತವಾದ ಆಟಗಳು. ಇವುಗಳ ವೈವಿಧ್ಯತೆಗೆ ಕೊನೆಯಿಲ್ಲ. ಸ್ಕೌ.ಮಾ.ರು, ಬಾಲಕರ ಎಲ್ಲಾ ಇಂದ್ರಿಯಗಳ ಬೆಳವಣಿಗೆಯ ಬಗ್ಗೆ ಗಮನ ಹರಿಸಬೇಕು. ಸ್ಕೌಟ್ ಮಾಸ್ಟರರ ಆಟಗಳ ಟಿಪ್ಪಣಿ ಪುಸ್ತಕದಲ್ಲಿ ಈ ಆಟಗಳ ಬಗ್ಗೆ ಪ್ರಸ್ತಾಪವಿರಬೇಕು. ವೈವಿಧ್ಯಮಯ ಆಟಗಳನ್ನು

ಗುರುತಿಸಿರಬೇಕು. ಅಲ್ಲದೆ ಅವುಗಳು ಪ್ರಗತಿಪರ ಶಿಕ್ಷಣಕ್ಕೆ ಹೇಗೆ ಮುಖ್ಯವಾದುವು? ಎಂಬ ಬಗ್ಗೆ ಸಹ ಅಂಶಗಳನ್ನು ನಮೂದಿಸಿರಬೇಕು. ಉದಾ: ಪ್ರಾರಂಭದಲ್ಲಿ 'ಕಿಮ್'ನ ಆಟವು ಸರಳವಾಗಿರಬೇಕು. ಪ್ರಗತಿ ಹೊಂದುತ್ತಾ ಹೋದಂತೆ, ಅದು ಹೆಚ್ಚು ಹೆಚ್ಚು ಕ್ಲಿಷ್ಟವಾಗುತ್ತಾ ಹೋಗಬೇಕು. ಅದೇ ರೀತಿ ಇತರ ಇಂದ್ರಿಯ ಶಿಕ್ಷಣ ಆಟಗಳೂ ಸಹ.

**ಪರೀಕ್ಷಾಂಶಗಳ ಆಟಗಳು:** ಸ್ಕೌಟಿಂಗ್ ಬಗ್ಗೆ ತಿಳುವಳಿಕೆ ನೀಡುವುದಕ್ಕೂ, ಕೌಶಲಗಳನ್ನು ಕಲಿಸುವುದಕ್ಕೂ ಇವು ಉಪಯೋಗಕ್ಕೆ ಬರುತ್ತವೆ. ಈ ಆಟಗಳನ್ನು ಮತ್ತೆ ಮತ್ತೆ ಆಡಿಸುವುದರಿಂದ ಬಾಲಕರ ತಿಳುವಳಿಕೆ ಹಾಗೂ ಕೌಶಲಗಳ ಅರಿವಿನ ಮಟ್ಟವು ಹೆಚ್ಚುತ್ತದೆ. ಯಾವುದೇ ಅಂಶದ ಬಗ್ಗೆ ಅವರು 'ತಯಾರ್' ಇರಲು ಸಹಾಯಕವಾಗಿರುತ್ತದೆ.

**ನಿಶ್ಯಬ್ದ ಆಟಗಳು:** ಇವುಗಳಿಂದ ಬಹಳ ಉಪಯೋಗವುಂಟು. ಇವುಗಳನ್ನು ಆಗಾಗ್ಗೆ ಆಡಿಸುವುದು ಬಹಳ ಒಳ್ಳೆಯದು. ಈ ಆಟಗಳನ್ನಾಡುವಾಗ ಆದಷ್ಟೂ ನಿಶ್ಯಬ್ದವಾಗಿರಬೇಕು. ಸದ್ದಿಲ್ಲದೇ ಇರುವುದೇ ಈ ಆಟಗಳ ಜೀವಾಳ. ಶಿಬಿರಾಗ್ನಿಯ ಸಮಯದಲ್ಲಿ ಮತ್ತು ಹೊರಾಂಗಣ ಕಾರ್ಯಕ್ರಮದ ಅಂಗವಾಗಿ ಈ ಆಟಗಳನ್ನಾಡಿಸಬಹುದು.

**ಪೆಟ್ರೋಲ್ ಆಟಗಳು:** ಪೆಟ್ರೋಲ್ ಸದಸ್ಯರು ಅವರವರೇ ಆಡಿಕೊಳ್ಳಲು ಬರುತ್ತದೆ. ಸ್ಕೌಟ್ ಮಾಸ್ಟರರು ಈ ಆಟಗಳ ಬಗ್ಗೆ ಆದಷ್ಟೂ ಮಾಹಿತಿ ಮತ್ತು ತಂತ್ರಜ್ಞಾನವನ್ನು ಪೆ.ಲೀ.ನಿಗೆ ಕೊಡಬೇಕು.

**ಬಯಲು ಆಟಗಳು:** ಇದರಲ್ಲಿ ಧಾಳಿಯಿಡುವ, ರಕ್ಷಿಸಿಕೊಳ್ಳುವ 2 ತಂಡಗಳು ಬರುತ್ತವೆ. ಆಟದ ಕ್ಷೇತ್ರವು ವಿಶಾಲವಾಗಿರುತ್ತದೆ. ತಂಡಗಳು ಒಂದಕ್ಕೊಂದು ಕಾಣದಂತೆ, ಮರೆಯಲ್ಲಿದ್ದುಕೊಂಡು ಆಡಲು ಅನುಕೂಲಕರವಾಗುವಂತೆ, ಸಾಕಷ್ಟು ಅಡುಗು ತಾಣಗಳಿರುವಂತಹ ಪ್ರದೇಶವಾಗಿರಬೇಕು. ಆಟದ ಕ್ಷೇತ್ರವನ್ನು ಮುಂದಾಗಿ, ಎಚ್ಚರಿಕೆವಹಿಸಿ, ಆರಿಸಿಕೊಳ್ಳಬೇಕು. ಅನುಕೂಲಕರವಾದ ಇಂತಹ ಪ್ರದೇಶಕ್ಕಾಗಿ, ಸಾಮಾನ್ಯವಾಗಿ ಗ್ರಾಮಾಂತರ ಪ್ರದೇಶದಲ್ಲಿ ಸುಮಾರು ದೂರ ಹೋಗಬೇಕಾದರೂ ಸರಿ, ಮುಂಚಿತವಾಗಿ ಸಮೀಕ್ಷೆ ನಡೆಸಿ ಆರಿಸಿಕೊಳ್ಳಬೇಕು.

**ಆಟಗಳ ಪೆಟ್ಟಿಗೆ:** ದಳದಲ್ಲಿ ಸಾಮಾನ್ಯವಾಗಿ ಆಡಿಸುವ, ಆಡುವ ಆಟಗಳಿಗೆ ಬೇಕಾಗುವಂತಹ ಅವಶ್ಯಕ ವಸ್ತುಗಳನ್ನು ಒಂದು ಪೆಟ್ಟಿಗೆಯಲ್ಲಿ ಶೇಖರಿಸುತ್ತಾ ಹೋಗಬೇಕು.

ಟೆನ್ನಿಸ್ ಬಾಲ್‌ಗಳು, ಸಣ್ಣ ಚೀಲಗಳು, ಫುಟ್‌ಬಾಲ್‌ಗಳು, ಫುಟ್‌ಬಾಲ್ ಪಂಪ್, ಹಗ್ಗ, ಸೀಮೆಸುಣ್ಣ ಹೀಗೆ ಒಂದೇ ಎರಡೇ, ಎಲ್ಲವನ್ನೂ ದಾಸ್ತಾನು ಮಾಡುತ್ತಾ ಬರಬೇಕು. ಬೇಕು ಎನಿಸಿದಾಗ ಕೂಡಲೇ ದೊರಕುವಂತೆ ಜೋಡಿಸಿರಬೇಕು. ಪೆಟ್ಟಿಗೆಯು ಸುಮಾರಾಗಿ ದೊಡ್ಡದೇ ಇರಬೇಕು. ಈ ಪೆಟ್ಟಿಗಯನ್ನು ಆಟದ ಪೆಟ್ಟಿಗೆಯೆಂದೇ ಕರೆದರಾಯಿತು. ಆಗಾಗ್ಗೆ ಅವಶ್ಯಕ ವಸ್ತುಗಳನ್ನು ಸೇರಿಸುತ್ತಲೇ ಇರಬೇಕು.

ಹೆಚ್ಚು ವಸ್ತುಗಳ ಅವಶ್ಯಕತೆ ಇರುವ, ಕ್ಲಿಷ್ಟಕರವಾದ ಆಟಗಳನ್ನು ಕೈ ಬಿಡಬೇಕು. ಅಂತಹ ಆಟಗಳಿಂದ ಹೆಚ್ಚು ಉಪಯೋಗವಿರುವುದಿಲ್ಲ.

ಆಟಗಳ ಪೆಟ್ಟಿಗೆಯನ್ನು ಆಗಾಗ್ಗೆ ತೆಗೆದು ಚೊಕ್ಕಟ ಮಾಡುತ್ತಿರಬೇಕು. ಸೇರಿಸಿದ ವಸ್ತುಗಳು ಯಾವುದೇ ಸಮಯದಲ್ಲಿ ಉಪಯೋಗಕ್ಕೆ ಬರುವಂತೆ ಸುಸ್ಥಿತಿಯಲ್ಲಿರಬೇಕು.

ಹಳೆಯದಾಗಿ ಉಪಯೋಗ ಬರದಂತೆ ಆದ ವಸ್ತುಗಳನ್ನು ವಿಲೇವಾರಿ ಮಾಡುವ ವ್ಯವಸ್ಥೆಯೂ ಇರಬೇಕು.

ಪೂರ್ವ ಸಿದ್ಧತೆ ಮಾಡಿಕೊಂಡು, ವ್ಯವಸ್ಥಿತ ರೀತಿಯಲ್ಲಿ ಶಿಸ್ತಿನಿಂದ ಆಡಿಸದೇ ಹೋದರೆ, ಆಟಗಳಿಂದಾಗುವ ಉಪಯುಕ್ತತೆಯು ಶೂನ್ಯವಾಗುತ್ತದೆ.

ಆಟಗಳನ್ನು ಪ್ರಾರಂಭಿಸುವ ಮುನ್ನ ಆಟಕ್ಕೆ ಸಂಬಂಧಿಸಿದ ಎಲ್ಲಾ ನೀತಿ ನಿಯಮಗಳನ್ನು ವಿವರಿಸಿ, ಸ್ಕೌಟುಗಳಿಗೆ ಅರ್ಥಮಾಡಿಸಬೇಕು.

ಆಡುವ ಬಾಲಕರಂತೂ ಚಾಚೂ ತಪ್ಪದಂತೆ, ನಿಯಮಪಾಲನೆ ಮಾಡಬೇಕು. ಸಾಮಾನ್ಯವಾಗಿ, ಆಟವನ್ನು ಆಡುತ್ತಿರುವಾಗಿನ ಉದ್ರಿಕ್ತ ಸ್ಥಿತಿಯಲ್ಲಿ ಬಾಲಕರು ನಿಯಮವನ್ನು ಬಿಟ್ಟು ಆಡಲು ಪ್ರಯತ್ನಿಸುತ್ತಾರೆ. ಆದ್ದರಿಂದ ವಿವರಣೆ ನೀಡುವಾಗ ಅದು ಕ್ರಮಬದ್ಧವಾಗಿರಬೇಕು. ಚುಟುಕಾಗಿ ಇರಬೇಕು ಮತ್ತು ಸ್ಪಷ್ಟವಾಗಿರಬೇಕು.

ಆಟವನ್ನು ಪ್ರಾರಂಭಿಸುವುದಕ್ಕೆ ಮುಂಚೆ ಹಾಗೂ ಆಟವನ್ನು ಕೊನೆ ಮಾಡುವುದಕ್ಕೆ ಮುಂಚೆ, ದಳವನ್ನು 'ಸಾವ್‌ಧಾನ್' ಸ್ಥಿತಿಗೆ ತರಬೇಕು.

ಗುಂಪಿನ ವರಿಷ್ಠರ ಸಭೆಯಲ್ಲಿ ಆಗಾಗ್ಗೆ ಆಟಗಳ ಬಗ್ಗೆ ಚರ್ಚಿಸಿ, ಮರಿಗಳ ಹಿಂಡು ಮತ್ತು ಸ್ಕೌಟ್ ದಳಗಳಲ್ಲಿ ಆಟಗಳು ಪರಸ್ಪರ ಸೇರುವೆ ಆಗದಂತೆ ಎಚ್ಚರವಹಿಸಬೇಕು. ಮರಿಗಳು ಮರಿಗಳ ಆಟಗಳನ್ನಾಡಬೇಕು. ಸ್ಕೌಟುಗಳು ಅವರಿಗೆ ಸರಿ ಹೊಂದತಕ್ಕ ಆಟಗಳನ್ನಾಡಬೇಕು. ಚರ್ಚೆ ಮಾಡುವುದರಿಂದ ಸೇರುವೆ ಆಗದಂತೆ ಎಚ್ಚರಿಕೆವಹಿಸಬಹುದು.



## ಅಧ್ಯಾಯ–24

# ಅವಲೋಕನೆಯಲ್ಲಿ ಶಿಕ್ಷಣ

ಅವಲೋಕನೆಯಲ್ಲಿ ಶಿಕ್ಷಣವು ಬಹು ಮುಖ್ಯವಾದುದು. ಸ್ಕೌಟಿಂಗ್‌ನ ಬಹುತೇಕ ಅಭ್ಯಾಸಗಳಲ್ಲಿ ಉದಾ: ಗಂಟು ಹಾಕುವುದು, ನಕ್ಷೆ ತಯಾರಿಕೆ, ಮಾರ್ಗ ಕಲ್ಪನೆ, ಪ್ರಥಮ ಚಿಕಿತ್ಸೆ, ಅರಣ್ಯ ಕೌಶಲ, ಅಂದಾಜು ಮಾಡುವುದು ಇತ್ಯಾದಿ, – – ಅವಲೋಕನೆಯು ಮೂಲ ಕ್ರಿಯೆ ಆಗಿದೆ. ಸ್ಕೌಟುಗಳು ಮೂಲತಃ ಎಚ್ಚರಿಕೆಯಿಂದಿದ್ದು, ಅವಲೋಕನೆ ಮಾಡಬಹುದಾದರೆ ಮಾತ್ರ, ಈ ಅನೇಕ ಸ್ಕೌಟ್ ಕೌಶಲಗಳನ್ನು ಉತ್ತಮ ರೀತಿಯಲ್ಲಿ, ಉಪಯುಕ್ತಕರವಾಗಿ ಉಪಯೋಗಿಸಬಹುದು.

ಜೀವನದ ಎಲ್ಲಾ ರಂಗಗಳಲ್ಲಿಯೂ, ಅನುಸರಿಸುವ ಎಲ್ಲಾ ವೃತ್ತಿಗಳಲ್ಲೂ, ಅವಲೋಕನಾ ಚಾತುರ್ಯದ ಪಾತ್ರವು ಮುಖ್ಯವಾದುದು. ಡಾಕ್ಟರುಗಳು, ಕಲಾ ಪಿಪಾಸಿಗಳು, ಲೇಖಕರು, ಸೈನಿಕರು, ರಾಜಕೀಯವೇತ್ತರು, ಪರಿಶೋಧಕರು ಮತ್ತು ಇತರ ನಾಯಕರುಗಳ ವಿಷಯದಲ್ಲಿಯಂತೂ ಅವಲೋಕನಾ ಕೌಶಲವು ಹೆಚ್ಚಾಗಿರಬೇಕು.

ಸ್ಕೌಟ್ ಶಿಕ್ಷಣವಂತೂ ಅವಲೋಕನಾ ಚತುರತೆಗೆ ಹೆಚ್ಚು ಒತ್ತಾಸೆ ನೀಡುತ್ತದೆ. "ಇತರರೊಡನಿದ್ದಾಗ, ತಾನು ಗಮನಿಸದಿರುವ, ಯಾವುದೇ ವಸ್ತು ವಿಷಯದ ಬಗ್ಗೆ (ಚಿಕ್ಕದೋ, ದೊಡ್ಡದೋ, ಹತ್ತಿರವೋ, ದೂರವೋ, ಎತ್ತರವೋ, ತಗ್ಗೋ) ಇತರರು ಗಮನಿಸಿ ಹೇಳುವುದಾದರೆ, ಅಂತಹ ಸ್ಕೌಟು ಅದನ್ನು ಅವಮಾನಕರವಾಗಿ ಭಾವಿಸಬೇಕು. ಆ ಕಾರಣದಿಂದಲೇ ಚಿಕ್ಕವಯಸ್ಸಿನಿಂದಲೇ, ದೈವ ದತ್ತವಾದ ಇಂದ್ರಿಯ ಶಿಕ್ಷಣಕ್ಕೆ, ಅದರಲ್ಲೂ ವಿಶೇಷವಾಗಿ ಅವಲೋಕನೆಯ ಬಗ್ಗೆ, ಅದನ್ನು ಅಭ್ಯಾಸ ಮಾಡಿಕೊಳ್ಳುವ ಬಗ್ಗೆ, ಅದನ್ನೊಂದು ಹವ್ಯಾಸವನ್ನಾಗಿ ಮಾಡಿಕೊಳ್ಳುವ ಬಗ್ಗೆ ಹೆಚ್ಚು ಗಮನ ನೀಡಲಾಗುತ್ತದೆ".

"ಇದರಿಂದ ಅವರು ತಮ್ಮ ಜೀವನವನ್ನು ಹೆಚ್ಚು ಸುಖಕರವಾಗಿ ಕಳೆಯಲು ಅನುಕೂಲವಾಗುತ್ತದೆ", ಎಂದು ಬಿ.ಪಿ.ರವರು ಅಭಿಪ್ರಾಯಪಡುತ್ತಾರೆ.

ಬಾಲ್ಯಾವಸ್ಥೆಯಲ್ಲಿ ಇಂದ್ರಿಯಗಳು ಸಹಜವಾಗಿ ಅತಿ ಜಾಗೃತವಾಗಿರುತ್ತವೆ. ಸ್ವಾಭಾವಿಕವಾಗಿ ವಿಚಾರ ಮಾಡುವ ಈ ಬುದ್ಧಿ, ತಿಳಿದುಕೊಳ್ಳಬೇಕೆಂಬ ಅದಮ್ಯ ಕುತೂಹಲ ಇವುಗಳನ್ನು ಅಭಿವೃದ್ಧಿಪಡಿಸಿಕೊಳ್ಳಲೂ, ಮಾನಸಿಕವಾಗಿ ಸದಾ ಜಾಗೃತರಾಗಿರಲೂ ಅವಶ್ಯಕವಾದ, ಕ್ರಮಬದ್ಧವಾದ ಅವಕಾಶಗಳನ್ನು ಸ್ಕೌಟುಗಳಿಗೆ ಮತ್ತೆ ಮತ್ತೆ ಒದಗಿಸಲಾಗುತ್ತದೆ.

ಅವಲೋಕನದಲ್ಲಿನ ಶಿಕ್ಷಣದಿಂದ, ಸಮಾಜಕ್ಕೆ ಸೇವೆ ಸಲ್ಲಿಸುವ ಸಾಮರ್ಥ್ಯವು ಉತ್ತಮಗೊಳ್ಳುತ್ತದೆ.

ಆಟಗಳು ಮತ್ತು ಅಭ್ಯಾಸಗಳ ಮೂಲಕ, ಆಟಗಳನ್ನಾಡಿಸುವ ರೀತಿಯಲ್ಲಿ "ಅವಲೋಕನ"ದ ಶಿಕ್ಷಣವನ್ನು ಕೊಡಬಹುದು. ಈ ಚಟುವಟಿಕೆಯು ವಿನೋದಕರವಾಗಿರಬೇಕು, ವೈವಿಧ್ಯಮಯವಾಗಿರಬೇಕು. ಪ್ರಗತಿ ಪರವಾದ ಶಿಕ್ಷಣವು ಲಭಿಸುವಂತಿರಬೇಕು. ಈ ಉದ್ದೇಶಕ್ಕಾಗಿ ಆರಿಸಿಕೊಳ್ಳುವ ಯಾವುದೇ ಚಟುವಟಿಕೆಯಾದರೂ, 'ಅವಲೋಕನ'ದಲ್ಲಿ ಶಿಕ್ಷಣ ನೀಡುವ ಗುರಿಯನ್ನು ಸಾಧಿಸಬೇಕಾಗಿರುವುದರಿಂದ, ಅಂತಹ ಚಟುವಟಿಕೆಗಳನ್ನು ಎಚ್ಚರವಹಿಸಿ ಆರಿಸಿಕೊಳ್ಳಬೇಕು.

**ಕಿಮ್‌ನ ಆಟಗಳು:**

ಕಿಮ್‌ನ ಆಟಗಳು ಅವಲೋಕನದಲ್ಲಿ ಶಿಕ್ಷಣ ನೀಡಲು ನಿರೂಪಿತವಾಗಿವೆ. ಸ್ಮರಣ ಮಾತ್ರವಲ್ಲದೆ, ಯಾವುದೇ ವಸ್ತುವನ್ನು ವಿವರವಾಗಿ ಗಮನಿಸುವುದು. ಈ ಆಟದ ಉದ್ದೇಶವಾಗಿದೆ. ಒಂದು ಹರಿವಾಣ (ಟ್ರೇ)ದಲ್ಲಿ 24 ವಸ್ತುಗಳನ್ನು ಜೋಡಿಸಲಾಗುತ್ತದೆ. ಉದಾ: 2–3 ರೀತಿಯ ಗುಂಡಿಗಳು, ತರಹೇವಾರಿ ಪೆನ್ಸಿಲ್‌ಗಳು, ಪೆನ್ನುಗಳು, ಕಾರ್ಕ್‌ಗಳು, ನಟ್‌ಗಳು, ಕಲ್ಲುಗಳು, ಚಾಕುಗಳು, ದಾರದ ಚೂರುಗಳು, ಸಣ್ಣಸಣ್ಣ ಚಿತ್ರಗಳು ಇತ್ಯಾದಿ. ಟವಲ್/ಬಟ್ಟೆಯಿಂದ ಟ್ರೇಯನ್ನು ಮುಚ್ಚಲಾಗುವುದು. ಒಂದು ಪೆಟ್ರೋಲನ್ನು ಕರೆದು, ಮೇಲೆ ಮುಚ್ಚಿದ ಬಟ್ಟೆಯನ್ನು ತೆಗೆದು ಒಂದು ನಿಮಿಷಕಾಲ ಮಾತ್ರ ಟ್ರೇಯನ್ನು ಗಮನಿಸಲು ಅವಕಾಶ ನೀಡಿ ಮತ್ತೆ ಮುಚ್ಚಿ ಬಿಡಬೇಕು. ಆ ಬಳಿಕ ಪೆಟ್ರೋಲ್‌ನ ಪ್ರತಿ ಸ್ಕೌಟೂ ತಾನು ಗಮನಿಸಿದುದನ್ನು (ಅವಲೋಕನೆ ಮಾಡಿದ್ದನ್ನು ) ಪಟ್ಟಿ ಮಾಡಲು ಹೇಳುವುದು. ಕನಿಷ್ಠ 16 ವಸ್ತುಗಳನ್ನು ವಿವರಿಸಬೇಕು. ಇನ್ನೂ ಹೆಚ್ಚು ವಸ್ತುಗಳನ್ನು ವಿವರಿಸಿದರಂತೂ ಇನ್ನೂ ಒಳ್ಳೆಯದೇ.

ಅನುಭವವನ್ನು ಪಡೆದಂತೆಲ್ಲಾ ಆಟವನ್ನು ಹೆಚ್ಚು ಹೆಚ್ಚು ಕ್ಲಿಷ್ಟಗೊಳಿಸುತ್ತಾ ಹೋಗಬೇಕು. ಹೆಚ್ಚು ಹೆಚ್ಚು ವಿವರಗಳನ್ನು ಆಶಿಸಬೇಕು.

**ಬೆರಳು ಕಾಪನ್ನು ಹುಡುಕುವುದು:**

ಎಲ್ಲಾ ಸ್ಕಾಟುಗಳನ್ನು ರೂಮಿನಿಂದ ಹೊರಗೆ ಕಳುಹಿಸಿ, ಆ ಬಳಿಕ ಒಂದು ಬೆರಳು ಕಾಪು (ಥಿಂಬಲ್) ಸಣ್ಣ ನಾಣ್ಯ/ಕಾಗದ ಚೂರು ಅಥವಾ ಯಾವುದೇ ಸಣ್ಣ ವಸ್ತುವನ್ನು, ಕೂಡಲೇ ಕಾಣುವಂತೆ, ಆದರೆ ಸಾಮಾನ್ಯವಾಗಿ ಗಮನಿಸದೇ ಇರಬಹುದಾದಂತಹ ಸ್ಥಳದಲ್ಲಿ ಅಡಗಿಸಿಡಿ. ಈಗ ಸ್ಕೌಟುಗಳು ಒಳಗೆ ಬಂದು, ಅದನ್ನು ಗಮನಿಸಲಿ, ಕಂಡ ಕೂಡಲೆ, ಆ ಸ್ಕೌಟು, ಇತರರಿಗೆ ಆ ಬಗ್ಗೆ ಸುಳಿವು ಕೊಡದೆ ಒಂದುಕಡೆ ಕುಳಿತುಕೊಳ್ಳಲಿ. ನಿಗದಿತ ಅವಧಿಯ ಬಳಿಕ ಅದನ್ನು ಅಲ್ಲಿಯವರೆಗೂ ಗಮನಿಸದೇ ಹೋದ ಸ್ಕೌಟುಗಳಿಗೆ ತೋರಿಸಲಿ.

**ಅಂಗಡಿಯ 'ಪ್ರದರ್ಶನ' ಕಿಟಕಿ:**

ಸ್ಕೌ.ಮಾ.ರು ಒಂದು ಪೆಟ್ರೋಲನ್ನು ಅಂಗಡಿಗಳ ಸಾಲಿನಲ್ಲಿ ಕರೆದೊಯ್ಯುತ್ತಾರೆ. ಪ್ರತಿ ಅಂಗಡಿಯ ಎದುರಿನಲ್ಲೂ ಅರ್ಧ ನಿಮಿಷ ಕಾಲ ನಿಲ್ಲುತ್ತಾ 5–6 ಅಂಗಡಿಗಳನ್ನು ದಾಟುತ್ತಾರೆ. ಆ ಬಳಿಕ, ಸ್ವಲ್ಪ ದೂರ ಸರಿದು, ಪ್ರತಿ ಸ್ಕೌಟ್‌ಗೂ ಒಂದು ಕಾರ್ಡ್‌ನ್ನು, ಒಂದು ಪೆನ್ಸಿಲನ್ನೂ ಕೊಟ್ಟು ಅಂಗಡಿಯ ನಂ. (3,5 ಹೀಗೆ) ಹೆಸರಿಸಿ, ಅಲ್ಲಿ ಗಮನಿಸಿದ ವಸ್ತುಗಳನ್ನು ಪಟ್ಟಿಮಾಡಲು ಹೇಳುತ್ತಾರೆ. ಹೆಚ್ಚು ವಸ್ತುಗಳನ್ನು ಸರಿಯಾಗಿ ಪಟ್ಟಿ ಮಾಡಿದವನು ಗೆದ್ದಂತೆ.

**ಹಳೆಯ ಚುಕ್ಕೆ ಮುಖ:**

ಒಂದೊಂದು ರಟ್ಟಿನಲ್ಲೂ 12 ಕ್ಕೂ ಹೆಚ್ಚು ಚೌಕಗಳಿರುವಂತೆ ಗುರುತಿಸಿಕೊಳ್ಳಿ. ಪ್ರತಿಯೊಬ್ಬ ಸ್ಕೌಟೂ ಅಂತಹ ಒಂದೊಂದು ರಟ್ಟನ್ನು ತೆಗೆದುಕೊಂಡು ಕೆಲವು ನೂರು ಮೀಟರುಗಳ ದೂರ ಹೋಗಲಿ. ಅವರಲ್ಲಿ ಒಬ್ಬೊಬ್ಬರ ಬಳಿಯೂ ಒಂದು ಪೆನ್ಸಿಲ್ ಇರುತ್ತದೆ.

ಈಗ ಸ್ಕೌಟ್ ಮಾಸ್ಟರು 8 ಸೆಂ.ಮೀ. ಅಳತೆಯ ಅಷ್ಟೇ ಚಚ್ಚೌಕಗಳಿರುವ ಒಂದು ದೊಡ್ಡ ರಟ್ಟನ್ನು ತೆಗೆದುಕೊಳ್ಳುತ್ತಾರೆ. ಸ್ಕೌ.ಮಾರ ಬಳಿ 1.5 ಸೆಂ.ಮೀ ಅಳತೆಯ ಕಪ್ಪು ಬಣ್ಣದ ಕಾಗದದ ಡಿಸ್ಕ್‌ಗಳಿರುತ್ತವೆ. ರಟ್ಟಿನ ಸುಮಾರು ಅರ್ಧದಷ್ಟು ಚೌಕಗಳಲ್ಲಿ, ತಮಗೆ ಇಷ್ಟು ಬಂದ ಚೌಕಗಳಲ್ಲಿ ಈ ಡಿಸ್ಕ್‌ಗಳನ್ನು ಪಿನ್ ಮಾಡುತ್ತಾರೆ.

ಆ ಬಳಿಕ ಸ್ಕೌಟ್‌ಗಳಿಗೆ ಕಾಣುವಂತೆ ಎತ್ತಿ ಹಿಡಿಯುತ್ತಾರೆ. ಈಗ ಸ್ಕೌಟುಗಳು ಮುಂದೆ ಬಂದು, ತಮ್ಮ ರಟ್ಟುಗಳ ಮೇಲಿರುವ ಚೌಕಗಳಲ್ಲಿ, ಅದೇ ಭಾಗಗಳಲ್ಲಿ ಅದೇ ನಮೂನೆಯಲ್ಲಿ, ಚುಕ್ಕಿಗಳನ್ನಿಡುತ್ತಾ ಬರುತ್ತಾರೆ. ಆದಷ್ಟು ಹೆಚ್ಚು ದೂರದಿಂದ ಯಾರು ಸ್ಕೌಟು ಮಾಸ್ಟರ ಕೈನಲ್ಲಿರುವ ದೊಡ್ಡ ರಟ್ಟಿನಲ್ಲಿರುವ ಚುಕ್ಕೆಗಳನ್ನು ನಿಗದಿತ ಅವಧಿಯಲ್ಲಿ, ಗಮನಿಸಿ, ಹೆಚ್ಚು ಚುಕ್ಕೆಗಳನ್ನು, ಎತ್ತಿ ತೋರಿಸಿದ ರೀತಿಯಲ್ಲಿಯೇ ಗುರುತಿಸುತ್ತಾರೆಯೋ ಅವರು ಗೆದ್ದಂತೆ. "ಹಳೆಯ ಚುಕ್ಕೆ ಮುಖ" ಆಟವು ಅವಲೋಕನ ಶಕ್ತಿಯನ್ನು ಹೆಚ್ಚಿಸುತ್ತದೆ. ದೃಷ್ಟಿ ಶಕ್ತಿಯನ್ನು ಹರಿತಗೊಳಿಸುತ್ತದೆ.

**ಮಾಪನ:** 1) ಸರಿಯಾದ ಪ್ರತಿ ಅಂಶಕ್ಕೆ . . . 5 ಅಂಕಗಳನ್ನು ಸೇರಿಸಿ

2) ತಪ್ಪಾದ ಪ್ರತಿ ಅಂಶಕ್ಕೆ . . . 1 ಅಂಕವನ್ನು ಕಳೆಯಿರಿ ಮತ್ತು

3) ಅತಿ ದೂರದವನಿಂದ, ಸ್ಕೌ.ಮಾರ ಕಡೆಗೆ, ಪ್ರತಿ ಸೆಂ.ಮೀ.ಗೆ . . . 1 ಅಂಕವನ್ನು ಕಳೆಯಿರಿ

**ಎಂತಹವನಪ್ಪ ಅವನು:**

ಮುನ್ನೆಚ್ಚರಿಕೆ ನೀಡದೆ, ದಳದ ಸಭೆಯಲ್ಲಿ ಏನಾದರೊಂದು ಘಟನೆಯು ಸಂಭವಿಸುವಂತೆ ಮಾಡಿ.

ಉದಾ: ಇದಕ್ಕಿದ್ದಂತೆ ಒಬ್ಬ ವ್ಯಕ್ತಿಯು ಒಳ ನುಗ್ಗಿ, ಸ್ಕೌ.ಮಾರಿಗೆ ಢಿಕ್ಕಿ ಹೊಡೆದು, ಅವರನ್ನು ಕೆಳಕ್ಕೆ ಕೆಡವಿ, ತಪ್ಪಿಸಿಕೊಂಡು ಓಡಿಹೋಗುತ್ತಾನೆ. ಏನು ನಡೆಯಿತು? ಒಳ ನುಗ್ಗಿ, ತಪ್ಪಿಸಿಕೊಂಡ ವ್ಯಕ್ತಿ ಹೇಗಿದ್ದ? ಎಂಬ ಬಗ್ಗೆ ಗಮನಿಸಿದ ಗುರುತುಗಳನ್ನೂ ನಮೂದಿಸಿದ ವಿವರಗಳನ್ನೂ ಒಳಗೊಂಡ ವರದಿಯನ್ನು ಪ್ರತಿ ಪೆಟ್ರೋಲೂ ತಯಾರಿಸಬೇಕು.

ಇದು "ಅವಲೋಕನ ಶಕ್ತಿ"ಯ ಶಿಕ್ಷಣವೇ ಹೊರತು, "ಜ್ಞಾಪಕ ಶಕ್ತಿ"ಯ ಪರೀಕ್ಷೆ ಅಲ್ಲವೆಂಬ ಅಂಶವನ್ನು ನಾವು ಚೆನ್ನಾಗಿ ಅರಿತುಕೊಳ್ಳಬೇಕು.

ಈ ಆಟದಲ್ಲಿ ಭಾಗವಹಿಸಿದ ಸ್ಕೌಟುಗಳಿಗೆ ತಮ್ಮ ಸಾಧನೆಯ ಬಗ್ಗೆ ತೃಪ್ತಿ ಉಂಟಾಗಬೇಕು. ಸ್ಕೌ.ಮಾ.ರು ಅತಿಯಾದ ವಿವರಗಳನ್ನಾಶಿಸಿ, ಸ್ಕೌಟುಗಳಲ್ಲಿ ಕೀಳರಿಮೆಯನ್ನು ಉಂಟುಮಾಡಬಾರದು. ಸರಳವೂ, ಸುಲಭವೂ ಆದ ವಿಷಯಗಳಿಂದ ಪ್ರಾರಂಭಿಸಿ, ಮುಂದುವರೆದಂತೆ ಕ್ಲಿಷ್ಟಗೊಳಿಸಬೇಕು ಹಾಗೂ ಅವಲೋಕನೆಗೆ ಸಹಾಯಕವಾಗುವ ಅಂಶಗಳನ್ನು ಸೇರಿಸುತ್ತಾ ವಿಸ್ತರಿಸಬೇಕು.

ಅವಲೋಕನೆಯ ಕಾಲವನ್ನು ಪರಿಮಿತಗೊಳಿಸುವುದರಿಂದ, ಗೊಂದಲಮಯ ಮಾಡುವುದರಿಂದ, ಅವಲೋಕನೆಗೂ ವರದಿಗೂ ಮಧ್ಯೆ ಬೇರೆ ಚಟುವಟಿಕೆ ನಡೆಸುವುದರಿಂದ, ಹೆಚ್ಚು ಹೆಚ್ಚು ವಿವರಗಳನ್ನು ಆಶಿಸುವುದರಿಂದ, ಕಷ್ಟಕರ ಪರಿಸ್ಥಿತಿಯಲ್ಲಿ ಅವಲೋಕಿಸಲು ಹೇಳುವುದರಿಂದ (ಉದಾ: ನಿಗದಿತ ದಾರಿಯಲ್ಲಿ ಓಡುತ್ತಿರುವಾಗ ಗಮನಿಸುವುದು) ಹೀಗೆ ಆಟವನ್ನು ಕ್ಲಿಷ್ಟಗೊಳಿಸಬಹುದು.

**ಇತರ ಆಟಗಳು:** (1) ಒಂದೇ ರೀತಿ ಕಾಣುವ ಚಿತ್ರಗಳಲ್ಲಿ ವ್ಯತ್ಯಾಸ ಗುರುತಿಸುವುದು. (2) ಅಂಧ ತೊಡಕುಗಳು (3) ಉಠಾವಣಿ (Stunt) ಪ್ರದರ್ಶಿಸುವುದು. ಉದಾ: ಆಳುಗಳು ಹಲವಾರು ವಸ್ತುಗಳನ್ನು – ಬಕೆಟ್ಟು, ಪಿಕಾಸಿ, ಏಣಿ ಇತ್ಯಾದಿ ಹಿಡಿದು ಹೋಗುತ್ತಾರೆ. ಕೆಲವು ಕ್ಷಣಗಳ ಬಳಿಕ ಕ್ರಮ ತಪ್ಪಿಸಿ, ವಸ್ತುಗಳನ್ನು ಅದಲು ಬದಲು ಮಾಡಿಕೊಂಡು ಹಿಂದಿರುಗುತ್ತಾರೆ. (4) ಕಿಮ್ ಓಟ: ಬೇಲಿಯ ಬದಿಯಲ್ಲಿ ನಿಗದಿತವಾದ ಒಂದೇ ದೂರಗಳಲ್ಲಿರಿಸಿದ, ವಸ್ತುಗಳನ್ನು, ಓಡುತ್ತಾ ಗಮನಿಸಿ ಹೇಳುವುದು.

**ಗಮನಿಕೆ:** (i) **ಮೊದಲನೇ ಆಟ:** ಒಂದೇ ರೀತಿ ಕಾಣುವ ಇಬ್ಬರು ಮೂವರ ಭಾವ ಚಿತ್ರಗಳನ್ನು ತೆಗೆದು, ತಂದು, ಅವರ ಉಡಿಗೆ ತೊಡಿಗೆಗಳಲ್ಲಿರಬಹುದಾದ ಅಲ್ಪಸ್ವಲ್ಪ ವ್ಯತ್ಯಾಸಗಳನ್ನು ಗಮನಿಸುವುದು.

(ii) **ಎರಡನೇ ಆಟ:** 60 ಸೆಂ.ಮೀ. × 30 ಸೆಂ.ಮೀ ಹಲಗೆಯ ಮೇಲೆ ವಿವಿಧ ವಿನ್ಯಾಸಗಳು ಬರುವಂತೆ ಕತ್ತರಿಸಿ. ಕತ್ತರಿಸಿದ ಭಾಗಗಳಿಗೆ ಹೊಂದುವಂತೆ ಜೋಡಿಸಲು ಬೇಕಾಗುವ ಹಲಗೆಯ ಚೂರುಗಳಿರಲಿ. ಸ್ಕೌಟುಗಳಿಗೆ ಕಣ್ಣು ಕಟ್ಟಿ, ತೊಡಕುಗಳನ್ನು ಕೊಡಿ. ಅವರು ಹಲಗೆಯ ಚೂರುಗಳನ್ನು ಆಯಾ ರಂಧ್ರಗಳಲ್ಲಿ ಸರಿ ಹೊಂದುವಂತೆ ಜೋಡಿಸಲಿ.

(iii) **ಮೂರನೆಯ ಆಟ:** ಸ್ಕೌಟರನು, ಇತರರ ಸಹಾಯ ತೆಗೆದುಕೊಂಡು, ವ್ಯವಸ್ಥೆ ಮಾಡಬೇಕಾಗುತ್ತದೆ. ವಿಷಯವು ಪೂರ್ತಿಯಾಗಿ ಗುಟ್ಟಾಗಿರಬೇಕು.

(iv) **ನಾಲ್ಕನೆಯ ಆಟ:** ಸ್ಕೌಟುಗಳನ್ನು ನಿಗದಿತ ದಾರಿಯಲ್ಲಿ ಓಟದ ನಡಿಗೆ (Jog)ಯ ಗತಿಯಲ್ಲಿ ಕರೆದೊಯ್ಯಬೇಕು. ಅಲ್ಲಲ್ಲಿ ಇಟ್ಟಿರುವ ವಸ್ತುಗಳು, ಕಂಡೂ ಕಾಣದಂತೆ ಇರಬೇಕು. ಸ್ಕೌಟುಗಳು, ವಸ್ತುಗಳನ್ನು ಓಡುತ್ತಾ ಗಮನಿಸಬೇಕು. 'ಅವಲೋಕನೆ'ಗಾಗಿ ಎಲ್ಲೂ ನಿಲ್ಲುವಂತಿಲ್ಲ. ಕೊನೆಯಲ್ಲಿ ಗಮನಿಸಿದ ವಸ್ತುಗಳನ್ನು ವಿವರವಾಗಿ ಪಟ್ಟಿ ಮಾಡಬೇಕು.

**ಇಂದ್ರಿಯ ತರಬೇತಿ:** ಪಂಚೇಂದ್ರಿಯಗಳು ಮಾನವ ದೇಹದ ಭಾಗಗಳಾಗಿವೆ. ಇಲ್ಲಿಯವರೆಗೆ ಪ್ರಸ್ತಾಪಿಸಿದ ಎಲ್ಲಾ ಆಟಗಳೂ, ಕಣ್ಣಿಗೆ (ದೃಷ್ಟಿ) ಸಂಬಂಧಪಟ್ಟುವುಗಳು. ಅದೇ ರೀತಿ ಕಿವಿ (ಶಬ್ದ) ಮೂಗು (ವಾಸನೆ) ನಾಲಿಗೆ (ರುಚಿ) ಮತ್ತು ಚರ್ಮ (ಸ್ಪರ್ಶ– ಮುಟ್ಟುವುದು) ಇವುಗಳಿಗೆ ಸಂಬಂಧಪಟ್ಟ ಆಟಗಳನ್ನೂ ಆಡಿಸಬೇಕು. ಈ ಎಲ್ಲವನ್ನೂ ಒಟ್ಟುಗೂಡಿಸಿ "ಇಂದ್ರಿಯ ತರಬೇತಿ" ಎಂದು ಹೇಳುತ್ತೇವೆ.

**ಶಬ್ದ:** ಕಿವಿಗೆ ಸಂಬಂಧಪಟ್ಟ ಬೇರೆ ಬೇರೆ ರೀತಿಯ ಆಟಗಳನ್ನಾಡಿಸಬಹುದು. ಸರಳವಾದ ಶಬ್ದಗಳಿಂದ ಪ್ರಾರಂಭಿಸಿ, ಅವುಗಳನ್ನು ಸ್ಕೌಟುಗಳು ಗುರುತಿಸಲಿ. ಉದಾ: ಕುರ್ಚಿಯನ್ನು ಎಳೆಯುವುದು, ನೀರು ಸುರಿಯುವುದು, ಪುಸ್ತಕದ ಹಾಳೆಗಳನ್ನು ತಿರುಗಿಸುವುದು, ಇತ್ಯಾದಿ. ಮುಂದುವರೆದಂತೆ, ಇತರ ಶಬ್ದಗಳನ್ನು ಗಮನಿಸಬೇಕು. ಕೊನೆಗೆ, ಹೇಗೆ ತಯಾರಾಗಬೇಕೆಂದರೆ, ಮುಚ್ಚಿದ ಕೋಣೆಯೊಂದರಲ್ಲಿ, ಹಲವರು ಸೇರಿ, ಬೇರೆ ಬೇರೆ ಕೆಲಸಗಳನ್ನು ಮಾಡುತ್ತಿದ್ದರೆ, ಹೊರಗಿರುವವರು ಒಳಗಡೆ ಏನೇನು ನಡೆಯುತ್ತಿದೆ ಎಂದು ಹೇಳುವಂತಿರಬೇಕು. ಉದಾ: ಪುಸ್ತಕ ಓದುತ್ತಿರುವುದು, ಗಡಿಯಾರಕ್ಕೆ ಕೀ ಕೊಡುವುದು. ಕುರ್ಚಿ ಎಳೆದಾಡುವುದು, ಫೋನ್ ಡಯಲ್ ಮಾಡುತ್ತಿರುವುದು ಇತ್ಯಾದಿ, ಕೇಳಿಸಿಕೊಂಡ ಶಬ್ದಗಳನ್ನು ವಿವರಿಸಿ ಹೇಳುವುದು, ಸ್ಕೌಟುಗಳಿಗೊಂದು ಸವಾಲೇ ಸರಿ!!

**ವಾಸನೆ:** ಇದಕ್ಕಾಗಿ 10–15 ಶೀಷೆಗಳಲ್ಲಿ, ಬೇರೆ ಬೇರೆ ರೀತಿಯ ವಾಸನೆಯುಳ್ಳ ವಸ್ತುಗಳಿರಲಿ, ಸ್ಕೌಟುಗಳಿಗೆ ಕಣ್ಣುಕಟ್ಟಿ, ಒಂದೊಂದಾಗಿ ಶೀಷೆಗಳನ್ನು, ಒಬ್ಬರಿಂದ ಒಬ್ಬರಿಗೆ ರವಾನೆ ಮಾಡುತ್ತಾ ಹೋಗಲಿ. ಮುಂದಿನವನಿಗೆ ಶೀಷೆಯನ್ನು ಕೊಡುವ ಮುಂಚೆ, ವಾಸನೆ ನೋಡಲಿ. ಯಾರೂ ಮಾತನಾಡವಾರದು. ಎಲ್ಲಾ ಶೀಷೆಗಳೂ ಮುಗಿದ ಮೇಲೆ, ಕಣ್ಣುಗಳಿಗೆ ಕಟ್ಟಿರುವುದನ್ನು ಬಿಚ್ಚಿ. ಈಗ ಸ್ಕೌಟುಗಳು, ತಾವುಗಳು ಕೈಗೆ ಬಂದು ವಾಸನೆ ನೋಡಿದ ಕ್ರಮದಲ್ಲಿಯೇ ವಸ್ತುಗಳ ಪಟ್ಟಿಮಾಡಲಿ.

**ರುಚಿ:** ಸ್ಕೌಟುಗಳಿಗೆ ಕಣ್ಣುಕಟ್ಟುವುದು. ಒಂದೊಂದೇ ವಸ್ತುವಿನ ರುಚಿ ನೋಡಿಸಬಹುದು. ಕೊನೆಯಲ್ಲಿ ಸ್ಕೌಟುಗಳು, ತಾವುಗಳು ರುಚಿ ನೋಡಿದ ಕ್ರಮದಲ್ಲಿಯೇ ವಸ್ತುಗಳ ಪಟ್ಟಿ ಮಾಡುವುದು.

**ಸ್ಪರ್ಶ:** ಸ್ಕೌಟುಗಳಿಗೆ ಕಣ್ಣು ಕಟ್ಟುವುದು. ಸಾಮಾನ್ಯ ಬಳಕೆಯ ವಸ್ತುಗಳನ್ನು ಒಂದೊಂದಾಗಿ ಕೊಡುವುದು. ಸ್ಕೌಟುಗಳು ಅದನ್ನು ಮುಟ್ಟಿ ನೋಡುತ್ತಾ ಹೋಗುವುದು. ಕೊನೆಯಲ್ಲಿ ಸ್ಕೌಟುಗಳು, ತಾವು ಮುಟ್ಟಿ ನೋಡಿದ ಕ್ರಮದಲ್ಲಿ, ತಿಳಿದು ಬಂದ ವಸ್ತುಗಳ ಪಟ್ಟಿ ಮಾಡುವುದು. ಉದಾ: ಮರದ ಹಲಗೆ, ಮರದ

ಸ್ಕೇಲು, ಪ್ಲಾಸ್ಟಿಕ್ ಸ್ಕೇಲು, ತಗಡಿನ ಸ್ಕೇಲು ಹ್ಯಾಕ್‌ಸಾ ಇತ್ಯಾದಿ. ಇದೇ ರೀತಿ, ದವಸ ಧಾನ್ಯ, ಪಾತ್ರೆ ಉಪಕರಣಗಳು ಇತ್ಯಾದಿ ಕೊಡಬಹುದು. ಮುಂದುವರೆದಂತೆ ವಸ್ತುಗಳ ತೂಕ, ಅಳತೆ, ಇತ್ಯಾದಿ ಸಹ ಗುರುತಿಸಲು ಹೇಳಬಹುದು.

ಈ ರೀತಿಯಲ್ಲಿ ಆಟಗಳು ಪ್ರಗತಿ ಪರವಾಗಿಯೂ, ಸ್ವಾರಸ್ಯಕರವಾಗಿಯೂ ಇರುವಂತೆ ಮಾಡಬಹುದು. ಇಂದ್ರಿಯ ಶಿಕ್ಷಣವು ದಳದ ಕಾರ್ಯಕ್ರಮಗಳ ಭಾಗವಾಗಬೇಕು. ಇವುಗಳು ಪ್ರಗತಿಪರವಾಗಿರಬೇಕು. ಆಟಗಳು ಮುಂದುವರೆದಂತೆ, ಹಂತ ಹಂತವಾಗಿ ಕ್ಲಿಷ್ಟವಾಗುವಂತೆ ಮಾರ್ಪಡಿಸುತ್ತಾ, ನವೀನತೆಯನ್ನು ತರುತ್ತಾ ಹೋಗಬೇಕು. ಈ ಆಟಗಳಿಂದ ಪಂಚೇಂದ್ರಿಯಗಳ ಅಭಿವೃದ್ಧಿಗೆ ಸಹಾಯ ಆಗುತ್ತದೆ.

ಅವಲೋಕನೆ ಹಾಗೂ ಇಂದ್ರಿಯ ತರಬೇತಿ ಆಟಗಳು ಬಹಳ ಸ್ವಾರಸ್ಯಕರವಾಗಿಯೂ, ವಿನೋದಕರವಾಗಿಯೂ ಇರುತ್ತವೆ, ಸ್ಕೌಟುಗಳು ಈ ಆಟಗಳನ್ನು ಬಹಳವಾಗಿ ಇಷ್ಟಪಡುತ್ತಾರೆ, ಆನಂದಪಡುತ್ತಾರೆ.

**ಪ್ಲಾಸ್ಟರ್ ಕ್ಯಾಸ್ಟ್ ಮಾಡುವುದು:** ಪ್ಲಾಸ್ಟರ್ ಕ್ಯಾಸ್ಟ್ ತಯಾರಿಸಲು, ಒಳ್ಳೆಯ ಗುಣಮಟ್ಟದ ಪ್ಲಾಸ್ಟರ್ ಆಫ್ ಪ್ಯಾರಿಸ್ ಪುಡಿ ಬೇಕಾಗುತ್ತದೆ. ಜೊತೆಗೆ, ನೀರು ಬೇಕಾಗುತ್ತದೆ. ಇವೆರಡನ್ನೂ ಬೆರೆಸಲು ಪಾತ್ರೆ ಸಹ ಬೇಕಾಗುತ್ತದೆ. ದೋಸೆ ಹಿಟ್ಟಿನ ಹದದಲ್ಲಿ ಬೆರೆಸಿಕೊಂಡು ಕೂಡಲೇ ಅಚ್ಚು ಹುಯ್ಯಬೇಕು. ನಿಧಾನಿಸಿದರೆ ಕೆಲಸ ಕೆಡುತ್ತದೆ.

ಹೆಜ್ಜೆ ಗುರುತು ಅಥವಾ ಇತರ ವಸ್ತುಗಳ ಅಚ್ಚನ್ನು ಮಾಡುವಾಗ ಅದರ ಸುತ್ತಲೂ ಬರುವಂತೆ ರಟ್ಟಿನ/ದಪ್ಪ ಕಾಗದದ ಪಟ್ಟಿ ಬೇಕಾಗುತ್ತದೆ.

**(i) ಪ್ರಾಣಿಗಳು/ಪಕ್ಷಿಗಳ ಹೆಜ್ಜೆ ಗುರುತನ್ನು– ಪ್ಲಾಸ್ಟರ್ ಕ್ಯಾಸ್ಟ್ (ಅಚ್ಚು) ಮಾಡುವುದು:** ಸಾಕು ಪ್ರಾಣಿಗಳ ಹೆಜ್ಜೆ ಗುರುತನ್ನು ಅಚ್ಚು ಹೊಯ್ಯುವುದು ಸುಲಭ. ಏಕೆಂದರೆ ಅವು ನಮ್ಮ ಜೊತೆಯಲ್ಲಿಯೇ ಇರುತ್ತವೆ. ತೋಟದಲ್ಲಿ ಅಥವಾ ಸುತ್ತು ಮುತ್ತಿನಲ್ಲಿ ನಾಯಿಗಳು, ಹಸು, ಎಮ್ಮೆ, ಕುರಿ, ಮೇಕೆ, ಬೆಕ್ಕು ಇತ್ಯಾದಿ ಪ್ರಾಣಿಗಳ ಹೆಜ್ಜೆ ಗುರುತನ್ನು ಗಮನಿಸಿ. ಚೆನ್ನಾಗಿ ಮೂಡಿ ಬಂದಿರುವ ಹೆಜ್ಜೆಗುರುತನ್ನು ಆರಿಸಿಕೊಳ್ಳಿ, ಅದರ ಮೇಲೆ ಬಿದ್ದಿರಬಹುದಾದ ದಾರ, ಕಾಗದ, ಎಲೆ, ಬಟ್ಟೆ ಇತ್ಯಾದಿ ವಸ್ತುಗಳಿದ್ದರೆ ತೆಗೆದು ಬಿಡಿ.

ಹೆಜ್ಜೆ ಗುರುತಿನ ಸುತ್ತಲೂ ಆಯ/ವರ್ತುಲಾಕಾರದಲ್ಲಿ ರಟ್ಟಿನ ಪಟ್ಟಿಯನ್ನಿಡಿ. ಈಗ ಅವಶ್ಯಕವೆನಿಸುವಷ್ಟು ಪ್ಲಾಸ್ಟರ್ ಪುಡಿಗೆ ನೀರು ಬೆರೆಸಿ, ದೋಸೆ ಹಿಟ್ಟಿನ ಹದಕ್ಕೆ ತನ್ನಿ. ಈಗ ದೋಸೆಹಿಟ್ಟಿನ ಹದದಲ್ಲಿರುವ ಪ್ಲಾಸ್ಟರ್ ಪುಡಿಯ ದ್ರವವನ್ನು, ನಿಧಾನವಾಗಿ, ಸಮವಾಗಿ, ಸೂಕ್ತ ದಪ್ಪ ಬರುವಂತೆ ಸುರಿಯುತ್ತಾ ಬನ್ನಿ. ಅದು ಇನ್ನೂ ಹಸಿ ಇರುವಾಗಲೇ ಅದರ ಒಂದು ಅಂಚಿನಲ್ಲಿ ದಾರವನ್ನು ಮಡಿಸಿ, ಸೇರಿಸಿ (ಕ್ಯಾಲೆಂಡರ್‌ನ ತೂಗು ಕುಣಿಕೆ ಇದ್ದಂತೆ) ಹೀಗೆ ಮಾಡುವುದರಿಂದ, ಮುಂದೆ ಅದನ್ನು ಗೋಡೆಯ ಮೇಲೆ ತೂಗು ಹಾಕಿ ಪ್ರದರ್ಶಿಸಲು ಬರುತ್ತದೆ. ಅದೇ ರೀತಿ ಹಸಿ ಇರುವಾಗಲೇ, ಮೊನಚಾದ ಮೊಳೆಯಿಂದ ಒಂದು ಪಕ್ಕದಲ್ಲಿ ಅಚ್ಚು ಹೊಯ್ದ ತಾರೀಕು, ಪ್ರಾಣಿಯ ಹೆಸರು ಮತ್ತು ಅಚ್ಚು ಹೊಯ್ದವರ ಹೆಸರನ್ನು ಗುರುತಿಸಿ. ಅಚ್ಚನ್ನು ಒಣಗಲು ಬಿಡಿ. 10-15 ನಿಮಿಷಗಳಲ್ಲಿ ಒಣಗಿ ಬಿಡುತ್ತದೆ. ಈಗ ಕೆಳಮಣ್ಣಿನ ಸಮೇತ ಅಚ್ಚನ್ನು ತೆಗೆದು 1-1½ ದಿನ ಕಾಲ ಎತ್ತಿಡಿ. ಆ ಬಳಿಕ ಅಚ್ಚಿನ ಮೇಲೆ ಮೆತ್ತಿಕೊಂಡಿರುವ ಮಣ್ಣನ್ನು ನೀರಿನಲ್ಲಿ ನಿಧಾನವಾಗಿ ತೊಳೆದು ಸ್ವಚ್ಛಮಾಡಿ. ಈಗ ಅಚ್ಚು ಪ್ರದರ್ಶನಕ್ಕೆ ತಯಾರ್.

ಇದೇ ರೀತಿ ಪಕ್ಷಿಗಳ ಹೆಜ್ಜೆ ಗುರುತುಗಳ ಅಚ್ಚು ತಯಾರಿಸಬಹುದು.

ಹೊರ ಸಂಚಾರ ಹೋದಾಗ, ಅದೂ ಕಾಡು ಪ್ರದೇಶದಲ್ಲಿ ಸಂಚರಿಸುವಾಗ, ಚಿರತೆ, ಹುಲಿ, ತೋಳ, ನರಿ, ಜಿಂಕೆ, ನವಿಲು ಇತ್ಯಾದಿ, ಪ್ರಾಣಿಗಳ ಹೆಜ್ಜೆ ಗುರುತನ್ನು ಗಮನಿಸಿ. ಆ ರೀತಿ ಸಾಧ್ಯವಾದಾಗ ಅದರ ಅಚ್ಚನ್ನು ತಯಾರಿಸಿ ಮನೆಗೆ ತನ್ನಿ.

**(ii) ಎಲೆಗಳ ಗುರುತಿನ ಅಚ್ಚು ತಯಾರಿಸುವುದು:** ಸ್ವಲ್ಪ ಜೇಡಿಮಣ್ಣನ್ನು (Clay) ತಂದು, ಹದವಾಗಿ ಕಲೆಸಿ, ಆಯತ/ವರ್ತುಲಾಕಾರದ ಬಿಲ್ಲೆ ತಯಾರಿಸಿ. ಅದರ ಮೇಲೆ ಎಲೆಯನ್ನು (ಮುತ್ತುಗ, ಅರಳಿ ಇತ್ಯಾದಿ) ಒತ್ತಿ (ಎಲೆಯ ನಾಳಗಳು ಎತ್ತಿ ಕಾಣುವಂತಿದ್ದರೆ, ಈ ಕೆಲಸಕ್ಕೆ ಒಳ್ಳೆಯದು). ಈಗ ಎಲೆಯ ಆಕಾರ, ನಾಳಗಳು ಜೇಡಿಮಣ್ಣಿನ ಮೇಲೆ ಮೂಡಿರುತ್ತದೆ. ಎಲೆಯನ್ನು ತೆಗೆದು ಬಿಡಿ. ಈ ಮೇಲೆ ಹೇಳಿರುವಂತೆ ಪ್ಲಾಸ್ಟರ್ ಕ್ಯಾಸ್ಟ್ ತಯಾರಿಸಿ. ತಗುಲಿ ಹಾಕಲು ದಾರ ಸೇರಿಸುವುದನ್ನೂ, ಅಚ್ಚಿನ ಕೊನೆಯಲ್ಲಿ ಹೆಸರುಗಳು ಮತ್ತು ತಾರೀಕುಗಳನ್ನು ಗುರುತಿಸಲೂ ಮರೆಯಬೇಡಿ.

**(iii) ಕಾರ್ಬನ್ ಒತ್ತು ಚಿತ್ರಗಳು:** ಕಾರ್ಬನ್ ಒತ್ತು ಚಿತ್ರಗಳು, ಪ್ಲಾಸ್ಟರ್ ಕ್ಯಾಸ್ಟ್‌ನಂತೆಯೇ ಮುಖ್ಯವಾದುದು. ಈ ಹಿಂದಿನಂತೆ, ಎತ್ತಿ ಕಾಣುವ ನಾಳಗಳಿರುವ, ಎಲೆಗಳನ್ನು ಆರಿಸಿಕೊಳ್ಳಿ. ಹಳೆಯ ಪುಸ್ತಕದ ಹಾಳೆಗಳ ಮಧ್ಯೆ ಅಥವಾ ವಾರ್ತಾ

ಪತ್ರಿಕೆಯ ಪುಟಗಳ ಮಧ್ಯೆ ಕಾರ್ಬನ್ ಮೇಲೆ ಮಾಡಿ ಕಾರ್ಬನ್ ಪೇಪರ್ ಇಡಿ. ಎಲೆಗಳ ಹಿಂಭಾಗವು ಕಾರ್ಬನ್ ಮೇಲೆ ಬರುವಂತೆ ಇಡಿ. ಅದರ ಮೇಲೆ ಒಂದೆರಡು ಪುಸ್ತಕ/ಪತ್ರಿಕೆಯ ಹಾಳೆಗಳನ್ನಿಟ್ಟು ಸಮನಾಗಿ, ಏಕಪ್ರಾಕಾರದಲ್ಲಿ ಒತ್ತಿ, ಎಲೆಯ ನಾಳಗಳಿಗೆ ಕಾರ್ಬನ್ ಅಂಟುತ್ತದೆ. ಸಮನಾಗಿ ಒತ್ತುವಾಗ ಎಲೆಯು ಅಲುಗಾಡದಂತೆ, ಎಚ್ಚರವಹಿಸಬೇಕು. ಕೆಲವು ನಿಮಿಷಗಳ ಕಾರ್ಬನ್ ಅಂಟಿರುವ ಎಲೆಯನ್ನು ತೆಗೆದು, ಬಿಳಿಯ ಕಾಗದದ ಹಾಳೆ ಮೇಲಿಟ್ಟು, ಮೇಲೊಂದು ಹಾಳೆಯನ್ನಿಟ್ಟು ಮೇಲಿನಂತೆ ಸಮನಾಗಿ ಒತ್ತಿ. ಎಲೆಯ ನಾಳಗಳಿಗೆ ಅಂಟಿದ್ದ ಕಾರ್ಬನ್, ಬಿಳಿಯ ಹಾಳೆಯ ಮೇಲೆ ಎಲೆಯ ಅಂದವಾದ ಚಿತ್ರವನ್ನು ಮೂಡಿಸುತ್ತದೆ. ಹಾಳೆಯ ಕೆಳಗೆ ಹೆಸರುಗಳು, ತಾರೀಕು ಬರೆಯಿರಿ.



## ಅಧ್ಯಾಯ–25

# ಶಿಬಿರ ವಾಸ

ಶಿಬಿರವಾಸ ಎಂದರೆ ಹೊರಾಂಗಣದಲ್ಲಿ ಜೀವನ ನಡೆಸುವುದು. ಶಿಬಿರ ಜೀವನವು ಸರಳವಾದುದು. ಆಲೋಚನೆಗಳು ಉನ್ನತವಾದುವು. ಶಿಬಿರ ವಾಸದ ಚಟುವಟಿಕೆಯು ಸ್ಕೌಟುಗಳಿಗೆ ಮತ್ತು ಗೈಡುಗಳಿಗೆ ವಿಶಿಷ್ಟವಾದ ಕಾರ್ಯಕ್ರಮವಾಗಿದೆ. ಶಿಬಿರ ವಾಸದಿಂದ ಆರೋಗ್ಯಕರ ಹವ್ಯಾಸಗಳು ಅಭಿವೃದ್ಧಿ ಹೊಂದುತ್ತವೆ. ಸಚ್ಚಾರಿತ್ರ್ಯದ ಬೆಳವಣಿಗೆಗೆ ಉತ್ತೇಜನವು ದೊರಕುತ್ತದೆ. ಸ್ಕೌಟ್ ಜೀವನದಲ್ಲಿ ಇದರಷ್ಟು ಆಕರ್ಷಕವಾದ ಚಟುವಟಿಕೆಯು ಬೇರೊಂದಿಲ್ಲ. ಸ್ಕೌಟ್‌ಗಳು ಕುತೂಹಲದಿಂದ, ಸದಾಕಾಲ ಎದುರು ನೋಡುವ ಕಾರ್ಯಕ್ರಮವೆಂದರೆ ಶಿಬಿರವಾಸ. ಸ್ಕೌಟರುಗಳಿಗಾದರೋ (i) ಬಾಲಕರನ್ನು ವೈಯಕ್ತಿಕವಾಗಿ ಗಮನಿಸಲೂ (ii) ಬಾಲಕರ ಸಚ್ಚಾರಿತ್ರ್ಯ ಬೆಳವಣಿಗೆಗೆ ಉತ್ತೇಜನ ನೀಡಲೂ, ಎಲ್ಲಕ್ಕಿಂತ ಹೆಚ್ಚಾಗಿ (iii) ತಮ್ಮನ್ನು ತಾವು ಉತ್ತಮಪಡಿಸಿಕೊಳ್ಳಲೂ ಸಹಾಯಕವಾಗುವ ಈ ಶಿಬಿರ ಕಾರ್ಯಕ್ರಮವು ಮಹತ್ವಪೂರ್ಣ ಅವಕಾಶವಾಗಿದೆ.

ಪ್ರತಿ ದಳವೂ ವರ್ಷಕ್ಕೊಮ್ಮೆಯಾದರೂ, ಒಂದುವಾರ ಕಾಲವಾದರೂ, ಹೊರಾಂಗಣ ಶಿಬಿರವನ್ನು ನಡೆಸಬೇಕು. ಅದು ಅವರ ವಾರ್ಷಿಕ ಶಿಬಿರವಾಗಿದ್ದು, ದೀರ್ಘ ಅವಧಿಯ ಶಿಬಿರವಾಗಿರಬೇಕು. "ಮೈತ್ರಿ" ಮತ್ತು "ಒಸುಗೆ"ಗಳ ಬೆಳವಣಿಗೆಯೇ ಅದರ ಮುಖ್ಯ ಉದ್ದೇಶವಾಗಿರಬೇಕು. "ವಾರ್ಷಿಕ ಶಿಬಿರ ಯಾವಾಗ ನಡೆಸುತ್ತಾರೆಯೋ?" ಎಂದು ಕಾತುರರಾಗಿ ಸ್ಕೌಟುಗಳು ತಮ್ಮ ಶಿಬಿರಕ್ಕಾಗಿ ಎದುರು ನೋಡುವಂತಿರಬೇಕು. ಆಗಾಗ್ಗೆ ಅವರುಗಳು ತಿಂಗಳುಗಳ ಮುಂಚೆಯೇ ಯೋಚಿಸುವಂತಿರಬೇಕು. ಸ್ಕೌ.ಮಾ.ರೂ ಸಹ, ಅದೇ ರೀತಿ ಮುಂಚಿತವಾಗಿ ಆ ಶಿಬಿರಕ್ಕಾಗಿ ತಯಾರಿ ನಡೆಸಬೇಕು.

ವಾರ್ಷಿಕ ಶಿಬಿರಗಳು ಸಾಮಾನ್ಯವಾಗಿ ಆರೇಳು ದಿನಗಳು ಅಥವಾ ಇನ್ನೂ ಹೆಚ್ಚು ದಿನಗಳಿರಬಹುದು. ಅದು ದಳದ ವಾರ್ಷಿಕ ಚಟುವಟಿಕೆಗಳ ಮುಕ್ತಾಯ ಕಾರ್ಯಕ್ರಮದಂತಿರಬೇಕು. ವಾರ್ಷಿಕ ಶಿಬಿರವು ಸ್ಕೌಟುಗಳ ಪಾಲಿಗೊಂದು ಹಿತಕರವಾದ ಅನುಭವ. ವಾರ್ಷಿಕ ಶಿಬಿರವೇ ಅಲ್ಲದೆ, ದಳದಲ್ಲಿ ವಾರಾಂತ್ಯ

ಶಿಬಿರಗಳನ್ನು ವ್ಯವಸ್ಥೆ ಮಾಡಬೇಕು. ಶಾಲಾ ದಳದಲ್ಲಿ ವಾರಾಂತ್ಯ ಶಿಬಿರಗಳನ್ನು ಶುಕ್ರವಾರ ಸಂಜೆಯಿಂದ ಅಥವಾ ಅನುಕೂಲಕ್ಕೆ ತಕ್ಕಂತೆ ಪ್ರಾರಂಭಿಸಿ, ನಡೆಸಬಹುದು. ಶುಕ್ರವಾರ ಸಂಜೆಯಿಂದ ಶನಿವಾರ ಸಂಜೆಗೇ ಮುಗಿಸುವುದಾದರೆ, ಅದು ಒಂದು ರಾತ್ರಿಯ ಶಿಬಿರವಾಯಿತು. ಭಾನುವಾರ ಸಂಜೆಗೆ ಮುಗಿಸುವುದಾದರೆ, ಶಿಬಿರದಲ್ಲಿ 2 ರಾತ್ರಿಗಳನ್ನು ಕಳೆದಂತಾಯಿತು. ಶಿಬಿರಗಳ ರಾತ್ರಿಗಳ ವಾಸ್ತವ್ಯವು ಹೆಚ್ಚು ಪ್ರಮುಖವೂ, ಆಕರ್ಷಕವೂ, ಅನಿರ್ವಚನೀಯವೂ ಆದ ಅನುಭವವಾಗಿರುತ್ತದೆ.

ವಾರಾಂತ್ಯ ಶಿಬಿರಗಳಲ್ಲಿ ಮುಖ್ಯವಾಗಿ ಶಿಕ್ಷಣ ಕಾರ್ಯಕ್ರಮಗಳನ್ನು ನಡೆಸಲಾಗುತ್ತದೆ. ವಿನೋದ ಕಾರ್ಯಕ್ರಮಗಳೂ ಇರುತ್ತವೆ. ಅಂತಹ ಶಿಬಿರಗಳು ಬಾಲಕರ ಮನೆಗಳಿಗೂ, ಶಾಲೆಗಳಿಗೂ ಹತ್ತಿರ ಇರುವುದು ಒಳ್ಳೆಯದು. ವರ್ಷದ ಪ್ರಾರಂಭದಲ್ಲೇ ಸ್ಥಳಗಳನ್ನಾರಿಸಿಕೊಂಡು, ಗೌರವಾನ್ವಿತ ನ್ಯಾಯ ಸಭೆಗಳನ್ನು ಅಲ್ಲಿ ನಡೆಸಬಹುದು. ಸಾಧ್ಯವಾಗುವುದಾದರೆ ಪ್ರತಿ 5–6 ವಾರಗಳಿಗೊಮ್ಮೆ ವಾರಾಂತ್ಯ ಶಿಬಿರಗಳನ್ನು ಅಲ್ಲಿ ನಡೆಸಬಹುದು. ಆಗ ವಾರ್ಷಿಕ ಶಿಬಿರಗಳನ್ನು ಬಿಟ್ಟು ವರ್ಷದಲ್ಲಿ ಆರೇಳು ಶಿಬಿರಗಳನ್ನು ನಡೆಸಿದಂತಾಗುತ್ತದೆ.

ಶಿಬಿರ ಕ್ಷೇತ್ರವು ದಳದ ಕಾರ್ಯಾಲಯದಿಂದ ಸಮೀಪವಾಗಿದ್ದರೆ ಹೋಗಿ ಬಂದು ಮಾಡಲು ಸುಲಭವಾಗಿರುತ್ತದೆ. ಶೈಕ್ಷಣಿಕ ಕಾರ್ಯಕ್ರಮಗಳನ್ನು ನಡೆಸಲು ಹೆಚ್ಚು ಕಾಲಾವಕಾಶ ದೊರಕುತ್ತದೆ. ಇದೊಂದು ಗಮನಾರ್ಹವಾದ, ಅನುಕೂಲಕರವಾದ ಅಂಶವಾಗಿದೆ.

ವಾರಾಂತ್ಯ ಶಿಬಿರಗಳಲ್ಲಿ ಕೆಲವು ಪೆಟ್ರೋಲ್ ಶಿಬಿರಗಳೂ ಆಗಬಹುದು. ಹಾಗೆ ನೋಡಿದರೆ, ಆದಷ್ಟೂ ಪೆಟ್ರೋಲ್ ಶಿಬಿರಗಳನ್ನು ನಡೆಸಬೇಕು. ಪೆಟ್ರೋಲ್‌ಗಳಿಗೆ ಅವರವರದೇ ರೀತಿಯ ವಿಭಿನ್ನ ಹಾಗೂ ಸಂಪನ್ನವಾದ ಅನುಭವವೂ ದೊರಕುತ್ತದೆ. ಆ ರೀತಿಯಲ್ಲಿ ದೊರಕಬೇಕು. ಎಲ್ಲಾ ಪೆಟ್ರೋಲ್‌ಗಳೂ ಒಂದೇ ನಿಗದಿತ ಅವಧಿಯಲ್ಲಿ ಬೇರೆ ಬೇರೆ ಶಿಬಿರ ಕ್ಷೇತ್ರಗಳಲ್ಲಿ ಶಿಬಿರ ಹೂಡಬಹುದು.

ಅಂತಹ ಪೆಟ್ರೋಲ್ ಶಿಬಿರಗಳನ್ನು ಪೆಟ್ರೋಲ್ ಲೀಡರುಗಳು ತಾವೇ ನಿರ್ವಹಿಸುವುದರಿಂದ ಅವರಿಗೆ ನಾಯಕತ್ವದಲ್ಲಿ ಶಿಕ್ಷಣವು ದೊರಕುತ್ತದೆ. ಮತ್ತು ಜವಾಬ್ದಾರಿಯುತ ನಿರ್ವಹಣಾ ಭಾವವೂ ಅಭಿವೃದ್ಧಿಯಾಗುತ್ತದೆ. ಈ ಶಿಕ್ಷಣವು ಪೆ.ಲೀ. ಅಥವಾ ದ್ವಿತೀಯಕನಿಗೆ ಮಾತ್ರ ಸೀಮಿತವಾಗದೆ, ಸರದಿ ಪ್ರಕಾರ ನಾಯಕತ್ವ ವಹಿಸುವುದರಿಂದ ಪೆಟ್ರೋಲ್‌ನ ಪ್ರತಿ ಸದಸ್ಯನಿಗೂ ದೊರಕುತ್ತದೆ ಮತ್ತು ಅವರ

ಮುನ್ನಡೆಗೆ ಸಹಾಯವಾಗುತ್ತದೆ. ಪ್ರತಿ ಶಿಬಿರದಲ್ಲಿಯೂ ನಾಯಕತ್ವದ ಗುಣಗಳೂ ಜವಾಬ್ದಾರಿ ನಿರ್ವಹಣಾ ಭಾವನೆಯೂ ಅಭಿವೃದ್ಧಿ ಹೊಂದುತ್ತದೆ.

ಅಂತಹ ಪೆಟ್ರೋಲ್ ಶಿಬಿರಗಳನ್ನು, ಪ್ರತಿ ಪೆಟ್ರೋಲೂ ಸಹ, ತಾವು ಪಡೆಯಲು ಆಶಿಸುವ ವಿಶೇಷ ಪದಕಗಳ ಸಂಪಾದನೆಗಾಗಿ ವಿನಿಯೋಗಿಸಿ ಕೊಳ್ಳಬಹುದು.

ಒಂದು ದಳವು ವರ್ಷಾಂತ್ಯದಲ್ಲಿ ಒಂದು ದೀರ್ಘ ಅವಧಿಯ ಶಿಬಿರವನ್ನೂ (ಈ ಶಿಬಿರದಲ್ಲಿ ದಳದ ಎಲ್ಲ ಸದಸ್ಯರೂ ಭಾಗವಹಿಸುವಂತಿರಬೇಕು) ಮಧ್ಯಂತರದಲ್ಲಿ 2–3 ತಿಂಗಳಿಗೊಮ್ಮೆ, ಅಲ್ಪಕಾಲಿಕವಾದ, ಹಲವಾರು ತ್ರೈಮಾಸಿಕ ಶಿಬಿರಗಳನ್ನೂ ನಡೆಸುವುದು ಉತ್ತಮ. ಇಷ್ಟೇ ಅಲ್ಲದೇ ಗೌರವಾನ್ವಿತ ನ್ಯಾಯ ಸಭೆಯ ಅಧಿಕೃತ ಒಪ್ಪಿಗೆಯೊಡನೆ ಪ್ರತಿ ತ್ರೈಮಾಸಿಕ ಅವಧಿಗೂ ಒಂದೆರಡು ಪೆಟ್ರೋಲ್ ಶಿಬಿರಗಳನ್ನು ಸಂಘಟಿಸುವುದು ಸೂಕ್ತವಾಗಿರುತ್ತದೆ. ಪ್ರವೀಣತಾ ಪದಕ ತರಬೇತಿ ಶಿಬಿರಗಳನ್ನೂ ಸಹ ಅವಶ್ಯಕತೆಗೆ ತಕ್ಕಂತೆ ನಡೆಸಬೇಕು.

**ವಾರ್ಷಿಕ ಶಿಬಿರಗಳು:** ಬೇಸಿಗೆ ರಜಾ ದಿನಗಳು ವಾರ್ಷಿಕ ಶಿಬಿರಗಳನ್ನು ನಡೆಸಲು ಅತ್ಯುತ್ತಮ ಕಾಲಾವಧಿಯಾಗಿದೆ. ಆದಷ್ಟೂ ಮುಂಚಿತವಾಗಿ ಶಿಬಿರವನ್ನು ನಡೆಸುವ ಸ್ಥಳವನ್ನು ಗುರುತಿಸಿ, ಅದನ್ನು ಕಾಯ್ದಿರಿಸಬೇಕು. ಕಾಯ್ದಿರಿಸಿದ ನಂತರವೇ ಆ ಸ್ಥಳದ ಬಗ್ಗೆ ದಳಕ್ಕೆ ಪ್ರಕಟಣೆ ನೀಡಬೇಕು.

**ಸೂಕ್ತ ಸ್ಥಳದ ಆಯ್ಕೆ:** ಒಳ್ಳೆಯ ಶಿಬಿರ ಕ್ಷೇತ್ರದಲ್ಲಿ ಹಲವಾರು ಸೌಕರ್ಯಗಳಿರಬೇಕು.

(1) ಮೊದಲನೆಯದಾಗಿ, ಸ್ಥಳವು ಪ್ರಕೃತಿ ಸೌಂದರ್ಯದಿಂದ ತುಂಬಿ ತುಳುಕಬೇಕು. ಶಿಬಿರ ಕ್ಷೇತ್ರವಂತೂ, ಸುಂದರ ತಾಣವಾಗಿರಬೇಕು. ಆಸು ಪಾಸಿನಲ್ಲಿ, ಶಿಬಿರದ ಅವಧಿಯಲ್ಲಿ ಸ್ಕೌಟುಗಳು ವೀಕ್ಷಿಸಬಹುದಾದ, ಚಾರಣ ನಡೆಸಬಹುದಾದ ಇತರ ನಿಸರ್ಗದತ್ತ ಪ್ರೇಕ್ಷಣೀಯ ಸ್ಥಳಗಳೂ ಇರಬೇಕು. ಇದರಿಂದ ಶಿಬಿರದ ಅವಧಿಯಲ್ಲಿ ಸ್ಕೌಟುಗಳು ಹೊರ ಸಂಚಾರ ನಡೆಸಲು, ಅನುಕೂಲಕರ ವಾಗಿರುತ್ತದೆ. ಜಾತ್ರೆಗಳು ನಡೆಯುವ ಅಥವಾ ಹೆಚ್ಚು ಜನರು ಸೇರುವ ಸ್ಥಳಗಳನ್ನು ಆದಷ್ಟೂ ದೂರ ಮಾಡಬೇಕು. ಅಂತಹ ಸ್ಥಳಗಳನ್ನು ಆಯ್ಕೆ ಮಾಡಬಾರದು. ಹಾಗೆಂದು ಶಿಬಿರ ಸರಂಜಾಮುಗಳನ್ನು ಹೊರಲು ಅತಿ ಕಷ್ಟಕರವಾದ ಪರ್ವತ ಪ್ರದೇಶಗಳನ್ನೂ ಆರಿಸಿಕೊಳ್ಳಬಾರದು.

(2) ಸಾಧ್ಯವಾಗುವುದಾದರೆ ಕ್ಷೇತ್ರವು ನದೀ ದಡದಲ್ಲೋ, ಕೆರೆ ಕಟ್ಟೆಗಳ ಬದಿಯಲ್ಲೋ ಇದ್ದರೆ ಒಳ್ಳೆಯದು. ಶಿಬಿರದ ಆಸುಪಾಸಿನಲ್ಲಿ ಹರಿಯುವ ನೀರು ಇರುವುದಾದರೆ, ಆ ಪ್ರದೇಶದ ಪ್ರಾಮುಖ್ಯತೆಯು ನೂರುಪಟ್ಟು ಹೆಚ್ಚುತ್ತದೆ.

(3) ಶಿಬಿರದ ಒಟ್ಟು ಪ್ರದೇಶದಲ್ಲಿ ನೀರು ನಿಲ್ಲದೆ ಬಸಿದು/ಹರಿದು ಹೋಗುವಂತಿರಬೇಕು. ಪೆಟ್ರೋಲ್‌ಗಳ ಮತ್ತು ಸ್ಕೌಟರುಗಳ ಗುಡಾರಗಳನ್ನು ಹಾಕುವ ಪ್ರದೇಶವು ಸ್ವಲ್ಪ ಎತ್ತರದಲ್ಲಿರುವುದು ಒಳಿತು. ಮಳೆ ಬಂದಾಗ ನೆರೆ ಬಂದು, ಜಲಾವೃತವಾಗುವ ಸಾಧ್ಯತೆ ಇರುವುದರಿಂದ ಗುಡಾರಗಳನ್ನು ಕೆಳವಮಟ್ಟದ ಪ್ರದೇಶದಲ್ಲಿ ಹಾಕಬಾರದು. ಎಂತಹ ಹದಗೆಟ್ಟ ವಾತಾವರಣದಲ್ಲಿಯೂ ಶಿಬಿರವು ಸುರಕ್ಷಿತವಾಗಿರುವಂತಹ ಪ್ರದೇಶವನ್ನು ಆರಿಸಿಕೊಳ್ಳಬೇಕು.

(4) ಶಿಬಿರಕ್ಕೆ ಬಸ್ಸುಗಳು, ಕಾರುಗಳು ಮತ್ತು ಬಂಡಿಗಳು ಸುಲಭವಾಗಿ ಬಂದು ಹೋಗುವಂತೆ ಇದ್ದರೆ ಉತ್ತಮ. ಸ್ಕೌಟುಗಳು ಸಾಮಾನ್ಯವಾಗಿ ಬಸ್ಸುಗಳು, ರೈಲುಗಳಲ್ಲಿ ಪ್ರಯಾಣಿಸುವುದರಿಂದ, ಆ ನಿಲ್ದಾಣಗಳಿಂದ ಶಿಬಿರವನ್ನು ಸುಲಭವಾಗಿ ಸೇರಿಕೊಳ್ಳುವಂತಿರಬೇಕು.

(5) ಕುಡಿಯುವ ನೀರಿಗೆ, ಅಡಿಗೆಗೆ ಮತ್ತು ಸ್ನಾನಕ್ಕೆ ಒಳ್ಳೆಯ ನೀರಿನ ವ್ಯವಸ್ಥೆ ಇರಬೇಕು. ಅಡಿಗೆಗೂ, ಶಿಬಿರಾಗ್ನಿಗೂ ಸೌದೆಯು ದೊರಕುವಂತಿರಬೇಕು.

(6) ಮಾರುಕಟ್ಟೆ ಅಥವಾ ಅಂಗಡಿ ಸಾಲುಗಳು ಸಾಕಷ್ಟು ಹತ್ತಿರವಿದ್ದು, ಅವಶ್ಯಕ ವಸ್ತುಗಳನ್ನು ಕೊಂಡು ತರುವಂತಿರಬೇಕು.

(7) ತಾಜಾ ತರಕಾರಿ, ಹಣ್ಣುಹಂಪಲು ಮತ್ತು ಹಾಲು ಮೊಸರು ಸರಬರಾಜು/ ಸಿಗುವಂತಿದ್ದರೆ ಒಳ್ಳೆಯದು.

(8) ತುರ್ತು ಸಂದರ್ಭಗಳಲ್ಲಿ, ಆಸ್ಪತ್ರೆ ಇರುವ ಅಥವಾ ಕನಿಷ್ಠ ಡಾಕ್ಟರ್ ಸೇವೆಯು ಲಭ್ಯವಿರುವ ಊರು ಪಕ್ಕದಲ್ಲಿದ್ದರೆ ಅನುಕೂಲ.

(9) ಶಿಬಿರ ಕ್ಷೇತ್ರದಲ್ಲಿ, ಆಟಗಳನ್ನಾಡಲೂ, ಬಯಲು ಚಟುವಟಿಕೆಗಳಿಗೂ ಸಾಕಷ್ಟು ಮೈದಾನವೂ, ಗಿಡ, ಮರಗಳಿಂದ ಕೂಡಿದ ವನಪ್ರದೇಶವೂ ಇರಬೇಕು.

(10) ಈ ಎಲ್ಲಾ ಅವಶ್ಯಕ ಅಂಶಗಳ ಜೊತೆಗೆ ಶಿಬಿರ ಕ್ಷೇತ್ರದಲ್ಲಿ ಅಥವಾ ಅದರ ಸಮೀಪದಲ್ಲಿ ಹವಾಮಾನ ವೈಪರೀತ್ಯಗಳ ಸಂದರ್ಭದಲ್ಲಿ ರಕ್ಷಿಸಿಕೊಳ್ಳಲು

ಉಪಯೋಗಕ್ಕೆ ಬರುವ, ಯಾವುದೇ ರೀತಿಯ ಕಟ್ಟಡವಾದರೂ ಇದ್ದರೆ, ಅದೊಂದು ವಿಶಿಷ್ಟ ರೀತಿಯ ಅನುಕೂಲವೆನ್ನಬೇಕು.

ಪ್ರಚಾರ: ವಾರ್ಷಿಕ ಶಿಬಿರವೇ ಏಕೆ? ಎಲ್ಲಾ ಶಿಬಿರಗಳಿಗೂ ಸಾಕಷ್ಟು ಮುಂಚಿನಿಂದ ಪ್ರಚಾರ ಸಿಗುವುದಾದರೆ ಶಿಬಿರದ ಪ್ರಾಮುಖ್ಯತೆಯು ಹೆಚ್ಚುತ್ತದೆ. ದಳದ ಸದಸ್ಯರಲ್ಲಿ ಶಿಬಿರದ ಬಗ್ಗೆ ಯೋಚಿಸಲು, ಶಿಬಿರದಲ್ಲಿ ಭಾಗವಹಿಸಲು, ಯಾವ ಮಟ್ಟಿಗೆ ಕಾತುರತೆಯನ್ನು ಉಂಟುಮಾಡುತ್ತದೆಯೋ, ಆ ಮಟ್ಟಿಗೆ ಶಿಬಿರವು ಯಶಸ್ವಿ ಆಗುವುದೆಂದು ಭಾವಿಸಬಹುದು. ಶಿಬಿರದ ಕ್ಷೇತ್ರವು, ಅದರಲ್ಲಿರುವ ಸೌಕರ್ಯಗಳು, ದಳವು ರೂಪಿಸುವ ಕಾರ್ಯ ಕ್ರಮಗಳು, ಶಿಬಿರದಲ್ಲಿ ಸ್ಕೌಟುಗಳ ಜೀವನದ ರೀತಿ ನೀತಿಗಳು, ಈ ಎಲ್ಲವನ್ನೂ ಖಚಿತವಾಗಿ, ಆಕರ್ಷಕವಾಗಿ, ಪ್ರಚೋದಕವಾಗಿ, ಉಲ್ಲಾಸಕರವಾಗಿರುವಂತೆ ದಳದ ನೋಟೀಸ್ ಬೋರ್ಡ್‌ನಲ್ಲಿ ಬಿಂಬಿಸಬೇಕು.

ಆರಿಸಿಕೊಂಡ ಶಿಬಿರ ಕ್ಷೇತ್ರದ ಆಕರ್ಷಕ, ರಮಣೀಯ ಬಿಂಬ ಚಿತ್ರಗಳನ್ನೂ, ಹೊರಾಂಗಣ ಚಟುವಟಿಕೆ, ಚಾರಣಗಳ ಸ್ಥೂಲವಾದ, ಆಕರ್ಷಕವಾದ ವಿವರಗಳನ್ನೂ ಪ್ರದರ್ಶಿಸಬೇಕು. ಪ್ರಕಟಣೆಗಳನ್ನು ಓದಿಕೊಂಡ, ಬಿಂಬಚಿತ್ರಗಳನ್ನು ನೋಡಿದ ಸ್ಕೌಟು, ತಾನಾಗಲೇ ಶಿಬಿರದಲ್ಲಿ ಭಾಗವಹಿಸಿದಂತೆ ಊಹಿಸಿಕೊಂಡು, ಭಾಗವಹಿಸಲೇಬೇಕೆಂಬ ಛಲವುಳ್ಳವನಾಗಿ, ಭಾಗವಹಿಸಲು ಕಾತುರನಾಗುತ್ತಾನೆ. ಕೈಬರಹ ಚಿತ್ರಗಳು, ವಿಷಯ ಸೂಚೀಚಿತ್ರಗಳು, ವ್ಯಂಗ್ಯ ಚಿತ್ರಗಳು (ಕಾರ್ಟೂನ್ಸ್) ಸವಿವರವಾಗಿ, ನೋಟೀಸ್ ಬೋರ್ಡ್‌ನಲ್ಲಿ ಪ್ರದರ್ಶಿತವಾಗಬೇಕು. ಶಿಬಿರ ಜೀವನ, ಅಲ್ಲಿನ ಶೈಕ್ಷಣಿಕ, ಮನೋರಂಜಕ ಕಾರ್ಯಕ್ರಮಗಳೂ, ಒಲವು-ನಲಿವುಗಳೂ ಆಕರ್ಷಕವಾಗಿ ಪ್ರದರ್ಶಿತವಾಗಬೇಕು. ಶಿಬಿರದ ಸಾಮಾನ್ಯ ದಿನಚರಿ ಮತ್ತು ದಿನನಿತ್ಯದ ವಿಶೇಷ ಕಾರ್ಯಕ್ರಮಗಳೂ ಸಹ ಅನುಸೂಚಿತವಾಗಬಹುದು.

ಪ್ರತಿ ಸ್ಕೌಟೂ ಸಲ್ಲಿಸಬೇಕಾದ ಶಿಬಿರ ಶುಲ್ಕ, ಸಂದಾಯ ಮಾಡಬೇಕಾದ ಕೊನೆಯ ದಿನಾಂಕಗಳನ್ನೂ, ಫಲಕದ ಮೇಲೆ ಸೂಚಿಸಬೇಕು.

ಶಿಬಿರವು ಪ್ರಾರಂಭವಾಗಲು, ಇನ್ನೇನು ಒಂದು ವಾರವಿದೆ, ಎನ್ನುವಾಗ ಶಿಬಿರಕ್ಕೆ ಸಂಬಂಧಿಸಿದ ಅಂತಿಮ, ಪೂರ್ವಭಾವಿ ಸೂಚನೆಯನ್ನು ಪ್ರದರ್ಶಿಸಬೇಕು. ಇದರಲ್ಲಿ ಶಿಬಿರದ ಪೂರ್ಣವಿವರಗಳು, ಸ್ಕೌಟುಗಳು ಒಟ್ಟು ಸೇರುವ ಸ್ಥಳ, 'ಡೆನ್'ನಿಂದ ಹೊರಡುವ ದಿನ, ವೇಳೆ, ಪ್ರತಿಯೊಬ್ಬರೂ ಶಿಬಿರಕ್ಕೆ ತರಬೇಕಾದ ಸಾಮಾನು ಸರಂಜಾಮುಗಳು, ಶಿಬಿರಕ್ಕೆ ಭೇಟಿ ನೀಡಲಿರುವ ತಾಯ್ತಂದೆಯರು, ಹಿತೈಷಿಗಳು ಮತ್ತು ಅವರುಗಳು ಬರಬಹುದಾದ ದಿನಾಂಕ, ವೇಳೆ, ಅವರಿಗೆ ಬರಲು ಇರುವ / ಒದಗಿಸುವ ವಾಹನ ಸೌಕರ್ಯ ಇತ್ಯಾದಿ ಸಹ ತಿಳಿಸಬೇಕು. ಈ ಅಂತಿಮ

ಸೂಚನೆಯಲ್ಲಿ ಶಿಬಿರದ ವಿಳಾಸವನ್ನೂ, ದೂರವಾಣಿ ಸಂಖ್ಯೆಯನ್ನೂ ತಿಳಿಸಬೇಕು. ಈ ಬಗ್ಗೆ ಮುಂದಾಗಿ ತಾಯ್ತಂದೆಯರಿಗೆ ತಿಳಿಸಿ, ಹಾಗೆ ಅವರು ಬರುವುದಾದರೆ, ಮುಂದಾಗಿ ತಿಳಿಸಲು ಕೋರಬೇಕು.

ತಾಯ್ತಂದೆಯರು/ಪೋಷಕರು, ಹಿತೈಷಿಗಳು, ಅವರ ಮಕ್ಕಳು ಶಿಬಿರದಲ್ಲಿ ಭಾಗವಹಿಸುವ ಬಗ್ಗೆ, ಅನುಮೋದನಾ ಪತ್ರವನ್ನು ನೀಡಬೇಕಾಗಿ ಸಹ ಕೋರಬೇಕು. ಅವರ ಮಕ್ಕಳು ಶಿಬಿರದಿಂದ ವಾಪಸಾಗುವ ದಿನಾಂಕ, ವೇಳೆಯನ್ನು ಸಹ ಅವರಿಗೆ ತಿಳಿಸಬೇಕು.

**ಶಿಬಿರಕ್ಕೆ ಪೂರ್ವಸಿದ್ಧತೆ:** ಶಿಬಿರಕ್ಕೆ ಮುಂಚಿತವಾಗಿ ಈ ಕೆಳಕಾಣಿಸಿರುವ 6 ಅಂಶಗಳ ಬಗ್ಗೆ ಸ್ಕೌಟ್ ಮಾಸ್ಟರರು, ಪೂರ್ವಭಾವೀ ಕ್ರಮಗಳನ್ನು ತೆಗೆದುಕೊಳ್ಳಬೇಕು. ಆದಷ್ಟೂ ಮುಂಚೆ ಗ್ರೂಪ್ ಕಮಿಟಿಯ ಸಹಾಯವನ್ನು ತೆಗೆದುಕೊಳ್ಳಬೇಕು.

**(i) ವಾಹನ ಸೌಕರ್ಯ (ii) ವಸತಿ (iii) ಊಟೋಪಚಾರ (iv) ಸಹಾಯಕರು (v) ಕಾರ್ಯಕ್ರಮ ಮತ್ತು ಚಟುವಟಿಕೆಗಳು (vi) ಪ್ರೇಕ್ಷಕರ ದಿನ**

**ವಾಹನ ಸೌಕರ್ಯ:** ಸಾಮಾನು, ಸರಂಜಾಮು ಸಾಗಿಸಲು, ಬಾಲಕರು, ಮಾಸ್ಟರುಗಳು, ಸಹಾಯಕರು, ಪೋಷಕರು, ತಾಯ್ತಂದೆಯರು, ಹಿತೈಷಿಗಳು ಇತ್ಯಾದಿ, ಶಿಬಿರವನ್ನು ಸೇರಲು, ಕಾರ್ಯಕ್ರಮದ ಬಳಿಕ ವಾಪಸಾಗಲು ವ್ಯವಸ್ಥೆ ಮಾಡುವುದು. ರೈಲೇ? ಬಸ್ಸೇ? ಇತರೇ ವಾಹನ (ಕಾರು, ವ್ಯಾನು ಇತ್ಯಾದಿ) ಸೌಕರ್ಯವೇ? ಅಥವಾ ಅವುಗಳ ಕೂಡು ವ್ಯವಸ್ಥೆಯೇ? ಹೀಗೆ ಚರ್ಚಿಸಿ, ಒಮ್ಮತಕ್ಕೆ ಬರಬೇಕು, ತಯಾರಾಗಬೇಕು. ಯಾವುದು? ಎಷ್ಟು? ಹೇಗೆ? ದಿನ? ವೇಳೆ ಇತ್ಯಾದಿ ವಿವರವಾಗಿ, ಮುಂಚಿತವಾಗಿ, ಯೋಜಿತ ರೀತಿಯಲ್ಲಿ ವ್ಯವಸ್ಥೆ ಮಾಡಬೇಕು. ತಾಯಿ ತಂದೆಯರು/ ಪೋಷಕರು/ಹಿತೈಷಿಗಳ ಸಹಾಯವು ಸಿಗುವುದಿದ್ದಲ್ಲಿ ಅದನ್ನು ಬಳಸಿಕೊಳ್ಳಬೇಕು. ರೈಲು/ಬಸ್ಸು ಪ್ರಯಾಣಗಳಲ್ಲಿ ರಿಯಾಯ್ತಿ ದೊರಕುವುದಿದ್ದರೆ ಜಿಲ್ಲಾ ಕಮಿಷನರು/ರಾಜ್ಯ ಕಾರ್ಯಾಲಯದಿಂದ ಮುಂದಾಗಿ ಸೂಕ್ತ ಕ್ರಮ ತೆಗೆದುಕೊಳ್ಳಬೇಕು.

**ವಸತಿ:** ಶಿಬಿರ ಕ್ಷೇತ್ರದಲ್ಲಿ ಟೆಂಟ್‌ಗಳು ದೊರಕುವುದಾದರೆ, ತೊಂದರೆಯೇ ಇರುವುದಿಲ್ಲ. ಹಾಗಿಲ್ಲದಿದ್ದ ಪಕ್ಷದಲ್ಲಿ ಅವುಗಳನ್ನು ಬೇರೆ ಮೂಲಗಳಿಂದ ಪಡೆಯಬೇಕು. ಮುಂಭಾವಿಯಾಗಿ ಪಡೆದು ಶಿಬಿರ ಕ್ಷೇತ್ರಕ್ಕೆ ಸಾಗಿಸುವ ವ್ಯವಸ್ಥೆ ಮಾಡಬೇಕು. ಗ್ರೂಪ್ ಕಮಿಟಿಯ ಸದಸ್ಯರಾರಾದರೂ ಜವಾಬ್ದಾರಿ ತೆಗೆದುಕೊಂಡರೆ ಕೆಲಸವು ಸುಲಭವಾಗುತ್ತದೆ.

**ಊಟೋಪಚಾರ:** ಪಡಿತರ ವ್ಯವಸ್ಥೆಯಡಿಯಲ್ಲಿ ದೊರಕುವ ವಸ್ತುಗಳನ್ನು ಜಿಲ್ಲಾ ಆಯುಕ್ತರ ಸಹಾಯದಿಂದ ಪಡೆಯಲು ಪ್ರಯತ್ನಿಸಬಹುದು. ತಾಜಾ ತರಕಾರಿ, ಹಣ್ಣು, ಹಾಲು, ಮೊಸರು, ಸೌದೆ ಇತ್ಯಾದಿಗಳಿಗೆ ಮುಂಚಿತವಾಗಿಯೇ ವ್ಯವಸ್ಥೆ ಮಾಡಬೇಕು.

**ಸಹಾಯಕರು:** ಸಹಾಯಕ ಸ್ಕೌಟ್ ಮಾಸ್ಟರ ಜೊತೆಗೆ ಒಬ್ಬಿಬ್ಬರು ರೋವರ್ ಸ್ಕೌಟುಗಳ ಸಹಾಯವನ್ನು ಪಡೆಯಬೇಕು. ಶಿಬಿರಕ್ಕಾಗಿ ಸಿದ್ಧತೆಯು ಆರಂಭವಾಗುತ್ತಿದ್ದಂತೆಯೇ ಅವರ ಸಹಾಯವನ್ನು ಕೋರಬೇಕು. ಇತರ ಎಷ್ಟೋ ರೀತಿಯ ಸಹಾಯಗಳು (ಉದಾ: ಅಡಿಗೆಮನೆ, ಉಗ್ರಾಣ, ಪ್ರೇಕ್ಷಣೀಯ ಸ್ಥಳಗಳ ಭೇಟಿ, ಉಸ್ತುವಾರಿ, ರಾತ್ರಿವೇಳೆಯಲ್ಲಿ ರಕ್ಷಣೆ, ಸಾರ್ವಜನಿಕ ಸಂಪರ್ಕ, ಪ್ರಥಮ ಚಿಕಿತ್ಸೆ ಇತ್ಯಾದಿ) ಹಾಗಿರಲಿ, ಶಿಬಿರದ ವಿಶೇಷ ಕಾರ್ಯಕ್ರಮಗಳು ಮತ್ತು ಆಟಗಳಲ್ಲಿ ಅವರ ಪಾತ್ರವು ಮಹತ್ತರವಾದುದು.

**ಕಾರ್ಯಕ್ರಮಗಳು/ಚಟುವಟಿಕೆಗಳು:** ಇದು ಸ್ಕೌ.ಮಾ.ರ ಜವಾಬ್ದಾರಿ ಆಗಿದೆ. ಗೌರವಾನ್ವಿತ ನ್ಯಾಯ ಸಭೆಯಲ್ಲಿ ಸಹ ಪ್ರಸ್ತಾಪ ಮಾಡಿ, ಸಲಹೆ ಪಡೆಯಬೇಕು. ಹಾಗಾದರೆ ಮಾತ್ರ ಕಾರ್ಯಕ್ರಮಗಳು ತೃಪ್ತಿಕರವಾಗಿರುತ್ತವೆ. ಪ್ರೇಕ್ಷಣೀಯ ಸ್ಥಳಗಳ ಭೇಟಿ ಮತ್ತು ಹೊರ ಸಂಚಾರಗಳನ್ನು ಎಚ್ಚರವಹಿಸಿ, ಯೋಜಿಸಿ ನಿರ್ವಹಿಸಬೇಕು.

**ಪ್ರೇಕ್ಷಕರ ದಿನ:** ಗ್ರೂಪ್ ಕಮಿಟಿಯ ಸದಸ್ಯರು, ತಾಯಿ ತಂದೆಯರು, ಪೋಷಕರು ಮತ್ತು ಹಿತೈಷಿಗಳು, ಶಿಬಿರಕ್ಕೆ ಭೇಟಿ ನೀಡುವಂತೆ ವ್ಯವಸ್ಥೆ ಮಾಡುವುದು ಬಹಳ ಅಪೇಕ್ಷಣೀಯವಾದುದು. ಅವರೆಲ್ಲರೂ ಒಟ್ಟಾಗಿ ಒಂದು ವಾಹನದಲ್ಲಿ ಬರುವುದು, ಶಿಬಿರವನ್ನು ಒಟ್ಟಾಗಿ ಪರಿಶೀಲಿಸುವುದು, ಆಟಗಳು, ಪ್ರದರ್ಶನಗಳನ್ನು ವೀಕ್ಷಿಸುವುದು, ಉಪಹಾರವನ್ನು ಸ್ವೀಕರಿಸುವುದು ಹೀಗೆ ಮಾಡುವುದಾದರೆ ಒಳ್ಳೆಯದು. ಮುಂದುವರಿದು ನಿಂತು, ಶಿಬಿರಾಗ್ನಿ ಕಾರ್ಯಕ್ರಮದಲ್ಲಿ ಭಾಗವಹಿಸುವುದು, ದಳದ ಮಕ್ಕಳೊಡನೆ ರಾತ್ರಿ ಊಟದಲ್ಲಿ ಪಾಲ್ಗೊಂಡು, ಒಟ್ಟಾಗಿ ಹಿಂದಿರುಗುವುದಾದರೆ, ಈ ಎಲ್ಲಾ 'ರೇ'ಗಳೂ, ಅನುಕೂಲವಾಗುವುದಾದರೆ ಮತ್ತೂ ಒಳ್ಳೆಯದು.

**ಶಿಬಿರದೆಡೆಗೆ ಪ್ರಯಾಣ:**

**ಪ್ರಾರಂಭ:** ಶಿಬಿರಕ್ಕೆ ಹೊರಡುವ ದಿನ ಬಂದೇ ಬಿಟ್ಟಿತು. ಹೊರಡಲು ಒಂದೆರಡು ಗಂಟೆಗಳು ಮುಂಚಿತವಾಗಿ, ಎಲ್ಲಾ ಸ್ಕೌಟುಗಳೂ ದಳದ ಸಭಾಲಯ/ಶಾಲಾ ಆವರಣದಲ್ಲಿ ಒಟ್ಟು ಸೇರಬೇಕು. ಹಾಗೆ ಬರುವಾಗ ನಿಗದಿಪಡಿಸಿದ ಹಾಸಿಗೆ

ಬಟ್ಟೆ ವಸ್ತುಗಳನ್ನು, ಎಲ್ಲರೂ ತರಬೇಕು. ಪೆ.ಲೀಗಳು ಪೂರ್ವಭಾವೀ ಪರಿಶೀಲನೆ ನಡೆಸಿ, ನಿಗದಿಪಡಿಸಿದ ಎಲ್ಲಾ ವಸ್ತುಗಳನ್ನೂ ಸ್ಕೌಟುಗಳು ತಂದಿರುವ ಬಗ್ಗೆ ಖಾತರಿ ಮಾಡಿಕೊಳ್ಳಬೇಕು. ಅಥವಾ/ಆ ಬಳಿಕ, ಸ್ಕೌ.ಮಾ.ರೂ ಪರಿಶೀಲನೆ ನಡೆಸಿ ಆ ಬಗ್ಗೆ ದೃಢಪಡಿಸಿಕೊಳ್ಳಬೇಕು.

ಶಿಬಿರಕ್ಕೆ ಬೇಕಾದ ಎಲ್ಲಾ ದಿನಸಿ ವಸ್ತುಗಳೂ, ಸಾಮಾನು ಸರಂಜಾಮುಗಳೂ, ಉಪಕರಣಗಳೂ, ಒಂದೂ ಬಿಡದೆ ಬಂದಿರುವ ಬಗ್ಗೆ ಸಹ, ಸ್ಕೌಟ್ ಮಾಸ್ಟರರು, ಸಹಾಯಕ ಸ್ಕೌಟ್ ಮಾಸ್ಟರು, ಸಹಾಯಕರುಗಳು ಪರಿಶೀಲಿಸಬೇಕಾಗುತ್ತದೆ. ಅಷ್ಟೇ ಅಲ್ಲ, ಶೈಕ್ಷಣಿಕ ಉಪಕರಣಗಳೂ ಬಂದಿವೆಯೇ ಪರಿಶೀಲಿಸಬೇಕು. ಎಲ್ಲರೂ ಎಲ್ಲಾ ವಸ್ತುಗಳನ್ನು ತಂದಿರುವ, ಎಲ್ಲಾ ವಸ್ತುಗಳೂ ಬಂದಿರುವ ಬಗ್ಗೆ ಮನವರಿಕೆ ಆದ ಮೇಲೆ ಪ್ರಯಾಣವನ್ನು ಪ್ರಾರಂಭಿಸಬೇಕು.

**ಪ್ರಯಾಣ:** (1) ರೈಲು, ಬಸ್ಸುಗಳಲ್ಲಿ ಇತರ ಪ್ರಯಾಣಿಕರಿಗೆ ಅನಾನುಕೂಲವಾಗದಂತೆ ಎಚ್ಚರವಹಿಸಬೇಕು (2) ನಮ್ಮ ನಡೆವಳಿಕೆಯಿಂದ ಸಂಸ್ಥೆಯ ಘನತೆಯನ್ನು ಕಾಪಾಡಿಕೊಳ್ಳಬೇಕು (3) ಸಾಮಾನು, ಸರಂಜಾಮುಗಳನ್ನು ಒಪ್ಪ ಓರಣವಾಗಿಟ್ಟುಕೊಂಡು, ಅವುಗಳನ್ನು ರಕ್ಷಿಸಿಕೊಳ್ಳಬೇಕು. (4) ನಡಿಗೆಯ ಸಮಯದಲ್ಲಿ ಪೆಟ್ರೋಲ್‌ವಾರು, ಹಾದಿಯನ್ನು ಕ್ರಮಿಸಬೇಕು. (5) ಎಲ್ಲರೂ ಒಟ್ಟಿಗಿದ್ದು ಶಿಸ್ತು, ಸಮಗ್ರತೆಗಳನ್ನು ಕಾಪಾಡಿಕೊಳ್ಳಬೇಕು (6) ಗಿಡ, ಮರಗಳು, ಪಶು ಪ್ರಾಣಿ, ಪಕ್ಷಿಗಳನ್ನು ಗಮನಿಸುತ್ತಾ ಅವುಗಳಿಗೆ ಹಾನಿಯಾಗದಂತೆ ಎಚ್ಚರವಹಿಸಬೇಕು.

**ಶಿಬಿರವನ್ನು ಸೇರಿಕೊಳ್ಳುವುದು:** ದಳದ ಸದಸ್ಯರು ಶಿಬಿರವನ್ನು ಸೇರಿಕೊಂಡ ಕೂಡಲೇ ಮಾಡಬೇಕಾದ ಕೆಲಸಗಳು ಎರಡು:

(1) ಶಿಬಿರದ ಅಡಿಗೆ ಮನೆ

(2) ಶಿಬಿರದ ಪಾಕೀಜು ವ್ಯವಸ್ಥೆ (ಶಾಶ್ವತವಾದ ವ್ಯವಸ್ಥೆ ಇಲ್ಲದ ಕಡೆ ಕಕ್ಕಸು ಮತ್ತು ಕಕ್ಕಸು ಗುಂಡಿಗಳು)

ಈ ಎರಡೂ ಕೆಲಸಗಳ ಬಗ್ಗೆ ಕೂಡಲೇ ಗಮನ ಹರಿಸಬೇಕು. ಇದು ಬಹಳ ಮುಖ್ಯ.

ಪ್ರತಿ ಪೆಟ್ರೋಲೂ ತನಗೆ ನಿಗಸಿಪಡಿಸಿದ ಪ್ರದೇಶದಲ್ಲಿ ತನ್ನದೇ ಆದ ಅಡಿಗೆ ಮನೆಯನ್ನೂ, ಶಾಶ್ವತ ವ್ಯವಸ್ಥೆ ಇಲ್ಲದ ಕಡೆ ಕಕ್ಕಸನ್ನೂ ಸೂಕ್ತ ಸ್ಥಳದಲ್ಲಿ

ರಚಿಸಿಕೊಳ್ಳಬೇಕು. ಈ ಎರಡೂ ಕೆಲಸಗಳನ್ನು, ಕೂಡಲೇ ಒಂದೇ ಅವಧಿಯಲ್ಲಿ ಮಾಡಿ ಮುಗಿಸಬೇಕು.

ಈ ಕೆಲಸಗಳ ಜೊತೆಗೆ, ದಿನಸಿ ಸಾಮಾನುಗಳನ್ನು ಜೋಪಾನ ಮಾಡಲು, ಒಂದು ಸಣ್ಣ ಒಪ್ಪಾರವನ್ನು ಹಾಕಿಕೊಳ್ಳಬೇಕು. ಎಲ್ಲಾ ಕೆಲಸಗಳನ್ನೂ ಸುರಕ್ಷಿತವಾಗಿರುವುದನ್ನು (ಮಳೆ ಬರಲಿ, ಬಿಸಿಲು ಕಾಯಲಿ) ದೃಷ್ಟಿಯಲ್ಲಿಟ್ಟುಕೊಂಡು ಮಾಡಬೇಕು.

**ಶಿಬಿರದ ವಿನ್ಯಾಸ:**

ವಿಶಾಲವಾದ ಕ್ಷೇತ್ರದಲ್ಲಿ ಅರ್ಧ ಚಂದ್ರಾಕಾರದಲ್ಲಿ ಸ್ಕೌಟ್ ಶಿಬಿರವನ್ನು ವಿನ್ಯಾಸಗೊಳಿಸಲಾಗುತ್ತದೆ. ಒಟ್ಟು ಪ್ರದೇಶವನ್ನು ಪೆಟ್ರೋಲ್‌ಗಳಿಗೆ ಹಂಚಲಾಗುತ್ತದೆ. ಹಂಚಿಕೆಯಾದ ಪ್ರದೇಶದಲ್ಲಿ ಪೆಟ್ರೋಲ್‌ಗಳು, ತಮಗೆ ಬೇಕಾದ ಎಲ್ಲಾ ಅನುಕೂಲಗಳನ್ನು ಮಾಡಿಕೊಳ್ಳುತ್ತಾರೆ. ಪ್ರತಿ ಪೆಟ್ರೋಲ್‌ನ ಸ್ಥಳದಲ್ಲೂ ವಸತಿಗುಡಾರ, ಅದಕ್ಕೆ ಸ್ವಲ್ಪ ದೂರದಲ್ಲಿ ಪೆಟ್ರೋಲ್ ಅಡಿಗೆ ಶಾಲೆ, ಅದಕ್ಕೂ ದೂರದಲ್ಲಿ ಕಕ್ಕಸ್ಸು.

ವಸತಿಗುಡಾರದಲ್ಲಿ, ಸ್ಥಳೀಕವಾಗಿ ದೊರಕುವ ವಸ್ತುಗಳಿಂದ ತಯಾರಿಸಿದ ಉಪಕರಣಗಳು (ಗ್ಯಾಡ್ಜೆಟ್ಸ್) ಅದೇ ರೀತಿ ಅಡಿಗೆ ಶಾಲೆಯಲ್ಲಿ ಸಹ ಸ್ಥಳೀಕವಾಗಿ ಲಭ್ಯವಿರುವ ವಸ್ತುಗಳಿಂದ ತಯಾರಿಸಿದ ಉಪಕರಣಗಳು.

ಕಕ್ಕಸ್ಸುಗಳನ್ನು ಪ್ರತ್ಯೇಕವಾಗಿ, ಸಾಕಷ್ಟು ಗೋಪ್ಯತೆ ಇರುವಂತೆ ಪರದೆಗಳನ್ನು (ಅಥವಾ ತಟಿಕೆ) ಉಪಯೋಗಿಸಿ ಕಟ್ಟಿಕೊಳ್ಳಬೇಕು. ಶಾಶ್ವತ ವ್ಯವಸ್ಥೆ ಇದ್ದರೆ, ಇದರ ಅವಶ್ಯಕತೆ ಇರುವುದಿಲ್ಲ.

ಸ್ಕೌಟ್ ಮಾಸ್ಟರು ಮತ್ತು ಅವರ ಸಹಾಯಕರಿಗಿರುವ ಗುಡಾರಗಳು, ದಿನಸಿ ಸಾಮಾನುಗಳನ್ನಿಡಲೊಂದು ಗುಡಾರ ಹಾಗೆಯೇ ಶೈಕ್ಷಣಿಕ ಸಾಮಾನುಗಳನ್ನು ಇಡಲು ಇನ್ನೊಂದು ಗುಡಾರ ಹೀಗೆ 4–5 ಗುಡಾರಗಳು ಒಟ್ಟಾಗಿ ಅರ್ಧ ವೃತ್ತಾಕಾರದ ಮಧ್ಯೆ, ಪೆಟ್ರೋಲು ಗುಡಾರಗಳ ಎದುರಿನಲ್ಲಿ ಇರುತ್ತವೆ. ಸಹಾಯಕರಿಗೆ ಪ್ರತ್ಯೇಕ ಗುಡಾರವು ಸಾಧ್ಯವಾಗದ ಪಕ್ಷದಲ್ಲಿ, ಅವರು ಸ್ಕೌಟ್ ಮಾಸ್ಟರರ ಗುಡಾರದಲ್ಲೇ ಇರಬಹುದು.

ಸ್ಕೌಟ್ ಮಾಸ್ಟರರ ಗುಡಾರದ ಎದುರಿನಲ್ಲಿ ಸ್ವಲ್ಪ ದೂರದಲ್ಲಿ ಶಿಬಿರದ ಧ್ವಜ ಸ್ತಂಭವಿರುತ್ತದೆ. ಅಲ್ಲಿಂದ ಸ್ವಲ್ಪ ದೂರದಲ್ಲಿ ಮರಗಳ ನೆರಳಿನಲ್ಲಿ ಎಲ್ಲರಿಗೂ ಓದಿಕೊಳ್ಳಲು ಅನುಕೂಲವಾಗುವಂತೆ, ಶಿಬಿರದ ಸೂಚನಾ ಫಲಕವಿರುತ್ತದೆ.

ಶಿಬಿರದಲ್ಲಿ ಪೆಟ್ರೋಲುವಾರು ಅಡಿಗೆ ಮಾಡಿಕೊಳ್ಳಬೇಕು. ಪ್ರತಿ ಪೆಟ್ರೋಲೂ ಅದರದೇ ರೀತಿಯಲ್ಲಿ ಅಡಿಗೆ ಮಾಡಿಕೊಳ್ಳುತ್ತದೆ. ಸ್ಕೌ.ಮಾ.ರು ಮತ್ತಿತರರು ಸರದಿ ಪ್ರಕಾರ, ಪೆಟ್ರೋಲ್‌ಗೊಬ್ಬರಂತೆ ಅತಿಥಿಗಳಾಗಿ ಆಹ್ವಾನಿಸಲ್ಪಡುತ್ತಾರೆ. ಪೆಟ್ರೋಲ್‌ವಾರು ಅಡಿಗೆ ಸಾಧ್ಯವಾಗದ ಪಕ್ಷದಲ್ಲಿ, ಶಿಬಿರದ ಕೇಂದ್ರ ಅಡಿಗೆ ಮನೆ ಇದ್ದು, ಪೆಟ್ರೋಲ್‌ಗಳು ಸರದಿ ಪ್ರಕಾರ, ಒಟ್ಟಿಗೆ, ಪೂರಾ ದಳಕ್ಕೆ ಅಡಿಗೆ ಮಾಡುತ್ತಾರೆ. ಎಲ್ಲರೂ ಸಹ ಭೋಜನ ಮಾಡುತ್ತಾರೆ. ಯಾವುದೇ ರೀತಿಯ ವ್ಯವಸ್ಥೆ ಮಾಡಿಕೊಂಡರೂ, ಪ್ರತಿ ಬಾರಿಯ ಅಡಿಗೆಗೂ, ಅವಶ್ಯಕ ವಸ್ತುಗಳನ್ನು, ಕ್ಲುಪ್ತ ಕಾಲದಲ್ಲಿ ವಿತರಣೆ ಮಾಡಬೇಕು, ಇದಕ್ಕಾಗಿಯೆ ಒಬ್ಬ ಅನುಭವಸ್ಥ ಉಗ್ರಾಣಾಧಿಕಾರಿ ಇರಬೇಕು. ಅವರು ವಿತರಿಸುವ ದಿನಸಿ ಸಾಮಾನುಗಳ ಬಗ್ಗೆ ಗಮನ ಹರಿಸಿ, ಅವಶ್ಯಕತೆಗೆ ತಕ್ಕಂತೆ, ಬೇಕಾದ ವಸ್ತುಗಳು ಮುಂಚಿತವಾಗಿ ಲಭ್ಯವಿರುವಂತೆ ವ್ಯವಸ್ಥೆ ಮಾಡುತ್ತಾರೆ. ಪ್ರತಿ ದಿನವೂ, ಕಾಲ ಕಾಲಕ್ಕೆ ತಯಾರಿಸುವ ಖಾದ್ಯ ವಸ್ತುಗಳ ಪಟ್ಟಿಯನ್ನು ಯೋಜಿಸಿ ಅದರಂತೆ ವಿತರಿಸುತ್ತಾರೆ. ಒಟ್ಟಿನಲ್ಲಿ ಶಿಬಿರ ವಾಸಿಗಳಿಗೆ ಸಮಯಕ್ಕೆ ಸರಿಯಾಗಿ ಸಮತೋಲನ ಆಹಾರವು ದೊರಕುವ ವ್ಯವಸ್ಥೆ ಮಾಡುತ್ತಾರೆ.

**ಸಹಜೀವನ:** ದಳದ ಎಲ್ಲಾ ಸದಸ್ಯರೂ ಹೊರಾಂಗಣದಲ್ಲಿ ಒಟ್ಟಿಗೆ, ನಿಯತ್ತಿನಿಂದ ಜೀವಿಸಲು ಶಿಬಿರವು ಒಂದು ಸದವಕಾಶವನ್ನೊದಗಿಸುತ್ತದೆ. ಪೂರ್ವಯೋಜಿತ, ಸಕ್ರಮ ಕಾರ್ಯಕ್ರಮ, ಉಪಯುಕ್ತವೂ, ಸ್ವಾರಸ್ಯಕರವೂ ಆದ ಚಟುವಟಿಕೆಗಳು, ಇವುಗಳನ್ನು ರೂಪಿಸಿಕೊಂಡರೆ, ಶಿಬಿರವು ಆಕರ್ಷಕವಾಗಿಯೂ, ಯಶಸ್ವಿಯಾಗಿಯೂ ನಡೆದು ಹೋಗುತ್ತದೆ. ಶಿಬಿರವಾಸಿಗಳಲ್ಲಿ ಮೈತ್ರೀಭಾವನೆ ಮತ್ತು ಸಹಭಾಗಿತ್ವಗಳನ್ನು ಉದ್ದೀಪನಗೊಳಿಸುವುದು ಶಿಬಿರಗಳ ಮುಖ್ಯ ಉದ್ದೇಶವಾಗಿದೆ.

ಸ್ಕೌಟುಗಳು ದಿನಪೂರಾ ಉಪಯುಕ್ತ ಚಟುವಟಿಕೆಗಳಲ್ಲಿ ಮಗ್ನರಾಗಿರುತ್ತಾರೆ. ದಿನದ ಕೊನೆಯಲ್ಲಿ, ರಾತ್ರಿ ಊಟದ ಬಳಿಕ, ಮಲಗಲು ವಿಶ್ರಮಿಸುವುದಕ್ಕೆ ಮುಂಚೆ, "ಶಿಬಿರಾನುಭವದ ಪರಾಕಾಷ್ಠತೆ" ಎಂದು ಭಾವಿಸುವ "ಶಿಬಿರಾಗ್ನಿ"ಯ ವಿನೋದಯುತ ಕಾರ್ಯಕ್ರಮವಿರುತ್ತದೆ.

ಶಿಬಿರದ ನಡೆವಳಿಕೆಗಳು ಸ್ಕೌಟ್ ನಿಯಮದ ಮೇಲೆ ಆಧಾರಿತವಾಗಿರುತ್ತವೆ. ಸ್ಕೌಟ್ ಪ್ರತಿಜ್ಞೆಯು ಶಿಬಿರದ ಚೈತನ್ಯವಾಗಿ ಪ್ರವಹಿಸುತ್ತದೆ. ಸ್ಕೌಟುಗಳು ತಮ್ಮ ವಚನಪಾಲನೆಗೆ ಸದಾ ಬದ್ಧರಾಗಿರುತ್ತಾರೆ.

ಪ್ರಾತಃ ಕಾಲದಲ್ಲಿ, ರಾತ್ರಿ ಮಲಗುವ ಮುನ್ನ, ಊಟ ಉಪಹಾರಗಳ ಸಮಯದಲ್ಲಿ ಸರಳವಾದ ಪ್ರಾರ್ಥನೆಯನ್ನು ಸಲ್ಲಿಸುವುದು ಶಿಬಿರದ

ವಿಧಿಯಾಗಿರುತ್ತದೆ. ಇದರಿಂದ ಸ್ಕೌಟುಗಳು ಧ್ಯಾನನಿರತರಾಗಲು ಸಹಾಯಕವಾಗುತ್ತದೆ ಮತ್ತು ದಿನ ಪೂರಾ ಪರಮಾತ್ಮನ ಸಾನ್ನಿಧ್ಯದಲ್ಲಿ ಕಾಲಕಳೆಯುವ ಪ್ರಯತ್ನ ಮಾಡಿದಂತೆ ಭಾಸವಾಗುತ್ತದೆ.

ಸ್ಕೌಟ್ ಕ್ಯಾಂಪ್ ಎಂದರೇನು? ಗೊತ್ತೆ. ಇಲ್ಲಿ ನೋಡಿ. ಕ್ಯಾಂಪ್ (CAMP) ಎನ್ನುವುದು ಆಂಗ್ಲಪದ. ಆ ಪದದ ಪ್ರತಿ ಅಕ್ಷರವೂ ಶಿಬಿರದ ಅರ್ಥವನ್ನು ವಿವರಿಸುತ್ತದೆ.

| | | | |
|---|---|---|---|
| C ಎಂದರೆ | Cleanliness | – | ಸ್ವಚ್ಛತೆ |
| A | Activity | – | ಚಟುವಟಿಕೆಗಳು |
| M | Manliness | – | ಪೌರುಷತ್ವ |
| P | Pleasantness | – | ಉಲ್ಲಾಸ |

**ದೈನಂದಿನ ಕಾರ್ಯಕ್ರಮ:** ದಳಗಳು ಅವರವರ ವಾರ್ಷಿಕ ಶಿಬಿರಕ್ಕೆ ಅವರವರ ಕಾರ್ಯಕ್ರಮವನ್ನು ರೂಪಿಸಿಕೊಳ್ಳಬೇಕು. ಇದು ಗೌ. ನ್ಯಾಯ ಸಭೆಯ ಕೆಲಸ. ಶಿಬಿರವು ಪ್ರಾರಂಭವಾಗುವುದಕ್ಕೆ, ಎಷ್ಟೋ ದಿನಗಳ ಮುಂಚೆ ಮಾಡಬೇಕಾದ ಕೆಲಸ. ಶಿಬಿರವನ್ನು ಸೇರಿದ ಕೂಡಲೇ, ಇದನ್ನು ಮೊದಲು ಸೂಚನಾ ಫಲಕದ ಮೇಲೆ ಪ್ರದರ್ಶಿಸಬೇಕು. "ಸಲಹಾತ್ಮಕ ದಿನಚರಿ"ಯನ್ನು ಈ ಕೆಳಗೆ ಕೊಡಲಾಗಿದೆ.

| | | |
|---|---|---|
| ಬೆಳಗ್ಗೆ | 5.30 | ಏಳುವುದು, ಶೌಚ ಕ್ರಿಯೆ<br>ಬಿ.ಪಿ.ರವರ ಆರು ವ್ಯಾಯಾಮಗಳು |
| " | 6.30 | ಹಾಸಿಗೆ ಬಟ್ಟೆಗಳನ್ನು ಗಾಳಿಗೆ ಹರಡುವುದು<br>ಆವರಣವನ್ನು ಸ್ವಚ್ಛಗೊಳಿಸುವುದು |
| " | 7.30 | ಉಪಾಹಾರ |
| " | 8.00 | ಪರಿಶೀಲನೆ<br>ಧ್ವಜದ ಬಳಿ ಸೇರುವುದು<br>ಪ್ರಾರ್ಥನೆ<br>ಧ್ವಜ ವಂದನೆ |
| " | 8.30 ರಿಂದ<br>10.30 ರವರೆಗೆ | ಸ್ಕೌಟ್ ಚಟುವಟಿಕೆಗಳು |
| " | 11.00 | ಅಡಿಗೆ ಪ್ರಾರಂಭ |

| | | |
|---|---|---|
| " | 11.30 ರಿಂದ<br>12.30 ರವರೆಗೆ | (ಈಜು) ಸ್ನಾನ ಇತ್ಯಾದಿ |
| ಮಧ್ಯಾಹ್ನ | 1.00 | ಊಟ |
| " | 1.45 ರಿಂದ<br>2.30 ರವರೆಗೆ | ವಿಶ್ರಾಂತಿ (ಕಡ್ಡಾಯ) |
| " | 2.30 ರಿಂದ | ಸ್ಕೌಟ್ ಚಟುವಟಿಕೆಗಳು |
| ಸಂಜೆ | 4.30 ರವರೆಗೆ | |
| " | 4.30 ರಿಂದ<br>5.15 ರವರೆಗೆ | ಚಹಾ |
| " | 5.15 ರಿಂದ | ಹೊರಾಂಗಣ ಆಟಗಳು<br>ಕತ್ತಲು ಕವಿಯುವವರೆಗೆ |
| " | 6.30 | ಅಡಿಗೆ |
| ರಾತ್ರಿ | 8.00 | ರಾತ್ರಿ ಊಟ |
| " | 8.15 | ಶಿಬಿರಾಗ್ನಿ |
| " | 9.30 | ಮಲಗಲು ತಯಾರಿ |
| " | 10.00 | ದೀಪ ಆರಿಸಿ ಮಲಗುವುದು |

ಈ ದಿನಚರಿಯು, ಸಲಹಾತ್ಮಕ ಮಾತ್ರ, ದಳಗಳು ಅವರದೇ ದಿನಚರಿಯನ್ನು ರೂಪಿಸಿಕೊಳ್ಳಬೇಕು. ಅದು ದೇಶ, ಕಾಲ, ಶಿಬಿರಗಳಿಗೆ, ಅಂದಿನ ಸ್ಥಿತಿ–ಗತಿಗಳಿಗೆ ಸರಿ ಹೊಂದುವಂತೆ ಮಾರ್ಪಾಟು ಹೊಂದಬಹುದು. ಉಪಯುಕ್ತ ಚಟುವಟಿಕೆಗಳು, ಅವಶ್ಯಕವಾದಷ್ಟು ಆಟಗಳು ಮತ್ತು ಸಾಕಷ್ಟು ಮಧ್ಯಾಹ್ನದ ವಿಶ್ರಾಂತಿ ಇವುಗಳನ್ನು, ಶಿಬಿರದ ದಿನಚರಿಯಲ್ಲಿ ಅಳವಡಿಸಲೇಬೇಕು.

**ಶಿಬಿರದ ನಿಯಮಗಳು:**

ಪ್ರತಿ ಶಿಬಿರದಲ್ಲಿಯೂ ಅವಶ್ಯಕತೆಗೆ ತಕ್ಕಂತೆ ಹಲವು ನಿಯಮಗಳನ್ನು ರೂಪಿಸಬೇಕು ಮತ್ತು ಆ ನಿಯಮಗಳನ್ನು ಶಿಬಿರದ ಸೂಚನಾ ಫಲಕದಲ್ಲಿ ಪ್ರಕಟಿಸಬೇಕು.

"ಸಲಹಾತ್ಮಕ ನಿಯಮಾವಳಿ"ಯನ್ನು ಈ ಕೆಳಗೆ ಕೊಡಲಾಗಿದೆ:

1. ಸ್ಕೌಟ್ ನಿಯಮವೇ ಶಿಬಿರದ ನಿಯಮ.

2. ಶಿಬಿರದ ಸರಹದ್ದು ಉತ್ತರ .... ದಕ್ಷಿಣ ... ಪೂರ್ವ .... ಪಶ್ಚಿಮ ... ಅಪ್ಪಣೆ ಇಲ್ಲದೆ ಈ ನಿಗದಿಪಡಿಸಿದ ಗಡಿಪ್ರದೇಶವನ್ನು ಸ್ಕೌಟುಗಳು ದಾಟಬಾರದು.

3. ಹಗಲು ಕಾಲದ ಸಮಾವೇಶದಲ್ಲಿ, ಹೊರಸಂಚಾರ ಸಮಯದಲ್ಲಿ ಸ್ಕೌಟ್ ಸಮವಸ್ತ್ರವನ್ನು ಧರಿಸಬೇಕು. ಉಳಿದ ವೇಳೆಗಳಲ್ಲೆ ಸೂಕ್ತ ಉಡಿಗೆ ತೊಡಿಗೆ ನಡೆಯುತ್ತದೆ.

4. ನಿಗದಿತ ವೇಳೆಯಲ್ಲಿಯೇ ಸ್ನಾನ ಮಾಡಬೇಕು. ಆ ಸಮಯದಲ್ಲಿ ಈಜಲು ಹೋಗುವುದಾದರೆ (ಈಜಲು ಅನುಕೂಲ ಇದ್ದರೆ), "ಪ್ರಾಣ ರಕ್ಷಣಾ ತಂಡ"ವೊಂದು ಸನ್ನದ್ಧವಿದ್ದರೆ ಮಾತ್ರ ಹೋಗಬೇಕು.

5. ಶಿಬಿರಕ್ಕೆ ಭೇಟಿ ನೀಡುವವರನ್ನು ಸ್ಕೌ.ಮಾ.ರು ಸ್ವಾಗತಿಸುತ್ತಾರೆ. ಬೇರೆಯವರು ಕಂಡರೂ, ಅವರನ್ನು ಸ್ಕೌ.ಮಾ.ರ ಬಳಿಗೆ ಕರೆದೊಯ್ಯಬೇಕು. ಸ್ಕೌ.ಮಾ.ರ ಆದೇಶ/ಅನುಮತಿ ನೀಡಿದರೆ ಮಾತ್ರ, ಶಿಬಿರ ವೀಕ್ಷಣೆಗೆ ಅವರನ್ನು ಕರೆದೊಯ್ಯಬಹುದು.

6. ಎಷ್ಟೇ ಸಣ್ಣ ಪ್ರಮಾಣದ್ದಾದರೂ ಸರಿಯೇ ಅಪಘಾತಗಳು, ಗಾಯಗಳು ಅಥವಾ ಖಾಯಿಲೆಯ ವಿಷಯವನ್ನು ಪೆ.ಲೀ.ನ ಗಮನಕ್ಕೆ ತರಬೇಕು. ಆ ಬಳಿಕ ಅವನು ಸ್ಕೌ.ಮಾರ ಗಮನಕ್ಕೆ ತರಬೇಕು.

7. ಪೆಟ್ರೋಲುಗಳು ಬೆಳಗ್ಗಿನಿಂದ ಬೆಳಗ್ಗೆಗೆ (ಅಥವಾ ಮಧ್ಯಾಹ್ನ 12 ರಿಂದ ಮುಂದಿನ ದಿನದ ಮಧ್ಯಾಹ್ನ 12 ರವರೆಗೆ) ಕರ್ತವ್ಯ ಭಾರವನ್ನು ಹೊರುತ್ತವೆ. ಕರ್ತವ್ಯಭಾರವು ಸರದಿ ಪ್ರಕಾರ, ಕ್ರಮವಹಿಸಿ ಮುಂದುವರೆಯುತ್ತದೆ. (ಕರ್ತವ್ಯಭಾರವನ್ನು ಪಟ್ಟಿಮಾಡಿ, ಪೆಟ್ರೋಲ್‌ಗಳ ಕ್ರಮ ಸಂಖ್ಯೆಗಳನ್ನು ನಮೂದಿಸಿ.) ಕರ್ತವ್ಯ ಭಾರದ ಪಟ್ಟಿಯನ್ನು "ರೋಟಾ ಚಾರ್ಟ್" ಎನ್ನುತ್ತಾರೆ.

8. ನಾಯಕರುಗಳ ಕರೆಯನ್ನು ಕೂಡಲೇ ಓಡುತ್ತಾ ಪಾಲಿಸಬೇಕು.

9. ಸ್ವಚ್ಛತೆ ಮತ್ತು ಸಮಯ ಪ್ರಜ್ಞೆಯು ಶಿಬಿರದ ಅಧಿನಿಯಮವಾಗಿರುತ್ತದೆ.

**ಪೆಟ್ರೋಲ್‌ಗಳ ಕರ್ತವ್ಯಭಾರ:**

(1) ಬೆಳಗ್ಗೆ "ಏಳುವ" ಕೂಗು, ಕಾಲಕಾಲಕ್ಕೆ ದಿನದ ಕಾರ್ಯಕ್ರಮಗಳ ಪ್ರಕಾರ, ಕೂಗು ಹಾಕಿ ಎಲ್ಲರನ್ನೂ ಒಟ್ಟು ಸೇರಿಸುವುದು.

(2) ಧ್ವಜವನ್ನು ಹಾರಿಸಲು ಅಣಿ ಮಾಡುವುದು. ಧ್ವಜ ವಂದನೆ ಮತ್ತು ಸಭೆಗಳಿಗೆ ಸೂಕ್ತ ವ್ಯವಸ್ಥೆ ಮಾಡುವುದು. ಸೂರ್ಯಾಸ್ತ ಸಮಯಕ್ಕೆ ವಿಧಿ ಬದ್ಧವಾಗಿ ಧ್ವಜವನ್ನು ಇಳಿಸುವುದು.

(3) ರಾತ್ರಿಯ ಶಿಬಿರಾಗ್ನಿಗೆ ಕಾರ್ಯಕ್ರಮ ಪಟ್ಟಿ ತಯಾರಿಕೆ ಮತ್ತು ಕ್ರಮಬದ್ಧವಾಗಿ ಕಾರ್ಯಕ್ರಮ ನಿರ್ವಹಣೆ

(4) ಸಮಯಕ್ಕೆ ಸರಿಯಾಗಿ ಶಿಬಿರದ ಅಂಚೆ ಪೆಟ್ಟಿಗೆಯನ್ನು ತೆರೆದು, ಪತ್ರಗಳನ್ನು ಪೋಸ್ಟ್ ಮಾಡಲು ಕ್ರಮ ತೆಗೆದುಕೊಳ್ಳುವುದು ಮತ್ತು ಪೋಸ್ಟ್‌ನಲ್ಲಿ ಬಂದ ಪತ್ರಗಳನ್ನು ವಿತರಣೆ ಮಾಡುವುದು.

(5) ಎಲ್ಲರೂ ಸಭೆ ಸೇರುವ ಸ್ಥಳಗಳನ್ನು ಒಪ್ಪ ಮಾಡಿ, ಓರಣವಾಗಿಡುವುದು.

(6) ಶಿಬಿರದ ವಸ್ತುಗಳು, ವಿಶೇಷವಾಗಿ, ಶೈಕ್ಷಣಿಕ ವಸ್ತುಗಳನ್ನು ಜೋಪಾನ ಮಾಡುವುದು ಮತ್ತು ಕಾಲ ಕಾಲಕ್ಕೆ ಒದಗಿಸುವುದು.

ಸ್ನಾನ: ಶಿಬಿರದಲ್ಲಿ ಸ್ನಾನವೆಂಬುದು ಹೊರಾಂಗಣದಲ್ಲಿನ ಒಂದು ಆಹ್ಲಾದಕರ ಅನುಭವವಾಗಿದೆ ಮತ್ತು ಒಂದು ಪ್ರಮುಖ ಚಟುವಟಿಕೆಯಾಗಿದೆ. ಅಡೆ ತಡೆಯಿಲ್ಲದ ಜಲ ವಿಹಾರವಾದುದರಿಂದ ಅದು ಆಹ್ಲಾದಕರವಾಗಿರುತ್ತದೆ. ಸ್ಕೌಟುಗಳು ನಿರ್ಮಲವಾಗಿಯೂ, ಆರೋಗ್ಯವಂತರಾಗಿಯೂ ಇರುವುದನ್ನು ಕಲಿಯುತ್ತಾರಾದ್ದರಿಂದ ಇದೊಂದು ಪ್ರಮುಖ ಚಟುವಟಿಕೆ ಎನಿಸುತ್ತದೆ. ಶಿಬಿರ ಕ್ಷೇತ್ರದಲ್ಲಿ ಅಪಾಯಕಾರಿಯಲ್ಲದ, ನದಿ ಅಥವಾ ಕೊಳವು ಇರುವುದಾದರೆ ಸ್ಕೌಟುಗಳು ಈಜು ಕಲಿಯಲು ಅನುಕೂಲವಾಗುತ್ತದೆ. ಇದರಿಂದ ಅವರು ಮುಂದೆ "ಪ್ರಾಣ ಸಂರಕ್ಷಣೆ"ಯನ್ನು ಕಲಿಯಲೂ ಅನುಕೂಲವಾಗುತ್ತದೆ.

"ಊಟವಾದ ಬಳಿಕ ಒಂದೂವರೆ ಗಂಟೆಗಳೊಳಗೆ, ಎಂದರೆ ಆಹಾರವು ಜೀರ್ಣವಾಗುವುದಕ್ಕೆ ಮುಂಚೆ, ಈಜಲು ಹೋದರೆ, ಸಾಮಾನ್ಯವಾಗಿ ಸ್ನಾಯುಗಳು ಸಂಕುಚಿತಗೊಂಡು ಸೆಡೆತವುಂಟಾಗುತ್ತದೆ. ಇದರಿಂದ ವಿಪರೀತ ನೋವುಂಟಾಗಿ, ಕೈಕಾಲುಗಳು ಆಡುವುದಿಲ್ಲ. ಮುಂದೆ ಹೋಗಲು ಸಾಧ್ಯವಾಗುವುದಿಲ್ಲ. ಹಾಗಾಗಿ ಮುಳುಗಿ ಹೋಗುವ ಸಾಧ್ಯತೆ ಹೆಚ್ಚು" ಎಂದು ಬಿ.ಪಿ. ಹೇಳುತ್ತಾರೆ.

ನಿಯಮ ಪ್ರಕಾರ ಈಜುವುದು ಎಂದಾಗ ಅಲ್ಲಿ "ಪ್ರಾಣ ಸಂರಕ್ಷಣಾ ತಂಡ"ವು, ಕರ್ತವ್ಯ ನಿರತವಾಗಿರಲೇಬೇಕು. ಪ್ರಾಣ ಸಂರಕ್ಷಣಾ ತಂಡವೆಂದರೆ, ಪ್ರಾಣ ಸಂರಕ್ಷಣೆ ಮಾಡಬಲ್ಲ ಇಬ್ಬರು ನುರಿತ ಈಜುಗಾರರು, ತಾವು ಈಜಲು

ನೀರಿಗಿಳಿಯದೆ, ಈಜುತ್ತಿರುವವರನ್ನು ಗಮನಿಸುತ್ತಾ, ಯಾರಾದರೂ ಕಷ್ಟಕ್ಕೀಡಾದರೆ ಕೂಡಲೇ ನೀರಿಗಿಳಿದು, ಎಳೆದು ತರಲು, ಸದಾ ಸಂಸಿದ್ಧರಾಗಿರಬೇಕು. ಎಲ್ಲರೂ ನೀರಿನಿಂದ ಹೊರಗೆ ಬರುವವರೆಗೂ, ಈ ತಂಡದವರು ಎಚ್ಚರ ವಹಿಸಬೇಕು, ನೀರಿಗಿಳಿಯಬಾರದು.

ಜೀವ ಸಂರಕ್ಷಣೆಗಾಗಿ ಒಂದು ಉದ್ದನೆಯ ಹಗ್ಗವನ್ನು ಸಹ ತಯಾರಿಟ್ಟಿರಬೇಕು. ಇದರಿಂದ, ಈಜುತ್ತಿರುವವರು ಕಷ್ಟಕ್ಕೆ ಸಿಕ್ಕಿದಾಗ, ಅವಶ್ಯಕವೆನಿಸಿದರೆ ಅವರ ರಕ್ಷಣೆಗಾಗಿ, ಎಸೆಯಲೂ, ಸ್ಕೌಟುಗಳಿಗೆ ಈ ಹಗ್ಗವನ್ನು ಎಸೆಯುವ ಬಗ್ಗೆ ಮತ್ತು ಅದನ್ನು ಉಪಂತೋಗಿಸಿಕೊಂಡು ಪಾರಾಗುವ ಬಗ್ಗೆ ಶಿಕ್ಷಣ ನೀಡಲೂ ಉಪಯೋಗಕ್ಕೆ ಬರುತ್ತದೆ. ಈಜುವುದಕ್ಕೆ ಅನುಮತಿ ನೀಡಬೇಕೆಂದಾದರೆ ಆ ಸ್ಥಳವು (i) ಸುರಕ್ಷಿತವಾಗಿರಬೇಕು (ಅಂತರ್ ಪ್ರವಾಹ, ಸುಳಿಗಳು, ಮೊಸಳೆಗಳು, ಕೆಸರು ಇತ್ಯಾದಿ ಇರಬಾರದು) (ii) ಸ್ಕೌಟುಗಳು ಈಜುವಾಗ "ಪ್ರಾಣ ರಕ್ಷಣಾ ತಂಡ"ವು ಕರ್ತವ್ಯ ನಿರತವಾಗಿದ್ದು, ಸಾಕಷ್ಟು ಮೇಲ್ವಿಚಾರಕರಿರಬೇಕು. ಈ ಎರಡೂ ಅಂಶಗಳು ತೃಪ್ತಿಕರವಾಗಿರುವುದು ಖಾತರಿ ಆಗಬೇಕು.

## ಬಿ.ಪಿ.ರವರ ಆರು ವ್ಯಾಯಮಗಳು

ಬಿ.ಪಿ.ರವರು ಬರೆದಿರುವ "ಬಾಲಕರಿಗಾಗಿ ಸ್ಕೌಟಿಂಗ್" ಪುಸ್ತಕದ, ಶಿಬಿರಾಗ್ನಿ ಉದಂತ 17ರಲ್ಲಿ, ಅವರು ತಮ್ಮ ಜೀವನ ಪರ್ಯಂತ ಅಭ್ಯಾಸ ಮಾಡುತ್ತಿದ್ದ, ಬಾಲಕರಿಗೆ ಉಪಯುಕ್ತವೆಂದು ಕಂಡುಬಂದ, ಆರು ವ್ಯಾಯಾಮುಗಳನ್ನು ವಿವರಿಸಲಾಗಿದೆ. ಈ ವ್ಯಾಯಾಮಗಳನ್ನು ಅಭ್ಯಾಸ ಮಾಡಿ, ಸಾವಿರಾರು ಬಾಲಕರು ಅದರ ಲಾಭ ಪಡೆಯುತ್ತಿದ್ದಾರೆ. ಅವು ಬಹಳ ಸರಳವಾಗಿವೆ ಯಾವುದೇ ರೀತಿಯ ಉಪಕರಣಗಳ ಅವಶ್ಯಕತೆ ಇರುವುದಿಲ್ಲ. ಅವುಗಳು ಹೆಚ್ಚು ಲಾಭಧಾಯಕವಾದ ವ್ಯಾಯಾಮಗಳಾಗಿ ಕಂಡುಬಂದಿವೆ.

| | | | |
|---|---|---|---|
| ವ್ಯಾ.ಸಂ. 1 | ತಲೆ ಮತ್ತು ಕೊರಳಿಗೆ | ವ್ಯಾ.ಸಂ. 4 | ಸೊಂಟಕ್ಕೆ |
| ವ್ಯಾ.ಸಂ. 2 | ಎದೆಗೆ | ವ್ಯಾ.ಸಂ 5 | ದೇಹ ಮತ್ತು ಕಾಲುಗಳ ಹಿಂಭಾಗಕ್ಕೆ |
| ವ್ಯಾ.ಸಂ. 3 | ಹೊಟ್ಟೆ ಭಾಗಕ್ಕೆ | ವ್ಯಾ.ಸಂ. 6 | ಕಾಲು, ಪಾದ, ಕಾಲ್ಬೆರಳುಗಳಿಗೆ |

ಶಿಬಿರಾಗ್ನಿ ಉದಂತದಲ್ಲಿ ಹೇಳಿರುವ ವಿವರಣೆಯನ್ನು ನೋಡಿ. ಸ್ಕೌಟುಗಳು ಆ ವಿವರಣೆಯ ಪ್ರಕಾರ, ಈ ವ್ಯಾಯಾಮಗಳನ್ನು ಶಿಬಿರದಲ್ಲೂ, ಮನೆಯಲ್ಲೂ, ಅಭ್ಯಾಸ ಮಾಡಿಕೊಳ್ಳಬೇಕು.

ರಾಜ್ಯ ಕಾರ್ಯಾಲಯದವರು ಅವಶ್ಯಕ ಅಂಶಗಳನ್ನೊಳಗೊಂಡ "ಬಿ.ಪಿ. ಅವರ ಆರು ವ್ಯಾಯಾಮಗಳು" ಎಂಬ ಕಿರುಪುಸ್ತಿಕೆಯನ್ನು ಪ್ರಕಟಿಸಿದ್ದಾರೆ, ಕೊಂಡು, ಲಾಭದಾಯಕವಾಗಿ ಉಪಯೋಗಿಸಿ.

**ಶಿಬಿರ ಹೂಡುವುದು:** ಸೈನ್ಯ ಶಿಬಿರಗಳಲ್ಲಿ ಸಾಮಾನ್ಯವಾಗಿ ನೇರವಾಗಿ ಸಾಲು ಸಾಲಾಗಿ ರಸ್ತೆಗಳು ಇರುವಂತೆ ಗುಡಾರಗಳನ್ನು ಹಾಕುತ್ತಾರೆ. ಸ್ಕೌಟ್ ಶಿಬಿರದಲ್ಲಿ ಗುಡಾರಗಳನ್ನು ಆ ರೀತಿ ಹಾಕುವುದಿಲ್ಲ. ಅದಕ್ಕೆ ಬದಲಾಗಿ ಸ್ಕೌ.ಮಾ.ರ ಗುಡಾರದ ಎದುರಿನಲ್ಲಿ, ಅರ್ಧ ವರ್ತುಲಾಕಾರದಲ್ಲಿ ಪೆಟ್ರೋಲ್‌ವಾರು, ಅಲ್ಲಲ್ಲಿ ಒಂದಕ್ಕೊಂದು 50 ರಿಂದ 100 ಗಜ ದೂರಗಳಲ್ಲಿ ಇರುವಂತೆ ಹಾಕಲಾಗುತ್ತದೆ. ಈ ರೀತಿಯಾದ ಗುಡಾರಗಳ ವಿನ್ಯಾಸದಿಂದ ಪೆಟ್ರೋಲ್ ಸದಸ್ಯರಲ್ಲಿ ಸ್ವಾವಲಂಬನೆ ಮತ್ತು ವ್ಯಾವಹಾರಿಕ ಜಾಣತನ/ಸಾಧನೋಪಾಯ ಕೌಶಲಗಳು ಅಭಿವೃದ್ಧಿ ಹೊಂದಲು ಸಹಾಯವಾಗುತ್ತದೆ.

**ಪೆಟ್ರೋಲ್ ಗುಡಾರಗಳು:** (i) ಎಲ್ಲಾ ಪೆಟ್ರೋಲ್ ಗುಡಾರಗಳೂ, ಸ್ಕೌಟ್ ಮಾಸ್ಟರರ ಗುಡಾರಕ್ಕೆ ಅಭಿಮುಖವಾಗಿರಬೇಕು. ಇದರಿಂದ ಸ್ಕೌಟ್ ಮಾಸ್ಟರರು, ಪ್ರತಿ ಪೆಟ್ರೋಲ್ ಪ್ರದೇಶದ ನಡೆವಳಿಕೆಗಳನ್ನು ಗಮನಿಸಲು ಸಹಾಯವಾಗುತ್ತದೆ.

(ii) ಮಳೆಗಾಲದಲ್ಲಿ ಗುಡಾರಗಳನ್ನು ಹಾಕುವುದಾದರೆ, ಗುಡಾರದ ಸುತ್ತಲೂ ಕಾಲುವೆ ಮಾಡಬೇಕು. ಇದರಿಂದ ಮಳೆ ನೀರು ಟೆಂಟ್‌ನ ಒಳಗೆ ನುಗ್ಗದೆ, ಕಾಲುವೆಯಲ್ಲಿ ಹರಿದು ಬಸಿದು ಹೋಗಲು ಸಹಾಯವಾಗುತ್ತದೆ.

(iii) ಈ ಕಾಲುವೆಗಳು 22.86 ಸೆಂ.ಮೀ ಅಗಲ, ಅಷ್ಟೇ ಆಳವಿದ್ದು, ಪಕ್ಕಗಳು ಗೋಡೆಯಂತೆ ಖಚಿತವಾಗಿ ಊರ್ಧ್ವ ಮುಖವಾಗಿದ್ದರೆ ಹಾವುಗಳಿಂದ ರಕ್ಷಣೆ ದೊರಕುತ್ತದೆ.

(iv) ಗುಡಾರದ ಕಂಬಗಳ ಅಡಿಯ ಪಕ್ಕದಲ್ಲಿ ಬಟ್ಟಲಿನಾಕಾರದಲ್ಲಿ, ಒಂದು ಸಣ್ಣ ಗುಂಡಿಯುನ್ನು ತೋಡಿದ್ದರೆ, ಮಳೆ ಬಂದು ಸೆಳೆತದ ಹಗ್ಗಗಳು ಸಡೆದುಕೊಂಡಾಗ, ಕಂಬಗಳನ್ನು ಈ ಗುಣಿಗಳಿಗೆ ಇಳಿಸಬಹುದು. ಇದರಿಂದ ಗುಡಾರಕ್ಕೆ ಆಗಬಹುದಾದ ಅಪಾಯವನ್ನು ಕಡಿಮೆ ಮಾಡಬಹುದು.

**ಶಿಬಿರದ ಹಾಸಿಗೆಗಳು:** ಶಿಬಿರದ ಹಾಸಿಗೆಗಳನ್ನು ವಿವಿಧ ರೀತಿಯಲ್ಲಿ ಮಾಡಬಹುದು. ಯಾವುದೇ ವಿಧಾನವನ್ನನುಸರಿಸಿದರೂ, ನೆಲಕ್ಕೂ, ದೇಹಕ್ಕೂ

ಮಧ್ಯೆ ತೇವವಾಗದಂತಹ ಗ್ರೌಂಡ್‌ಷೀಟ್ ಇರಬೇಕು. ಹುಲ್ಲನ್ನು ಕತ್ತರಿಸಿ ಹರಡುವುದರಿಂದ ಮೆತ್ತನೆಯ ಹಾಸಿಗೆಯು ಸುಲಭವಾಗಿ ಆಗುತ್ತದೆ.

ಹಸಿ ಹುಲ್ಲಿನ ಬದಲು ಒಣ ಹುಲ್ಲು ಉಪಯೋಗಿಸುವುದು ಇನ್ನೊಂದು ವಿಧಾನ.



**ಒಣಹುಲ್ಲಿನ ಮೆತ್ತೆ:** ಇದನ್ನು ಮಾಡಲು ಮೊದಲಿಗೆ ಮಗ್ಗವನ್ನು ಮಾಡಿಕೊಳ್ಳಬೇಕು. 75 ಸೆಂ.ಮೀ ಎತ್ತರದ 5 ಬಲವಾದ ಕೋಲುಗಳನ್ನು, ಒಂದಕ್ಕೊಂದು 18 ಸೆಂ.ಮೀ ದೂರದಲ್ಲಿರುವಂತೆ ಸಾಲಾಗಿ ನೆಡಿರಿ. ಇದ್ದರ ಎದುರಿಗೆ 2–2.25 ಮೀ. ದೂರದಲ್ಲಿ, ಮೊದಲ ಸಾಲಿಗೆ ಸಮಾನಾಂತರವಾಗಿ ಕನಿಷ್ಠ 2 (ಸಾಧ್ಯವಾದರೆ 5) ಕೋಲುಗಳನ್ನು ನೆಡಿರಿ, 2 ಕೋಲುಗಳಾದರೆ ಅವಕ್ಕೊಂದು ಬಲವಾದ ಅಡ್ಡಕೋಲು ಕಟ್ಟಬೇಕಾಗುತ್ತದೆ. (ವಿವರಗಳಿಗೆ "ಬಾಲಕರಿಗಾಗಿ ಸ್ಕೌಟಿಂಗ್" ಪುಸ್ತಕವನ್ನೋದಿರಿ) ಈ ಎರಡಕ್ಕೂ ಸೇರಿಸಿ ಹಗ್ಗಗಳನ್ನು ಬಿಗಿದು, ಮಗ್ಗವನ್ನು ತಯಾರಿಸಿಕೊಳ್ಳಿ. ಈ ರೀತಿ ತಯಾರಾದ ಮಗ್ಗದಲ್ಲಿ ಮೆತ್ತೆಗಳನ್ನು ಮಾಡಿಕೊಳ್ಳಬಹುದು. ಈ ಮೆತ್ತೆಗಳನ್ನು ಮಲಗಲು ಮಾತ್ರವಲ್ಲದೆ, ಗುಡಾರ ಹಾಕಲು, ತಡಿಕೆ ಕಟ್ಟಲು, ಒಪ್ಪಾರ ಹಾಕಲು ಉಪಯೋಗಿಸಬಹುದು.

**ದಿಂಬುಗಳು:** ಶಿಬಿರ ಸೌಖ್ಯಗಳಲ್ಲಿ ತಲೆದಿಂಬೂ ಒಂದು ವಸ್ತು. ಇದಕ್ಕೆ 55 ಸೆಂ.ಮೀ. × 30 ಸೆಂ.ಮೀ ಅಳತೆಯ ಚೀಲವಿದ್ದರೆ ಸಾಕು. ಈ ಚೀಲವನ್ನು ಹಗಲು ಹೊತ್ತು ಬಟ್ಟೆಗಳನ್ನು ಒಪ್ಪವಾಗಿ ಮಡಿಸಿಡಲೂ, ರಾತ್ರಿಯ ವೇಳೆ ತಲೆದಿಂಬಾಗಿಯೂ ಉಪಯೋಗಿಸಬಹುದು.

**ಶಿಬಿರದಲ್ಲಿ ಮೋಂಬತ್ತಿ ಹಿಡಿಕೆಗಳು:** ತಂತಿಯನ್ನು ಸ್ಪ್ರಿಂಗ್‌ನಂತೆ ಸುರುಳಿ ಸುತ್ತಿ ಅದಕ್ಕೆ ಮೋಂಬತ್ತಿ ಸಿಕ್ಕಿಸಬಹುದು. ಕವೆ ಕಡ್ಡಿ ಅಥವಾ ಸೀಳು ರೆಂಬೆಗಳನ್ನು ಉಪಯೋಗಿಸಬಹುದು. ಜೇಡಿಮಣ್ಣಿನ ಮುದ್ದೆ ಮಾಡಿ ಸಿಕ್ಕಿಸಬಹುದು. ಆಲೂಗಡ್ಡೆಯಲ್ಲಿ ತೂತು ಮಾಡಿ ಸಿಕ್ಕಿಸಬಹುದು.







**ಅಡಿಗೆ ಮನೆ:** ಇದು ಪೆಟ್ರೋಲ್‌ನ ವಸತಿ ಗುಡಾರದಿಂದ ಹಿಂಭಾಗಕ್ಕೆ 10–15 ಮೀ. ದೂರದಲ್ಲಿ, ಗಾಳಿ ಮರೆಯ ದಿಕ್ಕು–ಶಿಬಿರದಲ್ಲಿ ಗಾಳಿಯ ವಿರುದ್ಧ ದಿಕ್ಕಿನಲ್ಲಿ ಇರಬೇಕು. ಇದರಿಂದ ಹೊಗೆ ಮತ್ತು ಬೆಂಕಿಯ ಕಿಡಿಗಳು ವಸತಿ ಗುಡಾರದೊಳಕ್ಕೆ ಬರುವುದಿಲ್ಲ.

**ಶಿಬಿರದ ಅಡಿಗೆ ಮನೆ:** ಸ್ಕೌಟ್ ಶಿಬಿರ ಎಂದರೆ ಅದರ ಸುವ್ಯವಸ್ಥಿತವಾದ ಅಡಿಗೆ ಮನೆಯನ್ನು ನೋಡಬೇಕು. ಅದಕ್ಕೆ ಹಲವು ವಿಶಿಷ್ಟವಾದ ಲಕ್ಷಣಗಳಿವೆ.

1. ಸೂಕ್ತ ರೀತಿಯ ಒಲೆ : ಜಗುಲಿ ಒಲೆ ಒಳ್ಳೆಯದು. ಇದರಿಂದ ಸ್ಕೌಟು ನಿಂತುಕೊಂಡು ಅಡಿಗೆ ಮಾಡಲು ಅನುಕೂಲವಾಗುತ್ತದೆ.
2. ಅಡಿಗೆ ಮಾಡುವವನ ಅನುಕೂಲಕ್ಕಾಗಿ ಒಂದು ವಿಶೇಷ ಜಗುಲಿ/ಮೇಜು.
3. ಅಡಿಗೆ ಪಾತ್ರೆಗಳನ್ನು ತೊಂದರೆಯಿಲ್ಲದೆ ತೊಳೆಯಬಹುದಾದ ಅನುಕೂಲಕರ ಸ್ಥಳ.
4. ಪಾತ್ರೆಗಳನ್ನು ತೊಳೆದಾದ ಮೇಲೆ, ನೀರು ಬಸಿದು, ಒಣಗಲು ಅನುಕೂಲ ವಾದ ಒಂದು ಚೌಕವಾದ ಪತ್ತಿಗೆ.
5. ಅಡಿಗೆ ಪಾತ್ರೆಗಳನ್ನು ಒಪ್ಪ ಓರಣವಾಗಿ, ಅಡಿಗೆಯವನ ಅನುಕೂಲಕ್ಕೆ ತಕ್ಕಂತೆ ಜೋಡಿಸಲು ಚೌಕಟ್ಟು.
6. ಊಟದ ತಟ್ಟೆಗಳನ್ನು ಜೋಡಿಸಲು ಚೌಕಟ್ಟು

7. ಲೋಟ ಬಟ್ಟಲುಗಳನ್ನು ಜೋಡಿಸಲು ಚೌಕಟ್ಟು

8. ಹಾಲು, ಮೊಸರು, ತುಪ್ಪ ಇತ್ಯಾದಿ, ಸುರಕ್ಷಿತವಾಗಿಡಲು, ಮರದಿಂದ ತೂಗು ಹಾಕಿದ, ಶಿಬಿರದ ತೂಗು ಗೂಡು (ಲಾರ್ಡರ್)

9. ಆಮೋದಿತ ನಮೂನೆಯ ಒಣಗುಂಡಿ ಮತ್ತು ಹಸಿಗುಂಡಿ

10. ಪೆಟ್ರೋಲ್‌ನವರೆಲ್ಲರೂ ಒಟ್ಟಿಗೆ ಕುಳಿತು ಊಟ ಮಾಡಬಹುದಾದಂತಹ ಊಟದ ಟೇಬಲ್.

11. ಆರೋಗ್ಯಕರ ರೀತಿಯಲ್ಲಿ ಶೇಖರಿಸಿಟ್ಟ ನೀರು ಸಂಗ್ರಹ

12. ಸೌದೆ ಮನೆ – ಉಪಯೋಗಿಸಲು ತಯಾರಾದ ಒಣಸೌದೆ, ಮರದ ತುಂಡು ಮತ್ತು ಶೇಖರಿಸಿದ ಸೌದೆ ಹಾಗೂ ಸೌದೆ ಒಡೆಯಲೂ ಇಡಲೂ ಜಾಗ.

**ನಿಷೇಧಿತ ಪ್ರದೇಶ:** ಅಡಿಗೆ ಮನೆ ಪ್ರದೇಶವನ್ನು ನಿಗದಿಪಡಿಸಿ, ಅಡಿಗೆಯವರು, ಸಹಾಯಕರು ಬಿಟ್ಟು ಉಳಿದವರಿಗೆ, ಈ ಪ್ರದೇಶವನ್ನು ಪ್ರವೇಶಿಸದಂತೆ ನಿಷೇಧಪಡಿಸಿ. ಊಟ/ತಿಂಡಿ ತಯಾರಾಗಿ ಕರೆ ಬಂದಾಗ ಮಾತ್ರ ಎಲ್ಲರೂ ಅಲ್ಲಿ ಒಟ್ಟು ಸೇರಬೇಕು,



**ವ್ಯವಸ್ಥಿತವಾದ, ವಿವರಿಸಿರುವ ಎಲ್ಲಾ ಅಂಶಗಳನ್ನು ಪೂರೈಸುವ ಶಿಬಿರದ ಅಡಿಗೆ ಮನೆಯ ಚಿತ್ರ**

**ಅಡಿಗೆ ಒಲೆ:** 2 ಸಾಲು ಹುಲ್ಲು ಹೆಪ್ಪು/ ಇಟ್ಟಿಗೆಗಳು/ದಪ್ಪ ಮರದ ತುಂಡುಗಳು/ಕಲ್ಲುಗಳು (180 ಸೆಂ.ಮೀ ಉದ್ದವಿರಬೇಕು) ಮೇಲ್ಭಾಗವು ಚಪ್ಪಟೆಯಾಗಿರಬೇಕು. ಇವುಗಳನ್ನು ಓರಡಿಯಾಗಿ ಎಂದರೆ ಒಂದು ಕಡೆ 10 ಸೆಂ.ಮೀ., ಇನ್ನೊಂದು ಕಡೆ 20 ಸೆಂ.ಮೀ ಇರುವಂತೆ ಜೋಡಿಸಿ ಒಲೆಯನ್ನು ಮಾಡಲಾಗುತ್ತದೆ. ಅಗಲದ ಭಾಗವು ಗಾಳಿಯು ಬರುವ ದಿಕ್ಕಿನಲ್ಲಿರುತ್ತದೆ.



ಈ ಒಲೆಯ ಮೇಲೆ ವಿವಿಧ ಅಳತೆ-ಗಾತ್ರದ ಪಾತ್ರೆಗಳನ್ನಿಡಬಹುದು. ಅಗಲದ ಕಡೆ ಬೆಂಕಿಯನ್ನು ಹತ್ತಿಸಿ ಉರಿಸುತ್ತಾ ಹೋದರೆ, ಬೆಂಕಿಯ ಜ್ವಾಲೆ ಅಥವಾ ಶಾಖವು ಸುರಂಗದ ಮೂಲಕ ಹಾದು, ಎಲ್ಲಾ ಪಾತ್ರೆಗಳನ್ನೂ ಕಾಯಿಸುತ್ತದೆ.

**ಜಗುಲಿಯ ಒಲೆ:** ಒಲೆಯು ನೆಲಮಟ್ಟದಿಂದ ಸ್ವಲ್ಪ ಮೇಲಿದ್ದರೆ ಅನುಕೂಲ. ಇದನ್ನು ಆಲ್ಟರ್ ಫೈಯರ್ ಎನ್ನುತ್ತಾರೆ. ಜಗುಲಿಯನ್ನು ಅಗ್ನಿ ನಿರೋಧಕ ವಸ್ತುವಿನಿಂದ ಕಟ್ಟಲಾಗುತ್ತದೆ. ಪೆಟ್ರೋಲ್‌ನ ಬಾಲಕರ ಸರಾಸರಿ ಎತ್ತರಕ್ಕೆ ಹೊಂದುವಂತೆ ಜಗುಲಿಯನ್ನು ಕಟ್ಟಬೇಕು.

**ಒಲೆ ಕಟ್ಟಲು ಸಿದ್ಧತೆ:** ಬೆಂಕಿ ಹೊತ್ತಿಸುವುದಕ್ಕೆ ಮುಂಚೆ, ಸೂಕ್ತ ರೀತಿಯಲ್ಲಿ, ಆ ಜಾಗವನ್ನು ತಯಾರು ಮಾಡಿಕೊಳ್ಳಬೇಕು. ಒಣ ಎಲೆ, ಕಸಕಡ್ಡಿಗಳನ್ನು ತೆಗೆದು ಸ್ವಚ್ಛಗೊಳಿಸಬೇಕು. ಆ ಸ್ಥಳದಲ್ಲಿ ಚೆನ್ನಾಗಿ ಬೆಳೆದ ಹಸಿರು ಹುಲ್ಲಿದ್ದರೆ, ಒಲೆ ಹಾಕುವ ಸ್ಥಳದಲ್ಲಿ 2 ಮೀ ಉದ್ದ 2ಮೀ ಅಗಲ ಮತ್ತು 7-8 ಸೆಂ.ಮೀ ಗಾತ್ರದ ಹುಲ್ಲು ಹೆಪ್ಪನ್ನು ತೆಗೆದು ನೆರಳಿನಲ್ಲೊಂದು ಕಡೆ ಇಟ್ಟುಕೊಳ್ಳಬೇಕು. ಅದು ಒಣಗದಂತೆ, ಶಿಬಿರದ ಅವಧಿಯಲ್ಲಿ ಆಗಾಗ ನೀರು ಹಾಕುತ್ತಿರಬೇಕು. ಹುಲ್ಲು ಹೆಪ್ಪು ತೆಗೆದ ಸ್ಥಳದಲ್ಲಿ ಮರಳನ್ನು ಹರಡಬೇಕು. ಶಿಬಿರವು ಮುಗಿದ ಮೇಲೆ ಮರಳನ್ನು ತೆಗೆದು, ಹುಲ್ಲು ಹೆಪ್ಪನ್ನು ವಾಪಸ್ಸು ಹಾಕಬೇಕು.

**ಒಣಗಿದ ಸೌದೆ:** ಒಲೆ ಹಾಕಲು ಜಾಗವನ್ನು ಸರಿಪಡಿಸಿಕೊಂಡ ಮೇಲೆ, ಒಣಗಿದ ಸೌದೆಯನ್ನು ಜಮಾಯಿಸಬೇಕು. ನೆಲದ ಮೇಲೆ ಬಿದ್ದಿರುವ ಒಣಕಡ್ಡಿಗಳು ಒದ್ದೆಯಾಗಿರುತ್ತವೆ. ಆ ಕಾರಣ ಸುಲಭವಾಗಿ ಉರಿಯುವುದಿಲ್ಲ. ಬೆಂಕಿ ಉರಿಯಲು ಪ್ರಾರಂಭಿಸಿದ ಮೇಲೆ ಈ ಉರುವಲು ಉಪಯೋಗಕ್ಕೆ ಬರಬಹುದೇನೋ! ಬೆಂಕಿ ಹೊತ್ತಿಸಿ, ಉರಿಮಾಡಲು ಉರುವಲನ್ನು ಮರದಿಂದ ನೇರವಾಗಿ ತೆಗೆದುಕೊಳ್ಳಬೇಕು. ಸಣ್ಣಸಣ್ಣ ಪುರಲೆ ಹಾಗೂ ಸಿಬಿರು ಕಡ್ಡಿಗಳು ಬಹಳವಾಗಿರಬೇಕು. ದಪ್ಪನೆಯವೂ ಬೇಕು. ಬೆಂಕಿಯು ಹತ್ತಿ ಉರಿಯಲು ಪ್ರಾರಂಭವಾದ ಮೇಲೆ ಈ ದಪ್ಪಕಡ್ಡಿಗಳನ್ನು ಒಟ್ಟಿ ಉರಿಸಬೇಕು.

ಒಣಕಡ್ಡಿಗಳನ್ನು ಗೋಪುರಾಕಾರವಾಗಿ ಜೋಡಿಸಿಕೊಳ್ಳಬೇಕು. ಚೆನ್ನಾಗಿ ಉರಿಯಬೇಕಾದರೆ, ಜೋಡಣೆಯು ಸರಿಯಾಗಿರಬೇಕು. ಸರಿಯಾದ ಜೋಡಣೆ ಹಾಗೂ ಚೆನ್ನಾಗಿ ಉರಿಸುವುದು, ಹೊರಾಂಗಣ ಜೀವನದ ಸಾಮರ್ಥ್ಯಗಳಲ್ಲಿ ಪ್ರಮುಖ ಅಂಶಗಳು.

**ಬೆಂಕಿಯನ್ನು ಹೊತ್ತಿಸಲು ಜೋಡಣೆ:** ಸಾಮಾನ್ಯವಾಗಿ ನೆಲವು ತೇವದಿಂದ ಕೂಡಿರುತ್ತದೆ. ನಾವು ಒಲೆ ಹಾಕಲು ತಯಾರಿಸಿದ ಸ್ಥಳವೂ ಅಷ್ಟೇ. ಈ ಮುಂದೆ ಕಾಣಿಸಿರುವಂತೆ ನಾವು ಮುಂದುವರಿಯಬೇಕು.

1) ಮೊದಲಿಗೆ ಒಂದು ಜಗುಲಿಯನ್ನು ತಯಾರಿಸಿಕೊಳ್ಳಬೇಕು. ಇದಕ್ಕಾಗಿ 20–25 ಸೆಂ.ಮೀ. ಚಚ್ಚೌಕಾರದಲ್ಲಿ ಒಣಗಿದ ಕಡ್ಡಿ/ಸೌದೆಯನ್ನು ಒಂದರ ಪಕ್ಕದಲ್ಲೊಂದರಂತೆ, ನೆಲದ ಮೇಲೆ ಮಟ್ಟವಾಗಿ ಜೋಡಿಸಬೇಕು. ಇದೇ ಜಗುಲಿ.



2) ಈ ಜಗುಲಿಯ ಮೇಲೆ, ಮಧ್ಯಭಾಗದಲ್ಲಿ "ಜ್ವಲಕ"ವನ್ನು ಎಂದರೆ ಸುಲಭವಾಗಿ ಹೊತ್ತಿಕೊಳ್ಳುವಂತಹ ಚೆಕ್ಕೆಪುಡಿ, ಎರೆದ/ಜೀವಿದ/ಕೆತ್ತಿದ ತೆಳುವು ಹಾಳೆಯಂತಿರುವ ಮರದ ಚೂರುಗಳು, ಸಣ್ಣಸಣ್ಣ ಸೌದೆಚೂರು, ಹಿಂಜಿ ಉಂಡೆ ಕಟ್ಟಿದ ತೆಂಗಿನ ನಾರು ಇತ್ಯಾದಿ ಮಧ್ಯದಲ್ಲಿ ಸುರಿಯಿರಿ.

3) ಈ ಜಗುಲಿಯ ಮೇಲೆ 20–25 ಸೆಂ.ಮೀ. ಎತ್ತರದ ಒಂದು ಮುಕ್ಕಾಲನ್ನು (3 ಕವೆ ಇರುವ ಸೌದೆಕಡ್ಡಿಗಳಿಂದ) (ಟ್ರೈಪಾಡ್) ರಚಿಸಿ. ಈ ಮುಕ್ಕಾಲು ರಚನೆಯಲ್ಲಿ ಬೆಂಕಿಯನ್ನು ಹೊತ್ತಿಸುವ ಭಾಗವು ಗಾಳಿ ಬೀಸುವ ಕಡೆಗಿರುತ್ತದೆ.

4) ಗಾಳಿ ಬೀಸುವ ಕಡೆಯಲ್ಲಿ ಬೆಂಕಿ ಹತ್ತಿಸಲು ಜಾಗಬಿಟ್ಟುಕೊಂಡು, ಒಣಗಿದ ಸೌದೆಯನ್ನು ಜೋಡಿಸುತ್ತಾ ಹೋಗಿ. ಸಾಕಷ್ಟು ಒತ್ತಾಗಿ ಜೋಡಿಸಿದ ಮೇಲೆ, ಮಧ್ಯೆ ಇರಬಹುದಾದ ಖಾಲಿ ಜಾಗದಲ್ಲಿ ಚೆಕ್ಕೆಪುಡಿ, ಸಿಬಿರು, ಸೀಳುಗಳನ್ನು ತುಂಬಿಸಿ.

5) ಇದೀಗ, ಬೆಂಕಿ ಹೊತ್ತಿಸಲು ತಯಾರ್.

**ಬೆಂಕಿ ಹೊತ್ತಿಸುವುದು:** ಸ್ಕೌಟುಗಳು ಒಂದೇ ಬೆಂಕಿ ಕಡ್ಡಿಯನ್ನು ಉಪಯೋಗಿಸಿ, ಬೆಂಕಿ ಹತ್ತಿಸುವಂತಿರಬೇಕು. ಪರೀಕ್ಷೆ ಮಾಡುವ ಸಮಯದಲ್ಲಿ ಬೇಕಾದರೆ, ಇನ್ನೊಂದು ಬೆಂಕಿ ಕಡ್ಡಿಯನ್ನು ಕೊಡಬಹುದು. ಅಷ್ಟರೊಳಗೆ (ಎಂದರೆ ಎರಡು ಬೆಂಕಿ ಕಡ್ಡಿಗಳೊಳಗೆ) ಒಲೆ ಹಚ್ಚಲೇಬೇಕು. ಬೆಂಕಿ ಉರಿಯಲೇಬೇಕು.

ಸ್ಕೌಟು, ಬೆಂಕಿ ಕಡ್ಡಿಯನ್ನು ಗೀಚುತ್ತಾನೆ? ಕಡ್ಡಿಯ ತುದಿಯಲ್ಲಿ ಬೆಂಕಿ ಹತ್ತಿಕೊಂಡ ಕೂಡಲೇ ಏನು ಮಾಡುತ್ತಾನೆ? ಎಂಬ ಅಂಶಗಳು ಬಹಳ ಮುಖ್ಯ. ಗೀಚುವಾಗ ಹಿಡಿತವು ಬಿಗಿಯಾಗಿರಬೇಕು. ಕಡ್ಡಿಯು ಪೂರಾ ಹತ್ತಿಕೊಳ್ಳುವವರೆಗೆ, ಒಂದೆರಡುಕ್ಷಣಕಾಲ, ಕಡ್ಡಿಯನ್ನು ಕೆಳಮುಖ ಮಾಡಿ ಹಿಡಿದಿರಬೇಕು. ಹಾಗೆ ಮಾಡಿದರೆ ಅದು ಆರಿಹೋಗುವುದಿಲ್ಲ. ಕಡ್ಡಿಯು ಪೂರಾ ಹತ್ತಿಕೊಂಡ ಮೇಲೆ, ಅದರಿಂದ ಜೋಡಣೆಯ ಒಳಗಿರುವ ಜ್ವಲಕಕ್ಕೆ ಅದನ್ನು ಮುಟ್ಟಿಸಿದರಾಯಿತು ಒಲೆಯು ಹತ್ತಿ ಉರಿಯಲಾರಂಭಿಸುತ್ತದೆ.

**ಶಿಬಿರ ಶೌಚಾಲಯಗಳು:**

ಒಳ್ಳೆಯ ಆರೋಗ್ಯ ಮತ್ತು ಸೌಕರ್ಯಗಳ ದೃಷ್ಟಿಯಿಂದ ಶಿಬಿರದ ಶೌಚ ಮತ್ತು ಪಾಕೀಜು ವ್ಯವಸ್ಥೆಗಳು, ಯಾವುದೇ ನ್ಯೂನತೆಗಳಿಲ್ಲದೆ ಪರಿಪೂರ್ಣವಾಗಿರ ಬೇಕಾದುದು ಬಹಳ ಮುಖ್ಯ.

ಪೆಟ್ರೋಲ್‌ಗೊಂದರಂತೆ ಕಕ್ಕಸ್ಸುಗಳಿರಬೇಕು. ಪೆಟ್ರೋಲ್‌ಗಳಿಗಿಂತಲೂ ಒಂದೆರಡು ಹೆಚ್ಚಿಗೆ ಇರಬೇಕು. ಅವುಗಳನ್ನು ಸಿಬ್ಬಂದಿ ವರ್ಗದವರು, ಆಹ್ವಾನಿತರು, ಸಂದರ್ಶಕರು ಉಪಯೋಗಿಸಲು ಬರುತ್ತದೆ. ಪೆಟ್ರೋಲುಗಳ ಶೌಚಾಲಯಗಳು, ಆಯಾ ಪ್ರದೇಶದಲ್ಲೇ ಇದ್ದರೆ ಒಳ್ಳೆಯದು. ಹಾಗಾಗದ ಪಕ್ಷದಲ್ಲಿ, ಆ ಉದ್ದೇಶಕ್ಕಾಗಿ ನಿಗದಿತವಾದ ಪ್ರದೇಶದಲ್ಲಿದ್ದರೆ ಒಳ್ಳೆಯದು. ಅಂತಹ ಸಂದರ್ಭದಲ್ಲಿ ಪ್ರತಿ ಪೆಟ್ರೋಲ್‌ನ ಶೌಚ ಪ್ರದೇಶವೂ, ಕನಿಷ್ಠ 5 ಮೀಟರು ಅಂತರದಲ್ಲಿದ್ದರೆ ಇನ್ನೂ ಒಳ್ಳೆಯದು.

ಪ್ರತಿ ಶೌಚ ಘಟಕವೂ ಪೂರ್ಣ ಸ್ವಾವಲಂಬಿತವಾಗಿರಬೇಕು. ಎಂದರೆ (1) ಕಕ್ಕಸ್ಸು (2) ಮೂತ್ರಿ (3) ಪಾಕೀಜು ವ್ಯವಸ್ಥೆ [**ಗುಂಡಿಗಳಾದರೆ**] (ಅ) ಮಣ್ಣು ರಾಶಿ (ಪ್ರತಿ ಉಪಯೋಗದ ಬಳಿಕ ಮೇಲೆ ಹಾಕಲು) (ಆ) ಮಣ್ಣೆತ್ತಿ ಹಾಕಲು ಕೈಕರಣೆ.

ಕಕ್ಕಸ್ಸುಗಳಿಗೆ ಗುಂಡಿ/ಕಾಲುವೆ ತೆಗೆಯುವುದಾದರೆ, ಕಾಲುವೆಯು 1 ಮೀ. ಉದ್ದ, 25 ಸೆಂ.ಮೀ. ಅಗಲ ಮತ್ತು 40 ಸೆಂ.ಮೀ. ಆಳವಿರಬೇಕು. ಗುಂಡಿಯಾದರೆ ಅದು 25–40 ಸೆಂ.ಮೀ ಅಗಲವಾಗಿರಬೇಕು ಮತ್ತು 1 ಮೀ. ಆಳವಿರಬೇಕು. ಕಾಲುವೆ/ಗುಂಡಿಯ ಪಕ್ಕಗಳು, ನೇರವಾಗಿ ಖಚಿತವಾಗಿರಬೇಕು. ಬೇರುಗಳು ಇದ್ದರೆ ಕತ್ತರಿಸಿ ತೆಗೆದಿರಬೇಕು. ಕಾಲುವೆ ಆದರೆ ಬಾಲಕರು ಅಡ್ಡಡ್ಡ ಕೂಡಬಹುದು. ಗುಂಡಿಗಳಾದರೆ, ಕಾಲುಗಳನ್ನಿಟ್ಟುಕೊಳ್ಳಲು 20–25 ಸೆಂ.ಮೀ. ಅಗಲದ ಹಾಸು ಕಲ್ಲುಗಳನ್ನು ಹಾಕಬೇಕಾಗುತ್ತದೆ. (4) **ಸ್ನಾನದ ಮನೆ** (5) **ನೀರಿನ ವ್ಯವಸ್ಥೆ**. ಶಿಬಿರಗಳ ಬಗ್ಗೆ ವಿವರಣೆ ನೀಡುವ ಪುಸ್ತಕಗಳಲ್ಲಿ ಇನ್ನೂ ಅನೇಕ ವಿಷಯಗಳು ತಿಳಿದು ಬರುತ್ತವೆ.

ಕಾಲುವೆ ಅಥವಾ ಗುಂಡಿ ಕಕ್ಕಸ್ಸುಗಳಾದರೆ, ಪ್ರತಿಬಾರಿ ಉಪಯೋಗಿಸಿದ ಮೇಲೂ ಅದರ ಮೇಲೆ ಒಂದು ಪದರ ಮಣ್ಣು ಬೀಳಬೇಕು. ಇದರಿಂದ ಶಿಬಿರದ ಅವಧಿಯಲ್ಲಿ, ಇದರ ಮೇಲೆ ಕುಳಿತ ನೊಣಗಳು ಆಹಾರ ಪದಾರ್ಥಗಳ ಮೇಲೆ ಬಂದು ಕೂಡುವುದು, ನೊಣಗಳು ಅಭಿವೃದ್ಧಿ ಹೊಂದುವುದೂ ತಪ್ಪುತ್ತದೆ. ಈ ಎಚ್ಚರಿಕೆಯ ಕ್ರಮವು ಬಹಳ ಮುಖ್ಯವಾದುದು. ಎರಡನೆಯ ಮುಖ್ಯ ಅಂಶವೆಂದರೆ ಈ ರೀತಿಯ ಕಕ್ಕಸ್ಸುಗಳಲ್ಲಿ ತೇವಾಂಶವಿಲ್ಲದಂತೆ ಎಚ್ಚರಿಕೆ ವಹಿಸಬೇಕಾದುದು. ತೇವವಾಗುವುದೇ ಆದರೆ ಅದು ಕನಿಷ್ಠ ಪ್ರಮಾಣದಲ್ಲಿರ ಬೇಕಾದುದು ಅತ್ಯವಶ್ಯಕ. ಎರಡು ಕಾರಣಗಳಿಂದ ಇದು ಅವಶ್ಯವಾದುದು (1) ತೇವಾಂಶ ಜಾಸ್ತಿ ಆದಾಗ ಕಾಲುವೆ/ಗುಂಡಿಯ ಪಕ್ಕಗಳು ಕುಸಿಯಬಹುದು (2) ತೇವಾಂಶವು ನೊಣಗಳ ಅಭಿವೃದ್ಧಿಗೆ ಅನುಕೂಲಕರ ಅಂಶವಾಗಿದೆ.

ಮೂತ್ರಿಯ ಗುಂಡಿಯು 30 ಸೆಂ.ಮೀ. ಅಗಲದ ಗುಂಡನೆಯದಾಗಿದ್ದು, 30 ಸೆಂ.ಮೀ ಆಳವಿರುತ್ತದೆ. ಗುಂಡಿಯ 2/3 ಭಾಗಕ್ಕೆ ಸಣ್ಣ ಜಲ್ಲಿ ಕಲ್ಲು ತುಂಬಿರುತ್ತದೆ, ಉಪಯೋಗಕ್ಕೆ ಮುಂಚೆ ಜಲ್ಲಿ ಕಲ್ಲು ತುಂಬಿರಬೇಕು.

### ಶಿಬಿರಗಳ ಗುರಿ

ವಾರ್ಷಿಕ ಶಿಬಿರಗಳು ಪ್ರತಿ ವರ್ಷ ಬರುತ್ತವೆ. ಆದರೆ ಪ್ರತಿ ವಾರ್ಷಿಕ ಶಿಬಿರದ ಗುರಿಯು, ಪ್ರತಿ ಬಾರಿಗೂ ಬೇರೆ ಬೇರೆ ಇರುತ್ತದೆ. ಎಲ್ಲಾ ಶಿಬಿರಗಳಲ್ಲಿಯೂ, ಶಿಬಿರಗಳ ಗುಣಮಟ್ಟವು ಉನ್ನತವಾಗಿರಬೇಕೆಂಬುದು ಒಂದು ಮುಖ್ಯ ಆಶಯ.

ಇದರ ಜೊತೆಗೆ ಪ್ರತಿ ಶಿಬಿರಕ್ಕೂ, ಒಂದು ನಿರ್ದಿಷ್ಟವಾದ ಗುರಿ ಸಾಧಿಸಬೇಕೆಂಬ ಆಶಯವಿರುತ್ತದೆ. ಆಯಾ ಶಿಬಿರದ ಅವಧಿಯಲ್ಲಿ ಆ ಗುರಿಯನ್ನು ತಲುಪಬೇಕೆಂಬ, ಸಾಧಿಸಬೇಕೆಂಬ ಉದ್ದೇಶವಿರುತ್ತದೆ. ಉದಾ: ಸಾಹಸಿಕ ಪರಿಶೋಧನಾ ಯಾತ್ರೆ, ಬೆಟ್ಟ ಹತ್ತುವುದು, ಶಿಲಾರೋಹಣ, ಮಾರ್ಗ ಕಲ್ಪನೆ, ದೋಣಿ ನಡೆಸುವುದು, ಅರಣ್ಯ ವಿಜ್ಞಾನ, ಮಾರ್ಗಶೋಧನೆ, ಸಂಕೇತ ಕ್ರಮದ ಅಭ್ಯಾಸ; ವೈಡ್‌ಗೇಮ್ ಇತ್ಯಾದಿ, ಈ ಉದ್ದೇಶಗಳಲ್ಲಿ, ಪ್ರತಿಯೊಂದನ್ನೂ ಪ್ರತ್ಯೇಕವಾಗಿ ಅಥವಾ ಒಂದೆರಡನ್ನು ಜೊತೆಗೂಡಿಸಿ ಶಿಬಿರದ ಗುರಿಯನ್ನಾಗಿಟ್ಟುಕೊಂಡು ಸಾಧಿಸಬಹುದು. ಶಿಬಿರದ ಗುರಿಯನ್ನು ಗೌ. ನ್ಯಾಯ ಸಭೆಯಲ್ಲಿ ಹಲವಾರು ತಿಂಗಳುಗಳ ಮುಂಚೆಯೇ ತೀರ್ಮಾನ ಮಾಡಲಾಗುತ್ತದೆ. ಶಿಬಿರದಲ್ಲಿ ನಡೆಸುವ ದಳ ಸಭೆಗಳ ಮತ್ತು ದಳದ ಚಟುವಟಿಕೆಗಳನ್ನು, ರೂಪಿಸುವಾಗ ಶಿಬಿರದ ಗುರಿಯನ್ನು ಗಮನದಲ್ಲಿಟ್ಟುಕೊಂಡು ರೂಪಿಸಬೇಕಾಗುತ್ತದೆ. ಶಿಬಿರವು ಪ್ರಾರಂಭವಾಗುವುದಕ್ಕೆ ಮುಂಚಿನ ವಾರಗಳಲ್ಲಿ ಶಿಬಿರದ ಗುರಿಯನ್ನು ಸಾಧಿಸಲು, ಅವಶ್ಯಕವಾದ ತಯಾರಿ ಮಾಡಿಕೊಳ್ಳಬೇಕಾಗುತ್ತದೆ.

ವಾರಾಂತ್ಯ ಶಿಬಿರಗಳೂ ಅಷ್ಟೇ. ವಾರ್ಷಿಕ ಶಿಬಿರಗಳಂತೆ ನಿರ್ದಿಷ್ಟವಾದ ಗುರಿಯನ್ನುಳ್ಳವಾಗಿರುತ್ತವೆ. ಶಿಬಿರದ ಅವಧಿ ಮತ್ತು ಗುರಿಯಲ್ಲಿ ಮಾತ್ರ ವ್ಯತ್ಯಾಸವಿರುತ್ತದೆ. ವಾರಾಂತ್ಯ ಶಿಬಿರಗಳು ಯಶಸ್ವಿ ಆಗಬೇಕಾದರೆ, ಶಿಬಿರವನ್ನು ಸೇರುವ ಮತ್ತು ಶಿಬಿರದಿಂದ ಹಿಂತಿರುಗುವ ಪ್ರಯಾಣದ ಕಾಲವು ಬಹಳ ಕಡಿಮೆ ಇರಬೇಕು. ಶಿಬಿರ ವಿನ್ಯಾಸದಲ್ಲೇನೂ ವ್ಯತ್ಯಾಸವಿರುವುದಿಲ್ಲ. ವಾರ್ಷಿಕ ಶಿಬಿರಗಳಂತೆಯೇ ವಿಶಾಲವಾದ ಕ್ಷೇತ್ರದಲ್ಲಿ. ಅರ್ಧ ವರ್ತುಲಾಕಾರದಲ್ಲಿ ಗುಡಾರಗಳು ಪೆಟ್ರೋಲ್ ಗುಡಾರಗಳು ಒಂದಕ್ಕೊಂದು ದೂರ ದೂರ. ಎಲ್ಲವೂ ಸ್ಕೌ.ಮಾರ ಗುಡಾರಕ್ಕೆ ಅಭಿಮುಖ. ಪೆಟ್ರೋಲ್ ಗುಡಾರಗಳ ಹಿಂಬದಿಯಲ್ಲಿ, ಅದೇ ಸ್ಥಳಗಳಲ್ಲಿ ಅಡಿಗೆ ಮನೆ ಮತ್ತು ಶೌಚಾಲಯಗಳು.

ಸ್ಕೌಟ್ ಕೌಶಲಗಳಲ್ಲಿ ಮತ್ತು ಶಿಬಿರ ವಾಸದಲ್ಲಿ ಶಿಕ್ಷಣ ಪಡೆಯುವುದು ವಾರಾಂತ್ಯ ಶಿಬಿರಗಳ ಮುಖ್ಯ ಉದ್ದೇಶವಾಗಿದೆ. ಹೊರಾಂಗಣ ಜೀವನದ ಸರಿಯಾದ ಅನುಭವವನ್ನು ಸ್ಕೌಟುಗಳಿಗೆ ನೀಡುವುದೇ, ಶಿಬಿರಗಳ ಉದ್ದೇಶವೆಂದರೂ ನಡೆಯುತ್ತದೆ. ಮುಂಬರಲಿರುವ ವಾರ್ಷಿಕ ಶಿಬಿರಕ್ಕೆ ತಯಾರಿ, ಪರೀಕ್ಷಾಂಶಗಳ ಶಿಕ್ಷಣ ಹೀಗೆ ಹಲವಾರು ಉದ್ದೇಶ/ಗುರಿಗಳತ್ತ ಗಮನ ಹರಿಸಬಹುದು. ಗುರಿಯು ಏನೇ ಆದರೂ, ಶಿಬಿರಗಳ ಸಾಹಸಮಯ ಜೀವನ ಮತ್ತು ಆನಂದದಾಯಕ ಅನುಭವಗಳನ್ನು ಸ್ಕೌಟುಗಳು ಪಡೆಯಬೇಕು, ಅವುಗಳ ಸವಿಯನ್ನು ಆಸ್ವಾದಿಸಬೇಕು ಎಂಬುದೇ ಶಿಬಿರಗಳ ಮುಖ್ಯ ಗುರಿ.



## ಅಧ್ಯಾಯ–26

# ಚಾರಣ (ಹೈಕಿಂಗ್)

ಒಂಟಿಯಾಗಿ ಅಥವಾ ಒಬ್ಬಿಬ್ಬರ ಜೊತೆ ಸೇರಿ, ಹೊಸ ಪ್ರದೇಶ/ಗ್ರಾಮಾಂತರ ಪ್ರದೇಶದಲ್ಲಿ ಪ್ರಕೃತಿ ಸೌಂದರ್ಯದ ಸವಿಯನ್ನು ಆಸ್ವಾದಿಸುವ ಉದ್ದೇಶದಿಂದ ಓಡಾಡುವುದು ಮತ್ತು ಹಾಗೆ ಓಡಾಡುವಾಗ, ಅಲ್ಲಿನ ಜನರು ಮತ್ತು ಅವರುಗಳ ನಡೆ–ನುಡಿ, ಆಚಾರ ವಿಚಾರ ಮತ್ತು ಜೀವನಕ್ರಮಗಳನ್ನು ಅಭ್ಯಾಸ ಮಾಡುವುದು; ಮೃಗ–ಪಕ್ಷಿಗಳನ್ನು ಗಮನಿಸುವುದು; ಸ್ಥಳೀಯ ಗಿಡ–ಮರಗಳನ್ನು ಅಭ್ಯಾಸ ಮಾಡುವುದು ಮುಂತಾದ ಒದಗಿಬರುವ ಅವಕಾಶಗಳನ್ನು ಸದುಪಯೋಗ ಮಾಡಿಕೊಳ್ಳುವುದು, ಚಾರಣವೆನಿಸುತ್ತದೆ. ಸ್ಕೌಟುಗಳು ತಮ್ಮ ಕಣ್ಣುಗಳನ್ನು ಸದಾ ತೆರೆದುಕೊಂಡು ಸುತ್ತ ಮುತ್ತ ಗಮನಿಸುವುದನ್ನು ಮತ್ತು ಕಿವಿಗಳನ್ನು ಸಹ ಚುರುಕಾಗಿ ಓಗೊಡಲು ತಯಾರಿಟ್ಟುಕೊಂಡು ಓಡಾಡುವುದನ್ನು ಚಾರಣ ಹೈಕಿಂಗ್ ಎನ್ನುತ್ತೇವೆ.

ಸ್ಕೌಟಿಂಗ್ ಕೌಶಲಗಳನ್ನು ಪರೀಕ್ಷೆ ಮಾಡಿಕೊಳ್ಳುವ ಸದವಕಾಶವು ಹೈಕಿಂಗ್‌ನಲ್ಲಿ ದೊರಕುತ್ತದೆ. ಇದನ್ನೇ ಬೇರೆ ರೀತಿಯಲ್ಲಿ ಹೇಳುವುದಾದರೆ ಹೈಕಿಂಗ್ ಎಂದರೆ ಉತ್ಕೃಷ್ಟ ಸ್ಕೌಟಿಂಗ್.

ಚಾರಣದಲ್ಲಿ ಗೆಲುವು ಸಾಧಿಸಬೇಕಾದರೆ ಅಂತಹವರು ಸ್ಕೌಟಿಂಗ್‌ನಲ್ಲಿ ಸಮರ್ಥರಾಗಿರಬೇಕು. ಸ್ವಾವಲಂಬಿಗಳಾಗಿರಬೇಕು. ನಕ್ಷೆ ಓದಲು ಬರಬೇಕು ಮತ್ತು ಅದನ್ನು ಉಪಯೋಗಿಸಿಕೊಳ್ಳುವ ಬುದ್ಧಿವಂತಿಕೆಯಿರಬೇಕು. ಉತ್ತಮ ರೀತಿಯ ಅನುಭವಗಳನ್ನು ನೀಡುವಂತಹ ದಾರಿಯನ್ನು ಆರಿಸಿಕೊಳ್ಳುವಂತಿರಬೇಕು. ಸ್ಕೌಟಿಂಗ್ ಅನ್ನು ಚೆನ್ನಾಗಿ ಬಲ್ಲವರಾಗಿರಬೇಕು. ದ್ವಿತೀಯ, ತೃತೀಯ ಸೋಪಾನ ಸ್ಕೌಟುಗಳಾಗಿ ಕಲಿತ ಸ್ಕೌಟಿಂಗ್‌ನ ಎಲ್ಲಾ ಕೌಶಲಗಳನ್ನೂ ಹೈಕಿಂಗ್ ಸಮಯದಲ್ಲಿ ಉಪಯೋಗಿಸಿಕೊಳ್ಳುವ ಜಾಣ್ಮೆಯಿರಬೇಕು.

ಒಳ್ಳೆಯ ಚಾರಣಿಗ (ಹೈಕರ್) ಎಂದರೆ ಹೊರಪ್ರದೇಶದಲ್ಲಿ ಯಾವುದೇ ಕಷ್ಟಕಾರ್ಪಣ್ಯಗಳಿಗೆ ಅಂಜದೆ ಒಲೆ (ಬೆಂಕಿ) ಹೊತ್ತಿಸಿ ಅಡಿಗೆ ಮಾಡಿಕೊಳ್ಳುವಂತಿರ ಬೇಕು. ಅವಶ್ಯಕತೆ ಬಿದ್ದಾಗ ಒಪ್ಪಾರ ಹಾಕಿಕೊಳ್ಳಲೂ, ಗುಡಾರ ಹಾಕಿಕೊಳ್ಳಲೂ ಬರಬೇಕು. ಅತಿ ಕಡಿಮೆ ತೂಕದ ಸಾಮಾನುಗಳ ಹೊರೆ ಹೊತ್ತು, ಸುಖ,

ಸಂತೋಷಗಳಿಂದ ನಲಿಯಬೇಕು. ಗುಡಾರವೂ ಸೇರಿ, ತನ್ನ ಎಲ್ಲಾ ಅವಶ್ಯಕ ವಸ್ತುಗಳನ್ನೂ ತನ್ನ ಬೆನ್ನು ಚೀಲ (ರುಕ್ ಸ್ಯಾಕ್)ಕ್ಕೆ ತುಂಬಿ ಅದನ್ನು ಬೆನ್ನು ಮೇಲಿಟ್ಟುಕೊಂಡು, ಹೆಗಲೇರಿಸಿಕೊಂಡು ಕೈಯಲ್ಲಿ ಸ್ಕೌಟ್ ದೊಣ್ಣೆ; ನಕ್ಷೆ ಮತ್ತು ದಿಕ್ಸೂಚಿ ಹಿಡಿದು (ಸಕಲೋಪಯೋಗಿ ಸ್ಕೌಟ್ ಕೊಡಲಿಯನ್ನೂ ಜೊತೆಯಲ್ಲಿ ಇಟ್ಟುಕೊಂಡು) ಹೊರಟರಾಯಿತು. ಅವನ ನೆಚ್ಚಿನ ಭಂಟರು ಅವನನ್ನೆಂದಿಗೂ ಕೈ ಬಿಡುವುದಿಲ್ಲ.

ಚಾರಣ ಮಾಡುತ್ತಾ ಹೋದಂತೆ, ಮತ್ತಷ್ಟು ಮಾಡಬೇಕೆಂಬ ಹಂಬಲ, ಅಭಿಲಾಷೆ, ಅದರ ತಾಂತ್ರಿಕತೆಯಲ್ಲಿ ನಿಪುಣತೆ, ಹೊಸ ಅನುಭವಗಳು ಸೇರುತ್ತಾ ಹೋಗುತ್ತವೆ. ಸ್ಕೌಟಿಂಗ್‌ನಲ್ಲಿನ ಅಭಿರುಚಿಯನ್ನು ಉಳಿಸಿಕೊಳ್ಳುವ, ಒಳ್ಳೆಯ ಸ್ಕೌಟು, ಚಾರಣದ ಹವ್ಯಾಸವನ್ನು ಸಹ ಮುಂದುವರೆಸುತ್ತಾನೆ.

ಚಾರಣಕ್ಕೆ ಒಂದು ಗುರಿಯಿರಬೇಕು. ಸ್ಥಳೀಯ, ಪ್ರಾದೇಶಿಕ ಅಥವಾ ಗ್ರಾಮದ ಅಧ್ಯಯನ ಅಥವಾ ಪ್ರಕೃತಿ ಅಧ್ಯಯನ ಇತ್ಯಾದಿ, ಏನಾದರೂ ಒಂದು ಆಗಿರಬಹುದು. ಪ್ರತಿ ಬಾರಿ ಚಾರಣ ಹೊರಟಾಗಲೂ, ಸ್ಕೌಟುಗಳು ಆಯಾ ಚಾರಣದ ಉದ್ದೇಶವನ್ನು ಖಚಿತವಾಗಿ ರೂಪಿಸಿಕೊಂಡು, ಆ ದಿಕ್ಕಿನಲ್ಲಿ ಮುಂದುವರೆದು ಸಾಧಿಸಬೇಕು.

ಚಾರಣ ಹೊರಟಾಗ ಇದೇ ದಾರಿ ಎಂಬ ಲಕ್ಷ್ಮಣ ರೇಖೆಯಾಗಲೀ, ಹೀಗೇ ನಡೆಯಬೇಕೆಂಬ ಕಟ್ಟುಪಾಡುಗಳಾಗಲೀ ಇರುವುದಿಲ್ಲ. ಪ್ರತಿ ಹಂತದಲ್ಲಿಯೂ ತಮಗೆ ಅನುಕೂಲವಾದಂತಹ ದಾರಿಯನ್ನು ಹಿಡಿಯುವ ಸ್ವಾತಂತ್ರ್ಯವು ಚಾರಣಿಗನಿಗೆ ಸೇರಿದ್ದು, ಗುರಿಯತ್ತ ಸಾಗುವುದು ಮುಖ್ಯ.

ಚಾರಣಿಗನು ತಾನು ಹೈಕ್ ಮಾಡಿದ, ಪ್ರತಿ ಚಾರಣದ ವಿವರಗಳನ್ನೂ ಒಂದು ಪುಸ್ತಕದಲ್ಲಿ ಬರೆಯುವುದು ಉತ್ತಮ. ಅದಕ್ಕಾಗಿ ಬೇರೆಯದೇ ಆದ ಪುಸ್ತಕವನ್ನಿಟ್ಟುಕೊಂಡು, ಸಾಧ್ಯವಾದಷ್ಟೂ ವಿವರಗಳನ್ನು ದಾಖಲಿಸುತ್ತಾ ಹೋಗಬೇಕು. ದಿನಗಳೆದಂತೆ, ಈ ಪುಸ್ತಕವು ಅಮೂಲ್ಯ ದಾಖಲಾತಿಯಾಗಿ ಉಳಿಯುತ್ತದೆ.

ಚಾರಿತ್ರಿಕ ನೆಲೆಗಳು, ಕೋಟೆ ಕೊತ್ತಲುಗಳು, ಭಗ್ನಾವಶೇಷಗಳು, ಸ್ಮಾರಕಗಳು, ಪ್ರಾಚ್ಯಪರಿಶೋಧನಾಕ್ಷೇತ್ರಗಳು ಇವೇ ಮುಂತಾದ ಸ್ಥಳಗಳಿಗೆ ನೀಡುವ ಭೇಟಿಯು ಅತ್ಯಂತ ಲಾಭದಾಯಕವೆನಿಸುತ್ತವೆ.

ಚಾರಣ ಹೊರಡುವುದಕ್ಕೆ ಮುಂಜಾನೆಯು ಪ್ರಶಸ್ತವಾದ ಕಾಲ. ಹಿಂದಿನ ರಾತ್ರಿಯೇ ಬೆನ್ನು ಚೀಲವನ್ನು ತುಂಬಿ ತಯಾರಿಟ್ಟುಕೊಳ್ಳಬೇಕು. ಮುಂಜಾನೆ ಬೇಗ ಉಪಹಾರ ಸೇವಿಸಿ ಹೊರಟುಬಿಡಬಹುದು. ಹಾಗಾಗದ ಪಕ್ಷದಲ್ಲಿ, ಮಧ್ಯಾಹ್ನ 2.30–3ಕ್ಕೆ ಹೊರಟು, ನಿಗದಿತ ಗುರಿ ತಲುಪಿ, ರಾತ್ರಿಗೆ ಅಲ್ಲೇ ಅಡಿಗೆ, ಊಟ ಮಾಡಿ ತಂಗುವಂತಿರಬೇಕು.

ಚಾರಣವು ಗ್ರಾಮಾಂತರ ಪ್ರದೇಶದಲ್ಲಿದ್ದರೆ, ಸೂರ್ಯೋದಯವಾಗುವ ಮುನ್ನ ಹಕ್ಕಿ ಪಕ್ಷಿಗಳು, ಆಹಾರಕ್ಕಾಗಿ ಗೂಡು ಬಿಟ್ಟು ಹೊರಡುವುದನ್ನು ಗಮನಿಸಬಹುದು. ಅವುಗಳ ವೈವಿಧ್ಯತೆ, ಜೀವನ ರೀತಿ, ಕಲರವ ಇತ್ಯಾದಿ., ಗಮನಿಸಲೂ, ಅಧ್ಯಯನ ಮಾಡಲೂ ಅನುಕೂಲವಾಗುತ್ತದೆ. ಸೂರ್ಯೋದಯವನ್ನು ವೀಕ್ಷಿಸಲು ಬರುತ್ತದೆ.

ಬೆನ್ನಿನ ಮೇಲೆ ರುಕ್ ಸ್ಯಾಕ್, ಹೆಗಲಿಗೆ ದೊಣ್ಣೆ, ಏರಿಸಿ ಹೊರಟಿರುವುದರಿಂದ, ನಕ್ಷೆ ಮತ್ತು ದಿಕ್ಸೂಚಿಗಳ ಉಪಯೋಗಕ್ಕೆ ಬಿಚ್ಚು ಗೈ ಇರುತ್ತದೆ. ನಕ್ಷೆಯನ್ನು ಸೂಕ್ಷ್ಮವಾಗಿ ಪರಿಶೀಲಿಸಬೇಕೆಂದಾಗ ರುಕ್ ಸ್ಯಾಕನ್ನು, ಪಕ್ಕದ ಬಂಡೆಯ ಮೇಲಿಟ್ಟು, ಆಸು ಪಾಸಿನಲ್ಲಿರುವ ನದಿ, ಸೇತುವೆ, ಆಲಯ, ಮಂಟಪ ಅಥವಾ ಇತರೇ ಯಾವುದೇ ಸ್ವಾರಸ್ಯಕರ ಕಟ್ಟಡ ಇತ್ಯಾದಿಗಳ ಬಗ್ಗೆ ಅಳತೆ ಮಾಡಲು, ಚಿತ್ರಿಸಿಕೊಳ್ಳಲು, ದಾಖಲಿಸಲು ಅನುಕೂಲವಾಗುತ್ತದೆ. ಸ್ಕೌಟ್ ದಂಡದ ಮೇಲೆ, ಸೆಂ.ಮೀ, ಮೀಟರುಗಳನ್ನು ಕೆತ್ತಿ ಗುರುತಿಸಿದ್ದರೆ, ಎತ್ತರ, ಅಗಲ, ಆಳ, ದೂರ ಇತ್ಯಾದಿ ಅಳತೆ ಮಾಡಲು ಬಹಳ ಅನುಕೂಲವಾಗಿರುತ್ತದೆ.

ರುಕ್ ಸ್ಯಾಕ್ ಹೊತ್ತು ಮುನ್ನಡೆಯುತ್ತಿರುವಾಗಲೂ, ನೀವು ನಕ್ಷೆ ಹಾಗೂ ದಿಕ್ಸೂಚಿಯನ್ನು ಉಪಯೋಗಿಸುತ್ತಲೇ ಇರಬೇಕು. ಇದರಿಂದ ನೀವು ಸರಿಯಾದ ದಾರಿಯಲ್ಲಿ ಮುಂದುವರಿಯುತ್ತಿರುವುದು ಖಚಿತವಾಗುತ್ತದೆ. ನುರಿತ ಚಾರಣಿಗನು, ಎಂದೆಂದಿಗೂ, ತುಳಿದ ದಾರಿಯನ್ನು ಮತ್ತೆ ತುಳಿಯುವುದಿಲ್ಲ. ಕಾಲು ದಾರಿ ಹಿಡಿಯುವುದಿಲ್ಲ. ಆಗಾಗ್ಗೆ ಬದಲು ದಾರಿ ಹಿಡಿಯುವುದರಿಂದ, ಅಂತರ ಪ್ರದೇಶವನ್ನು ಗಮನಿಸಲೂ, ಪ್ರಕೃತಿ ಸೌಂದರ್ಯವನ್ನು ಸವಿಯಲೂ ಅನುಕೂಲವಾಗುತ್ತದೆ.

ನುರಿತ ಚಾರಣಿಗನು ಒಳ್ಳೆಯ ಚಿತ್ರಕಾರನೂ ಹೌದು. ತನ್ನ ಪುಸ್ತಕದಲ್ಲಿ, ಅಲ್ಲಲ್ಲಿ ಕಂಡುಬರುವ ವಸ್ತು ವಿಶೇಷಗಳನ್ನು ಚಿತ್ರಿಸುತ್ತಾ ಹೋಗುತ್ತಾನೆ. ಬಾಲಕರಿಗಾಗಿ ಸ್ಕೌಟಿಂಗ್‌ನ ಶಿಬಿರಾಗ್ನಿ ಉದಂತ–5 (ಪುಟ ಸಂ.65–66)ರಲ್ಲಿ ಈ ರೀತಿ ಚಿತ್ರಿಸಿಕೊಳ್ಳಬಹುದಾದ ಬಗ್ಗೆ ಉದಾಹರಣೆಗಳಿವೆ. ಮುಖ್ಯವಾದ ರಸ್ತೆ ಕೂಡುಗಳು,

ನದೀ ದಾಟುಗಳು ಮತ್ತು ದೃಶ್ಯಗಳು ಇತ್ಯಾದಿ., ಸಾಂಕೇತಿಕ ಗುರುತುಗಳನ್ನು ಹಾಕಿ ನಕ್ಷೆ ಮಾಡಿಕೊಳ್ಳಬಹುದು.

ಚಾರಣದ ದಾರಿಯಲ್ಲಿ ಕಂಡುಬರುವ ಮೃಗ ಪಕ್ಷಿಗಳನ್ನೂ, ಇತರ ಯಾವುದೇ ಸ್ವಾರಸ್ಯಕರ ವಿಶೇಷಗಳನ್ನೂ ಚಿತ್ರಿಸುತ್ತಾ ಹೋಗಬೇಕು. ಪ್ರಾದೇಶಿಕ ವಿಶಿಷ್ಟತೆಯನ್ನು ಸಾರುವ ಕೆಲವು ಹೆಗ್ಗುರುತುಗಳು, ಚಾರಿತ್ರಿಕ ವಿಶೇಷಗಳು ನಿಯಮಾವಳಿಗಳ ಫಲಕ, ಶಿಲಾಶಾಸನಗಳು, ಸತೀ ಕಲ್ಲುಗಳು ಇತ್ಯಾದಿ., ಸಹ ಕಂಡು ಬರಬಹುದು. ಅಂತಹ ವೇಳೆಗಳಲ್ಲಿ, ಉಪಕರಣಗಳ ಸಹಾಯದಿಂದ, ಅವುಗಳ ಜಾಗವನ್ನು ಖಚಿತವಾಗಿ ಗುರುತಿಸಿ ನಕ್ಷೆ ತಯಾರಿಸಿಕೊಳ್ಳಿ. ನಕ್ಷೆ ಅಥವಾ ಬೇರೆಯಾಗಿ ದೃಶ್ಯದ ಚಿತ್ರಣವನ್ನೂ ಮಾಡಬಹುದು.

ಚಾರಣದ ಸಮಯದಲ್ಲಿ ಬೇಗ ಮುಂದಿನ ಊರು ಸೇರಬೇಕೆಂಬ ಅವಸರವಿಲ್ಲ. ಬದಲಾಗಿ ನಿಧಾನವಾಗಿ ಮುಂದುವರೆಯಬಹುದು. ತಯಾರಿಸುವ ವರದಿ, ನಕ್ಷೆ ಹಾಗೂ ಚಿತ್ರಣ ಮಾತ್ರ ಕರಾರುವಾಕ್ಕಾಗಿರಬೇಕು. ವಿವರಗಳು ಕ್ರಮಬದ್ಧವಾಗಿರಬೇಕು ಮತ್ತು ನೈಜವಾಗಿರಬೇಕು. ಬೇರೆಯ ಸ್ಕೌಟುಗಳಾರಾದರೂ ಆ ವರದಿಯನ್ನು ಹಿಡಿದು ಹೊರಟರೆ, ರಸ್ತೆಯನ್ನು ಸುಲಭವಾಗಿ ಹಿಡಿದು ಹೋಗುವುದಿರಲಿ, ನಮ್ಮ ಅನುಭವಗಳು ಅವನಲ್ಲಿ ಮರುಕಳಿಸುವಂತೆ ಇರಬೇಕು.

ಪ್ರಾರಂಭದಲ್ಲಿ, ದಿನಕ್ಕೆ 8–10 ಕಿ.ಮೀ. ಕ್ರಮಿಸಬೇಕು (ಇದು 5–6 ಮೈಲಿ ಆದಂತಾಯಿತು) ವಯಸ್ಸು, ಅನುಭವಕ್ಕೆ ಅನುಗುಣವಾಗಿ ದೂರವನ್ನು ಹೆಚ್ಚಿಸುತ್ತಾ ಹೋಗಬೇಕು.

ಹೊಸ ಜಾಗಗಳಲ್ಲಿ ಮುನ್ನಡೆದಂತೆ, ಅಡಿಗೆ, ಊಟ, ವಿಶ್ರಾಂತಿಗಳಿಗೆ ಅನುಕೂಲಕರವಾದ ಸ್ಥಳಗಳನ್ನು ಆರಿಸಿಕೊಳ್ಳಬೇಕು. ರಾತ್ರಿಯ ವೇಳೆ ತಂಗುವುದಾದರೆ, ತಂಗುವುದಕ್ಕೆ ಸಹ ಅನುಕೂಲಕರ ಸ್ಥಳವನ್ನು ಆರಿಸಿಕೊಳ್ಳಬೇಕು. ರಾತ್ರಿಯ ಹೊತ್ತು ಹೊರಾಂಗಣದಲ್ಲಿ, ಕಂಡೂ ಕಾಣದ ಹೊಸ ಜಾಗದಲ್ಲಿ, ಸೌದೆ ಒಲೆ ಹಚ್ಚಿ ಅಡಿಗೆ ಮಾಡಿಕೊಳ್ಳುವುದೊಂದು ಮರೆಯಲಾಗದ ಅನುಭವ. ಜೊತೆಗೊಬ್ಬರಿಬ್ಬರು ಒಡನಾಡಿಗಳಿದ್ದರಂತೂ, ಆ ಅನುಭವವು ಮತ್ತಷ್ಟು ಸ್ವಾರಸ್ಯಮಯವಾಗಿಬಿಡುತ್ತದೆ. ಲೋಕಾಭಿರಾಮ ಮಾತನಾಡಿಕೊಳ್ಳುತ್ತಾ ಕೆಲಸ ಕಾರ್ಯಗಳನ್ನು ಮಾಡುತ್ತಾ ಹೋಗಬಹುದು. ಅಡಿಗೆ ಕೆಲಸವೂ ತ್ರಾಸದಾಯಕವೆನಿಸುವುದಿಲ್ಲ. ಅಡಿಗೆ ಕೆಲಸದ ಜೊತೆಗೆ ಅಂದಿನ ಪ್ರಯಾಣದ ಆಗು ಹೋಗುಗಳು, ಮಧುರ ಅನುಭವಗಳು, ಗಮನಿಸಿದ ವಿಶೇಷಗಳು, ಮುಂದಿನ ದಿನದ ಪ್ರಯಾಣದ ವಿವರಗಳು ಇತ್ಯಾದಿ

ಚರ್ಚಿಸಿಕೊಳ್ಳಬಹುದು. ವರದಿಯನ್ನು ಸರಿಪಡಿಸಿಕೊಳ್ಳಬಹುದು. ನೀವೂ, ನಿಮ್ಮ ಗೆಳೆಯನೂ/ರೂ ಹತ್ತಿರವಾಗುತ್ತೀರಿ, ಮೈತ್ರಿ ಭಾವನೆ, ಬಾಂಧವ್ಯಗಳು ಬೆಸೆಯುತ್ತವೆ.

ಹೊರಸಂಚಾರಿಯು (ಚಾರಣಿಗನು) ತಾನು ಅಡಿಗೆ ಮಾಡುವ ಸ್ಥಳವನ್ನು ಅಂದವಾಗಿಯೂ, ಚೊಕ್ಕಟವಾಗಿಯೂ, ಒಪ್ಪ ಓರಣವಾಗಿಯೂ ಇಟ್ಟುಕೊಳ್ಳಬೇಕು. ಒಪ್ಪ ಮಾಡುವುದನ್ನು ಕೊನೆಯವರೆಗೂ ಮುಂದಕ್ಕೆ ಹಾಕುತ್ತಾ ಹೋಗದೆ, ಬೇರೆ ಕೆಲಸಗಳನ್ನೂ, ಅಡಿಗೆ ಕೆಲಸವನ್ನೂ, ಮಾಡಿಕೊಳ್ಳುತ್ತಾ, ಜೊತೆಗೆ ಆಗಿಂದಾಗ್ಗೆ ಒಪ್ಪ ಮಾಡುತ್ತಲೇ ಇರಬೇಕು. ಊಟವು ಮುಗಿದ ಮೇಲೂ. ಅಷ್ಟೆ. ಕೂಡಲೆ ಸ್ವಚ್ಛಗೊಳಿಸಬೇಕು.

ಅಡಿಗೆ ಕೆಲಸವು ಮುಂದುವರೆದಂತೆ, ರಾತ್ರಿ ಮಲಗಲು ಹಾಸಿಗೆಯು ತಯಾರಾಗಬೇಕು. ಹವಾಮಾನವು ಸರಿಯಿದ್ದರೆ, ಮೇಲೊಂದು ಸೂರಿಲ್ಲದಿದ್ದರೂ ನಡೆಯುತ್ತದೆ. ಆದರೂ ಹೊರಾಂಗಣದಲ್ಲಿರುವಾಗ, ತಲೆಯ ಮೇಲೊಂದು ವಿತಾನ (Canopy)ವಿರುವುದು ಒಳ್ಳೆಯದು, ಹೊರಸಂಚಾರಿಗೆ ಈ ರೀತಿಯ ಮೇಲ್ಕಟ್ಟನ್ನು ಕಟ್ಟಿಕೊಳ್ಳಲು ತಿಳಿದಿರಬೇಕು. ನೆಲದ ಮೇಲಿನ ತೇವಾಂಶವನ್ನು ಅಡ್ಡಪಡಿಸಲು ಒಂದು ಗ್ರೌಂಡ್‌ಷೀಟ್ ಸಹ ಇರಬೇಕು. ಬಾಲಕರಿಗಾಗಿ ಸ್ಕೌಟಿಂಗ್ ಪುಸ್ತಕದಲ್ಲಿ ಹೇಳಿರುವಂತೆ, ಗಟ್ಟಿ ನೆಲದ ಮೇಲೆ ಮಲಗುವಾಗ ನೆಲದ ಮೇಲೆ, ಪೃಷ್ಠ ಭಾಗದಲ್ಲಿ, ಬಾಂಡ್ಲಿಯಾಕಾರದ ಹಳ್ಳವನ್ನು ಮಾಡಿಕೊಂಡರೆ ಮಲಗಲು ಸುಖಕರವಾಗಿರುತ್ತದೆ. ಆಸುಪಾಸಿನಲ್ಲಿ ಮಂಟಪವೊಂದಿದ್ದರೆ, ಅದರ ಸಮೀಪ ಮಲಗಿದ್ದು, ರಾತ್ರಿಯ ವೇಳೆ ಏನಾದರೂ, ಮಳೆ ಬರುವ ಸೂಚನೆಯು ಕಂಡು ಬಂದರೆ, ಮಲಗಲು ಮಂಟಪಕ್ಕೆ ಬದಲೀ ಆಗುವುದೊಂದು ಒಳ್ಳೆಯ ಯೋಚನೆ.

ಹೊರಾಂಗಣದಲ್ಲಿ ಆಕಾಶವೇ ಹೊದಿಕೆಯಾಗಿ, ವಿತಾನವಾಗಿ, ಮಲಗಿದಾಗ, ನೀನೂ, ನಿನ್ನ ಗೆಳೆಯನೂ/ರೂ, ನಕ್ಷತ್ರಗಳ ಬಗ್ಗೆ ತಾರಾ ಮಂಡಲಗಳ ಬಗ್ಗೆ ಚರ್ಚೆ ಮಾಡಬಹುದು, ಅಧ್ಯಯನ ಮಾಡಬಹುದು, ನಕ್ಷತ್ರಗಳ ಸಹಾಯದಿಂದ ದಿಕ್ಕುಗಳನ್ನೂ ರಾತ್ರಿಯಲ್ಲಿ ವೇಳೆ ಹೇಳುವುದನ್ನೂ ತಿಳಿಯಬಹುದು.

ಹೊರ ಸಂಚಾರದ ವೇಳೆಯಲ್ಲಿ ಯಾವ ಸ್ಕೌಟೂ ಉಪಕಾರ ಮಾಡುವ ಅವಕಾಶಗಳನ್ನು ಕೈ ಬಿಡುವುದಿಲ್ಲ. ಉದಾ: ದಾರಿಯಲ್ಲಿ ನದಿಯು ಅಡ್ಡವಾಗಿ ಹರಿಯುತ್ತಿದೆ. ಅಲ್ಲಿ ಹಾಯ್ಗಡ ಮಾತ್ರವಿದೆ. ಎತ್ತಿನ ಬಂಡಿ ನದಿ ದಾಟಬೇಕು. ಅದು ಹೂತುಕೊಳ್ಳುವ ಸಾಧ್ಯತೆ ಇದೆ. ಆಗ ಆ ಬಂಡಿಯನ್ನು ತಳ್ಳಿ, ನದಿಯನ್ನು ದಾಟಲು

ಸಹಾಯ ಮಾಡಬಹುದು, ರೈತರು ಹೊಲ ಗದ್ದೆಗಳಲ್ಲಿ ಕೆಲಸ ಮಾಡುತ್ತಿರುತ್ತಾರೆ. ಅವರುಗಳು ಸಣ್ಣ ಪುಟ್ಟ ಸಹಾಯಗಳನ್ನು ಕೇಳಿದರೆ ಮಾಡಿಕೊಡಬಹುದು, ದೇವಾಲಯದ ಬಳಿ ಜನ ಜಂಗುಳಿ ಇರುತ್ತದೆ. ಉಪಕಾರ ಮಾಡಲು ಅದೊಂದು ಸದವಕಾಶವೇ ಆಯಿತು, ದಾರಿಹೋಕ ಬಂಡಿಯವರು ವಿಶ್ರಾಂತಿಗೆಂದು ತಂಗುತ್ತಾರೆ. ಉಪಕಾರ ಮಾಡಲು ನಿಮಗೆ ಮತ್ತೊಂದು ಅವಕಾಶ. ಹೀಗೆ ಉಪಕಾರ ಮಾಡಬಯಸುವವರಿಗೆ, ಹೇಳಿಕೇಳಿ ಮಾಡದಿದ್ದರೂ, ವಿಫುಲ ಅವಕಾಶಗಳು ತಾವಾಗಿ ಒದಗಿ ಬರುತ್ತವೆ.

ಬೆಳಗಾಗೆದ್ದ ಕೂಡಲೇ, ಹೊರಸಂಚಾರಿಯು, ತಾನು ತಂಗಿರುವ ಸ್ಥಳದಲ್ಲೆಲ್ಲಾ ತಿರುಗಾಡಿ ತಾನು ಮಾಡಿರಬಹುದಾದ ಗಲೀಜೂ ಸೇರಿದಂತೆ ಇಡೀ ಸ್ಥಳವನ್ನು ಸ್ವಚ್ಛಗೊಳಿಸಬೇಕು.

ಸ್ಕೌಟುಗಳ ಗುಣಮಟ್ಟಕ್ಕೆ ಅನುಗುಣವಾಗಿ ತನ್ನ ಸ್ಕೌಟ್ ಕೌಶಲಗಳನ್ನು ಉಪಯೋಗಿಸುವ, ಅದರ ಅನುಭವಗಳನ್ನು ಕಾರ್ಯರೂಪಕ್ಕಿಳಿಸುವ ಜಾಣ್ಮೆ ಇರಬೇಕು.

**ತೃತೀಯ ಸೋಪಾನ್ ಪ್ರಯಾಣ:** ತೃತೀಯ ಸೋಪಾನ್ ಪ್ರಯಾಣ ಪರೀಕ್ಷಾಂಶವು, ಆ ಪ್ರಯಾಣವನ್ನು ಕೈಗೊಳ್ಳುವ ಸ್ಕೌಟು, ಹೊರಾಂಗಣದಲ್ಲಿ ತನ್ನನ್ನು ತಾನು ನೋಡಿಕೊಳ್ಳಬಲ್ಲನೇ? ಎಂಬುದನ್ನು ಪರೀಕ್ಷಿಸುವ ಉದ್ದೇಶದಿಂದ ರೂಪಿತವಾಗಿದೆ. ಪರೀಕ್ಷೆಗಾಗಿ ಪ್ರಯಾಣವನ್ನು ಕೈಗೊಳ್ಳುವ ಮೊದಲು, ಸ್ಕೌಟು ಸ್ವಲ್ಪ ಸ್ವಲ್ಪವಾಗಿ ದೂರವನ್ನು ಹೆಚ್ಚಿಸುತ್ತಾ ನಡೆದು, ದೂರ ನಡಿಗೆಗಾಗಿ, ಅಭ್ಯಾಸ ಮಾಡಿಕೊಳ್ಳಬೇಕು. ಎಲ್ಲಾ ಸ್ಕೌಟ್ ಕೌಶಲಗಳಿಗೂ, ಈ ಪರೀಕ್ಷಾಂಶಕ್ಕೂ ಹತ್ತಿರದ ಸಂಬಂಧವಿದೆ.

ಸ್ಕೌ.ಮಾ. ಅಥವಾ ಇತರ ಪರೀಕ್ಷಕರು ಈ ಅಂಶದ ಬಗ್ಗೆ ನಿರ್ಣಾಯಕರು, 15 ಕಿ.ಮೀ.ಗಳಿಗೆ ಹೆಚ್ಚಿಲ್ಲದ ದಾರಿಯನ್ನು ನಿರ್ಣಯಿಸುತ್ತಾರೆ. ಪ್ರಯಾಣದ ಅವಧಿ 24 ಗಂಟೆಗಳು, ಸ್ಕೌಟ್ ಒಂಟಿಯಾಗಿರಬಹುದು ಅಥವಾ ಅವನ ಜೊತೆಗೆ ಇನ್ನೊಬ್ಬ ಸ್ಕೌಟ್ ಇರಬಹುದು. ನಿಗದಿಪಡಿಸಿದ ದೂರವನ್ನು ಕಾಲು ನಡಿಗೆಯಲ್ಲಿ ಕ್ರಮಿಸಬೇಕು. ದೋಣಿ ನಡೆಸುವುದಾದರೆ ಈ ದೂರವು 12 ಕಿ.ಮೀ. ಇರುತ್ತದೆ. ಕುದುರೆ/ಸೈಕಲ್ ಸವಾರಿ ಆದರೆ ಈ ದೂರವು 30 ಕಿ.ಮೀ. ಇರುತ್ತದೆ. (ಮೋಟಾರ್ ಸೈಕಲ್/ಸ್ಕೂಟರ್‌ಗಳನ್ನು ಈ ಪ್ರಯಾಣಕ್ಕೆ ಉಪಯೋಗಿಸುವಂತಿಲ್ಲ) ಪ್ರಯಾಣಕ್ಕೆ ಬೇಕಾದ ಎಲ್ಲಾ ವಸ್ತುಗಳನ್ನೂ ರುಕ್‌ಸ್ಯಾಕ್‌ನಲ್ಲಿ ತುಂಬಿ ಹೊರಬೇಕು. ದಾರಿಯಲ್ಲಾಗಲೀ,

ಗಮ್ಯಸ್ಥಾನದಲ್ಲಾಗಲೀ ಯಾವುದೇ ವಸ್ತುವನ್ನು ಕೊಳ್ಳುವ ಅಥವಾ ಕೇಳಿ ಪಡೆಯುವ ಸಂದರ್ಭ ಒದಗಬಾರದು.

ಪರೀಕ್ಷಕರು ಸೂಚಿಸಿದ ವಿಶೇಷ ಅಂಶಗಳೂ ಸೇರಿದಂತೆ, ಅವನು ಪ್ರಯಾಣದ ವರದಿಯನ್ನು ತಯಾರಿಸಬೇಕು. ಪ್ರಯಾಣವನ್ನು ಕೈಗೊಂಡ ವಾರದೊಳಗಾಗಿ, ಪರೀಕ್ಷಕರ ಸೂಚನೆಯ ಮೇರೆಗೆ ತಯಾರಿಸಿದ ವರದಿಯನ್ನು ಅವರಿಗೆ ಒಪ್ಪಿಸಬೇಕು. ಪ್ರಯಾಣಿಸಿದ ಮಾರ್ಗದ ನಕ್ಷೆಯು ಅನವಶ್ಯಕ.

ಪ್ರಯಾಣವು 24 ಗಂಟೆಗಳ ಕಾಲಾವಧಿಯದಾಗಿರಬೇಕು. ಶಿಬಿರದ ಅವಶ್ಯಕ ವಸ್ತುಗಳು, ಉಡಿಗೆ ತೊಡಿಗೆ, ಹಾಸಿಗೆ ಹೊದಿಕೆ, ಪಾತ್ರೆ ಪಗಡಿ, ದಿನಸಿ ಸಾಮಾನುಗಳು ಇತ್ಯಾದಿ., ಎಲ್ಲವನ್ನೂ ಹೊತ್ತು ಒಯ್ದು ಉಪಯೋಗಿಸಬೇಕು. ಹೊರಡುವಾಗ ತಯಾರಾದ ಆಹಾರವನ್ನು ಕೊಂಡೊಯ್ಯುವಂತಿಲ್ಲ, ಸಾಧ್ಯವಾಗುವುದಾದರೆ ಶಿಬಿರ ಹೂಡುವ-ತಂಗುವ ಸ್ಥಳವು, ಸ್ಕೌಟ್‌ನ ಆಯ್ಕೆ ಆಗಿರಬೇಕು. ಆ ಅವಧಿಯಲ್ಲಿ ಇತರ ಸ್ಕೌಟ್‌ಗಳು ಅಲ್ಲಿ ಶಿಬಿರ ಹೂಡಿರಬಾರದು. ಹೂಡಬಾರದು.

ಪರೀಕ್ಷಕರು ಪ್ರಯಾಣ ಮಾಡುವ ಹಾದಿ ಮತ್ತು ಸೇರಬೇಕಾದ ಸ್ಥಳ ಇವುಗಳನ್ನು ಸೂಚಿಸಬಹುದು. ಆ ಸ್ಥಳದಲ್ಲಿ, ಸ್ಕೌಟು ತಂಗಬೇಕಾದ ಯಾವುದೇ ಬಿಂದುವನ್ನು ನಿಗದಿಪಡಿಸಬಾರದು.

ತೃತೀಯ ಸೋಪಾನ ಪರೀಕ್ಷಾಂಶಗಳಲ್ಲಿ, ಸಾಮಾನ್ಯವಾಗಿ, ಈ ಅಂಶವು ಕೊನೆಯದಾಗಿರಬೇಕು.



## ಅಧ್ಯಾಯ–27

# ಪ್ರಥಮ ಚಿಕಿತ್ಸೆ

ಪ್ರಥಮ ಚಿಕಿತ್ಸೆಯ ಹಲವಾರು ಸರಳವಾದ ಅಂಶಗಳನ್ನು ಸ್ಕೌಟ್ ಪರೀಕ್ಷಾಂಶಗಳಲ್ಲಿ ಗೊತ್ತುಪಡಿಸಲಾಗಿದೆ. ಕತ್ತರಿಸಿದ ಮತ್ತು ತರಚಿದ ಗಾಯಗಳು; ಸುಟ್ಟ ಹಾಗೂ ಬೆಂದ ಗಾಯಗಳು; ಮೂಗಿನಲ್ಲಿ ರಕ್ತ ಸ್ರಾವ; ಕುಟುಕಿದ ಮತ್ತು ಕಚ್ಚಿದ ಗಾಯಗಳು; ಉಷ್ಣ ಹಾಗೂ ಸೂರ್ಯಾಘಾತಗಳು; ಇವುಗಳು ಆಗದಂತೆ ನೋಡಿಕೊಳ್ಳುವುದು ಮತ್ತು ಆದಾಗ ಇವುಗಳಿಗೆ ನೀಡುವ ಪ್ರಥಮ ಚಿಕಿತ್ಸಾ ಕ್ರಮಗಳು; ಗಾಯವನ್ನು ಸ್ವಚ್ಛಗೊಳಿಸಿ, ಶುಭ್ರವಾದ ಡ್ರೆಸ್ಸಿಂಗ್ ಮಾಡುವುದು; ಮುಮ್ಮೂಲೆ ಪಟ್ಟಿಯ ಉಪಯೋಗವನ್ನು ತಿಳಿದಿರುವುದು; ದೊಡ್ಡ ಮತ್ತು ಸಣ್ಣ ಕೈ ತೂಗುಗಳನ್ನು ಹಾಕುವುದು; ಮೊಣಕಾಲಿಗೆ, ತಲೆಗೆ, ಮೊಣಕೈಗೆ, ಅಂಗೈಗೆ, ಪಾದಕ್ಕೆ ಬ್ಯಾಂಡೇಜ್ ಮಾಡುವುದು; ಆಘಾತಕ್ಕೆ (Shock) –(ವಿದ್ಯುದಾಘಾತವಲ್ಲ) ಚಿಕಿತ್ಸೆ; ಕಣ್ಣಿನಲ್ಲಿ ಧೂಳುಬಿದ್ದರೆ ಏನು ಮಾಡುವುದು? ಹೀಗೆ ಸರಳ ಸಾಮಾನ್ಯ ವಿಷಯಗಳು ತಿಳಿದಿರಬೇಕು. ಸಾಮಾನ್ಯ ಆರೋಗ್ಯ ನಿಯಮಗಳನ್ನೂ ತಿಳಿದಿರಬೇಕು.

ಅಪಘಾತ ಅಥವಾ ಇದಕ್ಕಿದ್ದಂತೆ ಉಂಟಾಗುವ ಅಸ್ವಸ್ಥತೆಗಳಿಗೆ, ವೈದ್ಯರ ಸಹಾಯವು ದೊರಕುವವರೆಗೆ, ಕೂಡಲೇ, ಸಮಯಕ್ಕೆ ತಕ್ಕಂತೆ, ರೋಗಿಗೆ ನೀಡುವ ತಾತ್ಕಾಲಿಕ ಚಿಕಿತ್ಸೆ ಅಥವಾ ಉಪಶಮನಕ್ಕೆ ಪ್ರಥಮ ಚಿಕಿತ್ಸೆ ಎಂದು ಕರೆಯುತ್ತಾರೆ.

**ಪ್ರಥಮ ಚಿಕಿತ್ಸೆಯಿಂದ** (i) ರೋಗಿಯ ಜೀವವನ್ನು ಉಳಿಸಿದಂತಾಗುತ್ತದೆ. (ii) ರೋಗಿಯ ಪರಿಸ್ಥಿತಿ ಮತ್ತೂ ಉಲ್ಬಣಿಸದಂತೆ ಕಾಪಾಡಿದಂತಾಗುತ್ತದೆ. (iii) ರೋಗಿಯು ಶೀಘ್ರವಾಗಿ ಚೇತರಿಸಿಕೊಳ್ಳಲು ಸಹಾಯವಾಗುತ್ತದೆ.

ವೈದ್ಯಕೀಯ ಚಿಕಿತ್ಸೆ ನೀಡಲು ಡಾಕ್ಟರು ಬಂದ ಕೂಡಲೇ ಅವರಿಗೆ ತಾನು ಕಂಡ ರೋಗಿಯ ಪರಿಸ್ಥಿತಿಗಳು ಕೈಕೊಂಡ ಕ್ರಮಗಳನ್ನು ವಿವರಿಸುವ ಮೂಲಕ ಪ್ರಥಮ ಚಿಕಿತ್ಸಕನ ಪಾತ್ರವು ಮುಗಿದಂತಾಗುತ್ತದೆ.

## ಪ್ರಥಮ ಚಿಕಿತ್ಸಕನಿಗೆ

i) ಉತ್ತಮ ಮಟ್ಟದ ಅವಲೋಕನಾ ಶಕ್ತಿ ಇರಬೇಕು

ii) ನೋಡಿದ ಕೂಡಲೇ ರೋಗಿಯ ಪರಿಸ್ಥಿತಿಯ, ಕಾರಣಗಳನ್ನು ಊಹಿಸುವಂತಿರಬೇಕು

iii) ಅವಶ್ಯಕ ಪ್ರಥಮ ಚಿಕಿತ್ಸಾ ಸಾಧನಗಳನ್ನು ಸ್ಥಳದಲ್ಲೇ ಹೊಂದಿಸಿಕೊಳ್ಳುವ ವ್ಯವಹಾರ ಜಾಣ್ಮೆಯಿರಬೇಕು.

iv) ರೋಗಿಯ ಬಗ್ಗೆ ಅನುಕಂಪವಿರಬೇಕು.

v) ಚಿಕಿತ್ಸೆ ಮಾಡುವಾಗ ತಾಳ್ಮೆ ಇರಬೇಕು

vi) ರೋಗಿಯನ್ನು ಉಪಚರಿಸುವಾಗ ಕೈಚಳಕವಿರಬೇಕು. ಅದರಿಂದ ರೋಗಿಗೆ ಸಂಪೂರ್ಣ ಸೌಖ್ಯವುಂಟಾಗುವಂತಿರಬೇಕು

vii) ಸಾಮಾನ್ಯ ತಿಳುವಳಿಕೆ, ಆತ್ಮ ವಿಶ್ವಾಸ ಮತ್ತು ವ್ಯವಹಾರ ಜ್ಞಾನವಿರಬೇಕು

viii) ಎಲ್ಲಕ್ಕೂ ಹೆಚ್ಚಾಗಿ ಧೃತಿಗೆಡದೆ, ಗಮನಹರಿಸಿ, ಯೋಚಿಸಿ ಕೆಲಸ ಮಾಡಬೇಕು.

## ಪ್ರಥಮ ಚಿಕಿತ್ಸಕನು ಅನುಸರಿಸಬೇಕಾದ ಸೂತ್ರಗಳು: (Golden Rules)

1. ಮೊದಲು ಮಾಡಬೇಕಾದ್ದನ್ನು ಕೂಡಲೇ ಯಾವುದೇ ಗಡಿಬಿಡಿ ಮಾಡದೆ, ಮೊದಲು, ಮಾಡಿ ಮುಗಿಸಬೇಕು.

2. ಉಸಿರಾಡುವುದು ಪೂರ್ಣವಾಗಿ ನಿಂತುಹೋಗಿದ್ದರೆ, ಕೂಡಲೇ ಉಸಿರು ಬರುವಂತೆ, ಕೃತಕ ಶ್ವಾಸಕ್ರಮವನ್ನು ಅನುಸರಿಸಬೇಕು.

3. ರಕ್ತಸ್ರಾವವಿದ್ದರೆ ಮೊದಲು ಅದನ್ನು ನಿಲ್ಲಿಸಬೇಕು.

4. ಆಘಾತವಾಗದಂತೆ ನೋಡಿಕೊಳ್ಳಬೇಕು; ಆಗಿದ್ದರೆ ಕೂಡಲೇ ಉಪಚರಿಸಬೇಕು.

5. ಯಾವುದೇ ಪ್ರಯತ್ನವನ್ನೂ ಅತಿ ಮಾಡಬಾರದು.

6. ರೋಗಿಯ ಸುತ್ತಲೂ ಇರುವವರಿಗೂ ಸಹ ಧೈರ್ಯ ಹೇಳಿ, ಭರವಸೆ ತುಂಬಿ, ಕಳವಳವನ್ನು ದೂರ ಮಾಡಬೇಕು.

7. ರೋಗಿಗೆ ನಿರ್ಮಲವಾದ ತುಂಬು ಗಾಳಿಯ ಅವಶ್ಯಕತೆ ಇರುವುದರಿಂದ ರೋಗಿಯನ್ನು ಸುತ್ತುವರಿದಿರುವವರಿಗೆ ವಿಷಯವನ್ನು ತಿಳಿಸಿ, ಗುಂಪನ್ನು ಚದುರಿಸಬೇಕು.

8. ಅನಾವಶ್ಯಕವಾಗಿ ಬಟ್ಟೆಗಳನ್ನು ಸಡಿಲಿಸುವುದು, ತೆಗೆಯುವುದು ಮಾಡಬಾರದು.

9. ಆದಷ್ಟೂ ಜಾಗ್ರತೆಯಾಗಿ, ರೋಗಿಯನ್ನು ಡಾಕ್ಟರ ವಶಕ್ಕೆ ಒಪ್ಪಿಸುವ, ಆಸ್ಪತ್ರೆಗೆ ಸೇರಿಸುವ ವ್ಯವಸ್ಥೆ ಮಾಡಬೇಕು.

10. ಹಾಗೆ ಒಪ್ಪಿಸುವಾಗ ತಾನು ಕಂಡ ರೋಗಿಯ ಸ್ಥಿತಿ, ಕೈಗೊಂಡ ಕ್ರಮಗಳನ್ನು ವಿವರಿಸಬೇಕು.

**ಕತ್ತರಿಸಿದ ಮತ್ತು ತರಚಿದ ಗಾಯಗಳು**

ಪ್ರಥಮ ಚಿಕಿತ್ಸಕರು ತಮ್ಮ ಕೈಯನ್ನು ತೊಳೆದುಕೊಂಡು, ಶುಭ್ರಪಡಿಸಿಕೊಂಡು, ಕೆಲಸ ಮಾಡಬೇಕು. ಮೊದಲಿಗೆ ಕೈಯನ್ನು ಡೆಟಾಲ್ ಅಥವಾ ಕ್ರಿಮಿ ನಾಶಕ ದ್ರವದಿಂದ ತೊಳೆದುಕೊಳ್ಳಬೇಕು. ಗಾಯವನ್ನು ಡೆಟಾಲ್, ಅಯೋಡಿನ್ ಅಥವಾ ಇತರ ಕ್ರಿಮಿನಾಶಕ ದ್ರವದಿಂದ ಶುಭ್ರಪಡಿಸಬೇಕು. ಕ್ರಿಮಿ ಶುದ್ಧವಾದ ಬಟ್ಟೆ – ಲಿಂಟ್ ಹಾಕಿ ಕಟ್ಟಬೇಕು.

**ಉಳುಕು**

ಮೂಳೆ, ಕೀಲುಗಳ ಬಳಿ ಅಂಗ ಸತ್ವಗಳ ಹರಿಯುವಿಕೆಯಿಂದ 'ಉಳುಕು' ಉಂಟಾಗುತ್ತದೆ.

**ಉಳುಕಿನ ಸೂಚನೆಗಳು:** (i) ಕೀಲಿನ ಬಳಿ ನೋವು (ii) ಹೆಚ್ಚು ನೋವಿರುವುದರಿಂದ, ಅದನ್ನು ತಡೆಯಲು, ಕೀಲನ್ನು ಕದಲಿಸದಂತಿರುವುದು (iii) ಊತವಿರುವುದು

**ಪ್ರಥಮ ಚಿಕಿತ್ಸಕನು:** (i) ಉಳುಕಿರುವ ಭಾಗವನ್ನು ಸಾಧ್ಯವಾದಷ್ಟು ಮೇಲೆತ್ತಿ, ಅಲುಗದಂತೆ ಹಿತಕರ ಸ್ಥಿತಿಯಲ್ಲಿಡಬೇಕು (ii) ಉದ್ದನೆಯ ಪಟ್ಟಿಯಿಂದ, ಕೀಲನ್ನು ಭದ್ರವಾಗಿ, ಬಿಗಿಸಿ ಕಟ್ಟಬೇಕು. (iii) ಪಟ್ಟಿಯನ್ನು ತಣ್ಣೀರಿನಿಂದ ನೆನೆಸಿ, ಒದ್ದೆಯಾಗಿ ತಣ್ಣಗಿಡಬೇಕು (iv) ಸ್ವಲ್ಪ ಸಮಯದ ಬಳಿಕ – ಈ ಚಿಕಿತ್ಸೆಯಿಂದ ಉಪಯೋಗ ಕಾಣದಂತಾಗಬಹುದು. ಆಗ ಪಟ್ಟಿಯನ್ನು ತೆಗೆದು ಪುನಃ ಕಟ್ಟಬೇಕು, ಒದ್ದೆ ಮಾಡಬೇಕು.

ಹಿಮ್ಮಡಿಯಲ್ಲಿ ಉಳುಕುಂಟಾದರೆ ಬೂಟ್/ಷೂ ಬಿಚ್ಚಬಾರದು. ಅದರ ಮೇಲೆಯೇ 8ರ ಆಕಾರದಲ್ಲಿ ಭದ್ರವಾಗಿ ಪಟ್ಟಿಕಟ್ಟಿ, ಒದ್ದೆ ಮಾಡಬೇಕು. ಇದರಿಂದ ಪಟ್ಟಿಯು ಮತ್ತಷ್ಟು ಬಿಗಿಯಾಗುತ್ತದೆ.

## ಸುಟ್ಟ ಮತ್ತು ಬೆಂದ ಗಾಯಗಳು

ಕಾದ ಘನ ಪದಾರ್ಥಗಳು – ಉದಾ: ಇಸ್ತ್ರಿ ಪೆಟ್ಟಿಗೆ, ಕಬ್ಬಿಣ, ವಿದ್ಯುತ್ ತಂತಿ/ಒಲೆ, ಹಗ್ಗದ ಉಜ್ಜುವಿಕೆ, ಸುಡುವ ದ್ರಾವಣಗಳು ಇತ್ಯಾದಿಯಿಂದ ಸುಟ್ಟ ಗಾಯಗಳಾಗುತ್ತವೆ. ಕಾದ ದ್ರವ ಪದಾರ್ಥಗಳು ಉದಾ: ನೀರು, ಎಣ್ಣೆ, ಇತ್ಯಾದಿಯಿಂದ ಬೆಂದ ಗಾಯಗಳಾಗುತ್ತವೆ. ಬೆಂದ ಗಾಯಗಳಲ್ಲಿ ಬೊಬ್ಬೆಬಂದಿರಬಹುದು, ಬೊಬ್ಬೆಯು ಒಡೆದಿರಬಹುದು,

ಶಾಖಾಂಶದ ವ್ಯತ್ಯಾಸದಿಂದ ಸುಡುವ ಮಟ್ಟದಲ್ಲೂ ವ್ಯತ್ಯಾಸವನ್ನು ಕಾಣಬಹುದು. ಉದಾ: ಚರ್ಮವು ಕೆಂಪಗಾಗಬಹುದು; ಬೊಬ್ಬೆ ಬರಬಹುದು; ಅಂಗ ಭಾಗವು ಪೂರಾ ಸುಟ್ಟು ಕರಕಲಾಗಿ, ಉಪಯೋಗವಿಲ್ಲದಂತಾಗಬಹುದು.

ಅತಿ ಹೆಚ್ಚಾಗಿ ಸುಟ್ಟ/ಬೆಂದ ಗಾಯಗಳ ವಿಷಯದಲ್ಲಿ, ನಾವು ಕೂಡಲೇ ಆಘಾತಕ್ಕೆ (shock) ಚಿಕಿತ್ಸೆ ಮಾಡಬೇಕು. ರೋಗಿಯನ್ನು ಕಂಬಳಿಯಿಂದ ಸುತ್ತಿ ಬೆಚ್ಚಗಿಡಬೇಕು. ಅವಶ್ಯಕವೆನಿಸಿದರೆ ಬೆಚ್ಚಗಿರುವ/ಬಿಸಿಯಾದ, ಸಿಹಿಯಾದ 'ಟೀ' ಕೊಡಬಹುದು.

ಬೊಬ್ಬೆ ಬಂದಿದ್ದರೆ ಒಡೆಯಬಾರದು. ಒಣ ಕ್ರಿಮಿನಾಶಕ 'ಲಿಂಟ್' ಅನ್ನು ಗಾಯದ ಮೇಲೆ ಮುಚ್ಚಿ ಮೆದುವಾಗಿ ಡ್ರಸಿಂಗ್ ಮಾಡಬೇಕು. ಕೂಡಲೇ ಲಿಂಟ್ ಇರದಿದ್ದರೆ, ದೋಭಿಯಿಂದ ಸೀದಾಬಂದ ಬಟ್ಟೆಯನ್ನು ಉಪಯೋಗಿಸಬಹುದು. ಪ್ರಥಮ ಚಿಕಿತ್ಸಕನ ಕೈಗಳು ಶುಭ್ರವಾಗಿರಬೇಕು. ಗಾಯವನ್ನು ಕೈಯಿಂದ ಮುಟ್ಟಬಾರದು.

ಸಾಮಾನ್ಯವಾಗಿ ಪಟ್ಟಿಯನ್ನು ಬಿಗಿಸಬೇಕು. ಬೊಬ್ಬೆ ಇದ್ದಾಗ, ಅದು ಒಡೆಯದಂತೆ ಜಾಗ್ರತೆ ವಹಿಸಿ, ಮೆದುವಾಗಿ ಬ್ಯಾಂಡೇಜ್ ಮಾಡಬೇಕು. ಸುಟ್ಟ, ಬೆಂದ ಭಾಗವು ಅಲುಗಾಡದಂತೆ ಜಾಗ್ರತೆವಹಿಸಬೇಕು.

## ಮೂಗಿನಿಂದ ರಕ್ತಸ್ರಾವ

ರೋಗಿಯನ್ನು ಕುರ್ಚಿಯ ಮೇಲೆ ಕೂಡಿಸಿ ಅವನು(ಳು) ಕುಳಿತೆಡೆಯಲ್ಲಿ ಗಾಳಿಯು ಬೀಸುವಂತೆ ಮಾಡಿ. ತಲೆಯನ್ನು ಮುಂದಕ್ಕೆ ಬಾಗಿಸಬೇಕು. ಮುಖದ ಕೆಳಗೆ ಅಗಲ ಬಾಯಿಯ ಪಾತ್ರೆ ಇಟ್ಟು ರಕ್ತವು ಅದರಲ್ಲಿ ಬೀಳುವಂತೆ ಮಾಡಬೇಕು. ಮೂಗಿನ ಮೃದುವಾದ ಭಾಗವನ್ನು ಕೆಲವು ನಿಮಿಷ ಒತ್ತಿ ಹಿಡಿಯಬೇಕು. ರಕ್ತವನ್ನು ಸಂಗ್ರಹಿಸುವಂತೆ ಹೇಳಬೇಕು. ಮೂಗಿಗೆ ಒದ್ದೆ ಬಟ್ಟೆ ಅಥವಾ ಮಂಜುಗಡ್ಡೆ ಇಡಬೇಕು.

ರೋಗಿಯು ಬಾಯಿಯನ್ನು ತೆರೆದಿಟ್ಟುಕೊಂಡಿರಲು ಹೇಳಿ. **ಮೂಗಿನಲ್ಲಿ ಉಸಿರಾಡಕೂಡದೆಂದು** ತಿಳಿಸಿ. ಸೀನಕೂಡದೆಂದು ಹೇಳಿ.

ರಕ್ತವು ಇನ್ನೂ ನಿಲ್ಲದಿದ್ದರೆ, ವೈದ್ಯರ ಸಹಾಯ ಪಡೆಯಬೇಕು.

**ಕುಟುಕು ಮತ್ತು ಕಚ್ಚಿದ ಗಾಯಗಳು:**

**ಜೇನು ಹುಳು ಕುಟುಕಿದಾಗ** – ಕೂಡಲೇ ಕುಟುಕಿದ ಜಾಗದಲ್ಲಿ ಇರುವ ಅದರ ಕೊಂಡಿಯನ್ನು ತೆಗೆಯಬೇಕು. ಅವಶ್ಯಕತೆಗೆ ತಕ್ಕಂತೆ, ಸೂಜಿಯ ಮೊನೆಯನ್ನು ದೀಪದ ಉರಿಯ ಮೇಲೆ ಆಡಿಸಿ, ಕ್ರಿಮಿನಾಶ ಮಾಡಿ, ಕೊಂಡಿಯನ್ನು ತೆಗೆಯಲು ಉಪಯೋಗಿಸಬಹುದು. ಇದೇ ರೀತಿ, ಕಣಜ ಇತ್ಯಾದಿ ಕುಟುಕುಗಳಿಗೂ ಸಹ. ಕೊಂಡಿಯನ್ನು ತೆಗೆದ ಮೇಲೆ, ಜೇನು ಕುಟುಕಾದರೆ, ಸೋಡಿಯಂ ಬೈಕಾರ್ಬೋನೇಟ್ ದ್ರಾವಣದಿಂದಲೂ, ಕಣಜದ ಕುಟುಕಾದರೆ ವಿನಿಗರ್ ದ್ರಾವಣದಿಂದಲೂ ತೊಳೆಯಬಹುದು.

**ಹಾವು ಕಡಿತ** – ಮೊದಲಿಗೆ ಡಾಕ್ಟರಿಗೆ ಹೇಳಿ ಕಳುಹಿಸಬೇಕು, ಕೂಡಲೇ ಹಾವು ವಿಷ ಪೂರಿತವೇ ಪತ್ತೆ ಮಾಡಿ, ವಿಷದ ಹಾವಾದರೆ, ವಿಷವು ಹರಡದಂತೆ ಹಾಗೂ ವಿಷದ ಪ್ರಭಾವವು ಕಡಿಮೆ ಆಗುವಂತೆ, ಕೂಡಲೇ ಜಾಗ್ರತೆ ವಹಿಸಿ ಚಿಕಿತ್ಸೆ ಮಾಡಬೇಕು.

ಕಡಿತದ ಭಾಗವನ್ನು ಸೋಪು ನೀರಿನಿಂದ ತೊಳೆಯಬೇಕು. ಮಂಜುಗಡ್ಡೆ ಪುಡಿಮಾಡಿ ಗಾಯದ ಸುತ್ತಲೂ ಇಡಬೇಕು.

ರೋಗಿಯನ್ನು ಬೆಚ್ಚಗಿಡಬೇಕು. ಡಾಕ್ಟರು ಬಂದ ಮೇಲೆ ಅವಶ್ಯಕತೆಗೆ ತಕ್ಕಂತೆ, ರೋಗಿಯನ್ನು ಆಸ್ಪತ್ರೆಗೆ ಸಾಗಿಸಲು ವ್ಯವಸ್ಥೆ ಮಾಡಬೇಕು. ವಿಷಪೂರಿತ ಜೇಡ

(ಅಥವಾ ಇತರೇ ಯಾವುದೇ) ಕಡಿತ – ಹಾವು ಕಡಿತಕ್ಕೆ ಮಾಡಿದಂತೆಯೇ ಚಿಕಿತ್ಸೆ ಮಾಡಬೇಕು.

**ಹುಚ್ಚು ಪ್ರಾಣಿಗಳ ಕಡಿತ:** ಹುಚ್ಚು ನಾಯಿ, ನರಿ, ಕುದುರೆ, ಕೋತಿ ಇತ್ಯಾದಿ ಪ್ರಾಣಿಗಳ ಕಡಿತವು ಅಪಾಯಕರವಾದುದು. ಎಷ್ಟೋ ವೇಳೆಗಳಲ್ಲಿ ಅದು ಮಾರಣಾಂತಕವಾದುದು ಕೂಡಾ. ಹುಚ್ಚು ಹಿಡಿಸುವ ನಂಜು, ಆ ಪ್ರಾಣಿಗಳ ಎಂಜಲಿನಲ್ಲಿರುತ್ತದೆ.

**ಹುಚ್ಚುನಾಯಿ ಕಡಿತ:** ಗಾಯಗೊಂಡ ಭಾಗವು ಕೆಳಗೇ ಇರಲಿ. ಮೇಲೆತ್ತಬಾರದು. ಗಾಯದ ಭಾಗವನ್ನು ಸೋಪು ನೀರಿನಿಂದ ತೊಳೆಯಬೇಕು. ಗಾಯದ ಮೇಲೆ ಮೆದುವಾಗಿ ಬ್ಯಾಂಡೇಜ್ ಮಾಡಿ ಡಾಕ್ಟರ್ ಬಳಿಗೆ ಕರೆದೊಯ್ಯಬೇಕು.

**ಸೂರ್ಯಾಘಾತ**

ಸೂರ್ಯ ಕಿರಣಗಳಿಗೆ ನೇರವಾಗಿ ಮೈಯೊಡ್ಡಿದಾಗ ಸೂರ್ಯಾಘಾತವು ಉಂಟಾಗುವ ಸಾಧ್ಯತೆಯುಂಟು. ಇದನ್ನು ತಡೆಗಟ್ಟಲು ಚರ್ಮಕ್ಕೂ, ಸೂರ್ಯಕಿರಣಗಳಿಗೂ ಮಧ್ಯೆ ಬರುವ ರೀತಿಯಲ್ಲಿ, ಸೂಕ್ತ ಉಡುಪನ್ನು ಧರಿಸಿ ರಕ್ಷಿಸಿಕೊಳ್ಳಬೇಕು. ತಲೆಗೆ ಬಿಸಿಲಿನ ಝಳವು ತಗುಲದಂತೆ ಶಿರಸ್ತ್ರಾಣವನ್ನು, ಬೆನ್ನು ಮೂಳೆಯು ನೇರ ಸಂಪರ್ಕ ಹೊಂದದಂತೆ ರಕ್ಷಾಕವಚವನ್ನು ಧರಿಸಬೇಕು. ಸೂಕ್ಷ್ಮನರಗಳಿರುವ ಕಣ್ಣು ಭಾಗವನ್ನು ಬಣ್ಣದ ಕನ್ನಡಕ ಧರಿಸಿ, ಸೂರ್ಯತಾಪದಿಂದ ರಕ್ಷಿಸಿಕೊಳ್ಳಬೇಕು.

ಕೂಲಿಂಗ್ ಲೋಷನ್ ಮತ್ತು ಕೋಲ್ಡ್ ಕ್ರೀಂಗಳನ್ನು ಉಪಯೋಗಿಸಿ ಸೂರ್ಯತಾಪದ ಪ್ರಭಾವವನ್ನು ತಗ್ಗಿಸಿಕೊಳ್ಳಬಹುದು. ಸೂರ್ಯತಾಪವು ಹೆಚ್ಚಾದಾಗ ತಲೆನೋವು, ವಾಂತಿ ಇತ್ಯಾದಿ., ಪ್ರಾರಂಭವಾಗಬಹುದು. ತಾಪವು ಅತಿಯಾದಾಗ ಕುಸಿದು ಬೀಳಬಹುದು. ರೋಗಿಯನ್ನು ನೆರಳಿರುವ, ತಣ್ಣನೆಯ ಸ್ಥಳಕ್ಕೆ ಬದಲಾಯಿಸಬೇಕು. ರೊಗಿಯ ಮುಂತಲೆಯ ಮೇಲೆ, ತಣ್ಣೀರು ತುಂಬಿದ ಐಸ್‌ಪ್ಯಾಡ್ ಇಡಬೇಕು. ಎಲ್ಲಕ್ಕೂ ಮೊದಲು ಡಾಕ್ಟರಿಗೆ ಹೇಳಿಕಳುಹಿಸಬೇಕು.

**ಶಾಖದಿಂದುಂಟಾಗುವ ಅತಿ ಬಳಲಿಕೆ**

ಶಾಖದಿಂದುಂಟಾಗುವ ಅತಿ ಬಳಲಿಕೆ ಅಥವಾ ಕುಸಿದು ಬೀಳುವುದು, ಶಾಖವೇ ಅಲ್ಲದೆ ಇತರ ಕಾರಣಗಳಿಂದಲೂ ಆಗಬಹುದು. ಬಿಸಿಲಿನ ಝಳವು

ಜಾಸ್ತಿಯಾದ ಸಮಯದಲ್ಲಿ, ಸೂಕ್ತ ಉಡುಪು ಧರಿಸದೆ ಇರುವುದು ಕಾರಣವಾಗಬಹುದು; ಶಾಖದಿಂದ ಕೂಡಿದ ಗಾಳಿಯಾಡದ ಕೋಣೆಯಲ್ಲಿ ಆಗಬಹುದು; ಜನಸಮ್ಮರ್ದ ರೈಲು ಬೋಗಿಯಲ್ಲಾಗಬಹುದು. ಉಸಿರು ಕಟ್ಟಿಸುವಂತಹ ವಾತಾವರಣದಲ್ಲಿ, ಕೆಲಸ ಮಾಡುವವರಲ್ಲಿ ಸಾಮಾನ್ಯವಾಗಿ ಇದು ಸಂಭವಿಸುತ್ತದೆ. ಶಾಖದಿಂದುಂಟಾಗುವ ಅತಿ ಬಳಲಿಕೆಯಿಂದ ತಲೆ ಸುತ್ತುವಂತಾಗಿ, ವ್ಯಕ್ತಿಯು ಜ್ಞಾನ ತಪ್ಪಿ ಕೆಳಗೆ ಬೀಳುತ್ತಾನೆ/ಳೆ. ಚರ್ಮವು ತಣ್ಣಗಾಗುತ್ತದೆ ಮತ್ತು ಅಂಟಂಟಾಗುತ್ತದೆ.

**ಇದನ್ನು ತಡೆಗಟ್ಟಲು ಚಿಕಿತ್ಸೆ:** ಸೂಕ್ತವಾದ, ಅಳಕವಾದ ಉಡುಪನ್ನು ಧರಿಸಬೇಕು. ನೀರನ್ನು ಹೆಚ್ಚು ಪ್ರಮಾಣದಲ್ಲಿ ಕುಡಿಯಬೇಕು. ಪಥಚಲನೆ ಅಥವಾ ಆಲಸ್ಯಕರ ಚಟುವಟಿಕೆಯನ್ನು, ದಿನದಲ್ಲಿ ಹೆಚ್ಚು ಉಷ್ಣತೆಯಿರುವ ವೇಳೆಯಲ್ಲಿ ಕಡಿಮೆ ಮಾಡಬೇಕು.

**ಕ್ರಿಯಾಶೀಲ ಪ್ರಥಮಚಿಕಿತ್ಸೆ:** ರೋಗಿಯನ್ನು ತಣ್ಣಗಿರುವ, ಚೆನ್ನಾಗಿ ಗಾಳಿಯಾಡುವ ಸ್ಥಳಕ್ಕೆ ಕೊಂಡೊಯ್ದು, ಮಲಗಿಸಿ, ಕುತ್ತಿಗೆಯ ಭಾಗದಲ್ಲಿ, ಉಡುಪನ್ನು ಸಡಿಲ ಮಾಡಿ, ಉತ್ತೇಜನ ನೀಡಿ, ಎಚ್ಚರಿಸಲು, ತಲೆ ಮತ್ತು ಕೊರಳಿನ ಭಾಗಕ್ಕೆ ನೀರನ್ನು ಚುಮುಕಿಸಿ. ಮೈತಣ್ಣಗಾಗದಂತೆ ನೋಡಿಕೊಳ್ಳಿ. ಗಾಳಿಯನ್ನು ಬೀಸಿ. (ಸಾಧ್ಯವಾದರೆ ಫ್ಯಾನ್ ಅಳವಡಿಸಬಹುದು) ಆಘಾತಕ್ಕೆ ಚಿಕಿತ್ಸೆ ಮಾಡಿ.

**ಶಾಖದಿಂದುಂಟಾಗುವ ಆಘಾತ**

ಶಾಖದ ಅತಿ ಬಳಲಿಕೆಯಿಂದುಂಟಾಗುವ ರೀತಿಯಲ್ಲಿಯೇ, ಆ ಕಾರಣಗಳಿಂದಲೇ ಆದರೂ, ಮಾನವ ದೇಹವು ಬೇರೆಯದೇ ರೀತಿಯಲ್ಲಿ ಸ್ಪಂದಿಸುತ್ತದೆ. ಪರಿಸ್ಥಿತಿಯು ಉಲ್ಬಣಗೊಳ್ಳುತ್ತದೆ, ಜಟಿಲವಾಗುತ್ತದೆ. ಚಿಂತಾಜನಕವಾಗುತ್ತದೆ. ರೋಗಿಯು ಸಾಯುವ ಸಾಧ್ಯತೆಯೂ ಇರುತ್ತದೆ.

ಅತಿ ಉಷ್ಣತೆಯಿಂದ ಆಘಾತವುಂಟಾಗಬೇಕಾದರೆ ಶಾಖವು ಹಿಡಿದಿಡಲ್ಪಡುತ್ತದೆ. ಈ ಹಿಡಿತದ ಪ್ರಭಾವದಿಂದ ರೋಗಿಯು ಮಾನಸಿಕವಾಗಿ ಉದ್ರೇಕಗೊಳ್ಳುವುದನ್ನು ಕಾಣಬಹುದು. ಸಾಮಾನ್ಯವಾಗಿ ನಡೆವಳಿಕೆಯಲ್ಲಿ ಬದಲಾವಣೆ–ಚಡಪಡಿಸುವಿಕೆ, ಅಸಹನೆ, ಚಿತ್ತ ಭ್ರಮಣೆಗಳನ್ನು ಗಮನಿಸಬಹುದು. ಸಂಕಟದಿಂದ ಕೂಡಿದ ವಾಂತಿ ಮಾಡಿಕೊಳ್ಳುವುದೂ ಒಂದು ಎತ್ತಿ ಕಾಣುವ ಲಕ್ಷಣ. ಕೆಲವು ಸಂದರ್ಭಗಳಲ್ಲಿ ಮಾಂಸಖಂಡಗಳ ಸೆಳೆತವನ್ನೂ, ಗಮನಿಸಬಹುದು, ಚರ್ಮವು ಬಿಸಿಯಾಗಿ, ಒಣಗಿದಂತಾಗಿ, ಒರಟಾದಂತಾಗುತ್ತದೆ. ನಾಡಿಯ

ಮಿಡಿತವು ವೇಗವಾಗುತ್ತದೆ ಮತ್ತು ಕ್ರಮತಪ್ಪುತ್ತದೆ. ಉಸಿರಾಟವು ಕಷ್ಟವಾಗಿ, ಗೊರಕೆ ಹೊಡೆದಂತೆ ಭಾಸವಾಗುತ್ತದೆ.

**ಇದನ್ನು ತಡೆಗಟ್ಟಲು ಚಿಕಿತ್ಸೆ:** ಶಾಖದ ಅತಿ ಬಳಲಿಕೆಗೆ ನೀಡುವ ಚಿಕಿತ್ಸೆಯನ್ನೇ ಮಾಡಬೇಕು. ಕ್ರಿಯಾಶೀಲ ಚಿಕಿತ್ಸೆಯ ಉದ್ದೇಶಗಳು 4.

(i) ಶಾಖವನ್ನು ಕಡಿಮೆ ಮಾಡುವುದು (ii) ದೇಹದ ವಿಷಕಾರಿಕತೆಯನ್ನು ಕಡಿಮೆ ಮಾಡುವುದು (iii) ಶಾಖೋತ್ಪಾದಕ ಕೇಂದ್ರವನ್ನು ಸರಿಪಡಿಸಿ ಎಗ್ಗು ತಗ್ಗಿಲ್ಲದಂತೆ ಕೆಲಸ ಮಾಡುವಂತೆ ಮಾಡುವುದು. (iv) ದೇಹವು ಕಳೆದುಕೊಂಡಿರುವ ನೀರಿನ ಅಂಶವನ್ನು ತುಂಬಿಕೊಡುವುದು.

ಡಾಕ್ಟರಿಗೆ ಮೊದಲು ಹೇಳಿಕಳುಹಿಸಬೇಕು. ದೇಹದ ಉಷ್ಣತೆಯು $104^0$ ಮೀರದಂತೆ, ಮುಟ್ಟದಂತೆ, ಎಚ್ಚರವಹಿಸಿ, ಕ್ರಿಯಾಶೀಲ ಚಿಕಿತ್ಸೆ ಮಾಡಬೇಕು.

ರೋಗಿಯನ್ನು ವಿವಸ್ತ್ರಗೊಳಿಸುವುದು. ಹಾಸಿಗೆಯು ಒದ್ದೆ ಆಗದಂತೆ ರಬ್ಬರ್ ಷೀಟ್ ಹಾಸಿ, ಮಂಚದ ಮೇಲೆ ಮಲಗಿಸುವುದು. ಫ್ಯಾನ್ ಹಾಕುವುದು. ದೇಹದ ಮೇಲೆ ತಣ್ಣೀರು ಬಟ್ಟೆ ಹಾಕುವುದು; ಡಾಕ್ಟರ್ ಅನುಮೋದನೆಯಂತೆ:– ಎನಿಮಾ ಕೊಡಬಹುದು. ಐಸ್ ಬ್ಯಾಗ್ ಹಾಕಬಹುದು. ಎನೀಮಾ ಕ್ಯಾನ್, ಟ್ಯೂಬ್ ಬಳಸಬಹುದು. ಎನೀಮಾ ಕೊಟ್ಟ ಬಳಿಕ ದೇಹವು ಕಳೆದುಕೊಂಡಿರಬಹುದಾದ ನೀರಿನ ಅಂಶವನ್ನು ತುಂಬಿಕೊಡಲು ಕ್ರಮ ತೆಗೆದುಕೊಳ್ಳಬೇಕು. ಇದರಿಂದ ಸೆಡೆತವನ್ನು ಕಡಿಮೆ ಮಾಡಿದಂತಾಗುತ್ತದೆ.

**ಗಾಯಗಳು:**

ಗಾಯಗಳಿಗೆ ಚಿಕಿತ್ಸೆ ನೀಡುವ ಮೊದಲು, ಕ್ರಿಮಿನಾಶಕದಿಂದ, ಕೈಯನ್ನು ತೊಳೆದುಕೊಳ್ಳಬೇಕು. ಆ ಬಳಿಕ ಗಾಯವು ಪೂರಾ ಕಾಣುವಂತೆ ರೋಗಿಯ ಉಡುಪನ್ನು ಸರಿಸಬೇಕು ಅಥವಾ ತೆಗೆಯಬೇಕು. ರಕ್ತವು ಹೆಪ್ಪುಗಟ್ಟಿದ್ದರೆ ಅದನ್ನು ತೆಗೆಯಬಾರದು. ಗಾಯದ ಮೇಲೆ ಕಲ್ಮಷ ವಸ್ತುಗಳಿದ್ದರೆ ಅವನ್ನು ತೆಗೆಯಬೇಕು. ಗಾಯದ ಮೇಲಿರಬಹುದಾದ ಮರಳು, ಗಾಜಿನ ಚೂರು, ಧೂಳು, ಇತ್ಯಾದಿಗಳನ್ನು ತೆಗೆದು ಈ ಮೊದಲೇ ಮರಳಿಸಿ ಆರಿಸಿದ ನೀರಿನಿಂದ ಸ್ವಚ್ಛಪಡಿಸಬೇಕು. ಕ್ರಿಮಿನಾಶಕ ಮುಲಾಮನ್ನು ಸವರಬೇಕು/ಕ್ರಿಮಿನಾಶಕ ಪುಡಿಯನ್ನು ಉದುರಿಸಬೇಕು, ಸಂದರ್ಭಕ್ಕೆ ತಕ್ಕಂತೆ ಬಿಗಿಯಾಗಿ/ಅಳಕವಾಗಿ ಬ್ಯಾಂಡೇಜ್ ಕಟ್ಟಬೇಕು. ಉದಾ: ಗಾಜಿನ ಚೂರನ್ನು ತೆಗೆಯಲಾಗದಿದ್ದರೆ, ಡಾಕ್ಟರ ಬಳಿಗೆ ಕರೆದೊಯ್ಯುವ ಮುನ್ನ ಕಟ್ಟುವ ಬ್ಯಾಂಡೇಜ್ ಅಳಕವಾಗಿರಬೇಕು. ಗಾಯವನ್ನು ಸ್ವಚ್ಛಪಡಿಸುವಾಗ, ಪ್ರತಿ ಸಲವೂ ಸ್ಟರಿಲೈಜ್ಡ್ ಹತ್ತಿಯನ್ನುಪಯೋಗಿಸಿ, ಗಾಯದೊಳಗಿನಿಂದ ಹೊರಕ್ಕೆ ಸ್ವಚ್ಛಪಡಿಸಬೇಕು.

## ಮುಮ್ಮೂಲೆ ಪಟ್ಟಿ

ಪ್ರಥಮ ಚಿಕಿತ್ಸಕನು ಉಪಯೋಗಿಸುವ ಮುಮ್ಮೂಲೆ ಪಟ್ಟಿಯು, ಒಂದು ಸಮಕೋನವಿರುವ ತ್ರಿಕೋನ ವಸ್ತ್ರವಾಗಿರುತ್ತದೆ. ಇದರ ಪಕ್ಕಗಳು ಸಾಮಾನ್ಯವಾಗಿ 75 ಸೆಂ.ಮೀನಿಂದ, 105 ಸೆಂ.ಮೀ ಉದ್ದವಿರುತ್ತದೆ. ಕೆಲವು ವೇಳೆ ಸಣ್ಣದಾಗಿಯೂ ಇರಬಹುದು.

ತಿಳಿಯಲು ಅನುಕೂಲವಾಗುವಂತೆ, ಮುಮ್ಮೂಲೆ ಪಟ್ಟಿಯನ್ನು, ಈ ಕೆಳಕಂಡಂತೆ ಗುರುತಿಸಲಾಗುತ್ತದೆ.

(i) **ಒಮ್ಮಡತೆಯ ಪಟ್ಟಿ** (ii) **ದೊಡ್ಡ ಪಟ್ಟಿ**– ಒಂದು ಮಡತೆಯ ಬಳಿಕ, ಮತ್ತೊಮ್ಮೆ ಮಡಚುವುದು. (iii) **ಸಣ್ಣಪಟ್ಟಿ** – ದೊಡ್ಡ ಪಟ್ಟಿಯನ್ನು ಮತ್ತೊಮ್ಮೆ ಮಡಚುವುದು.

ಮುಂತೋಳಿಗೆ ಪೂರಾ ಆಸರೆ ನೀಡಲು ಮುಮ್ಮೂಲೆ ಪಟ್ಟಿಯನ್ನು ಉಪಯೋಗಿಸಿ ದೊಡ್ಡ ತೂಗುಹಾಕಬಹುದು.



**ದೊಡ್ಡ ಕೈತೂಗು ಹಾಕುವ ವಿಧಾನ:** ರೋಗಿಯ ಎದುರಿಗೆ ನಿಲ್ಲಿ, ಎದೆಯ ಮೇಲೆ ಹರಡಿದ ಮುಮ್ಮೂಲೆ ಪಟ್ಟಿಯ ಒಂದು ತುದಿಯನ್ನು ರೋಗಿಯ

ಗಾಯವಿರದ ಕಡೆಯ ಭುಜದ ಮೇಲೆ ತೆಗೆದುಕೊಂಡು ಗಾಯವಿರುವ ಭುಜದ ಕಡೆಗೆ ತನ್ನಿ. ಪಟ್ಟಿಯ ಮೇಲ್ ತುದಿಯು ಗಾಯವಿರುವ ಕೈನ ಮೊಣಕೈ ಕಡೆಗಿರಲಿ. ಈಗ ಗಾಯವಿರುವ ಕೈನ ಮುಂಗೈಯನ್ನು ಪಟ್ಟಿಯ ಮಧ್ಯೆ ಸಮಕೋನವಿರುವಂತೆ ಇರಿಸಿ. ಈಗ ಕೆಳಗಿರುವ ಪಟ್ಟಿಯ ತುದಿಯನ್ನೆತ್ತಿ, ಈಗಾಗಲೇ ಭುಜದ ಮೇಲೆ ತಂದಿರುವ ತುದಿಗೆ ಸೇರಿಸಿ, ಸಮಗಂಟನ್ನು ಹಾಕಿ. ಸಮಗಂಟು ಕೊರಳು ಮೂಳೆಯ ಬಳಿಯ ಹಳ್ಳದ ಮೇಲೆ ಬರುವಂತಿರಲಿ. ಗಂಟನ್ನು ಹಾಕಿದ ಬಳಿಕ, ತುದಿಗಳನ್ನು ನೇತಾಡದಂತೆ ಪಟ್ಟಿಯ ಒಳಗೆ ಸೇರಿಸಿ. ಮೊಣಕೈಯನ್ನು ಒಳಗೆ ಹಾಕಿ, ಮೇಲ್ತುದಿಯನ್ನು ಮುಂದಕ್ಕೆ ತಂದು ಸೇಫ್ಟಿ ಪಿನ್ ಹಾಕಿ.

**ಸಣ್ಣ ಕೈ ತೂಗು:** ಇದೂ ಸಹ ದೊಡ್ಡ ಕೈ ತೂಗಿನಂತೆಯೇ ಆದರೆ ಇದಕ್ಕೆ ದೊಡ್ಡ ಪಟ್ಟಿ ಮಾಡಿಕೊಂಡು ಮುಂದುವರೆಯಬೇಕು.

**ತಲೆಪಟ್ಟಿ:** ಒಮ್ಮಡತೆಯ ಪಟ್ಟಿ ಮಾಡಿಕೊಳ್ಳಿ, ರೋಗಿಯ ಹಿಂದೆ ನಿಂತು, ಪಟ್ಟಿಯ ಮೇಲ್ತುದಿಯು ತಲೆಯ ಹಿಂದೆ ಬರುವಂತೆ ತಲೆಯ ಮೇಲೆ ಹರಡಿ. ಒಮ್ಮಡತೆಯ ಪಟ್ಟಿಯ ತಳಬಾಗವು ಹಣೆಯ ಮೇಲೆ ಹುಬ್ಬಿನವರೆಗೂ ಇರುವಂತೆ ಇಟ್ಟುಕೊಂಡು, ತಲೆಯಸುತ್ತಲೂ, ಕಿವಿಯ ಮೇಲೆ ಬರುವಂತೆ ಸುತ್ತು ಹಾಕಿ. ಹಿಂತಲೆಯ ಕೆಳಗೆ, ಕೊರಳು ಭಾಗದ ಮೇಲೆ ಸಮಗಂಟು ಹಾಕಿ. ಪಟ್ಟಿಯು ತಲೆಯ ಸುತ್ತಲೂ ಸಮನಾಗಿರುವಂತೆ ಸರಿಪಡಿಸಿ, ಮೇಲ್ತುದಿಯನ್ನು ಕೆಳಕ್ಕೆ ಎಳೆದು, ಸಮಗಂಟು ಮುಚ್ಚುವಂತೆ ಅದರ ಮೇಲೆ ತಂದು, ಸೇಫ್ಟಿಪಿನ್ ಹಾಕಿ.

**ಮೊಣಕಾಲು ಪಟ್ಟಿ:** ರೋಗಿಯ ಮೊಣಕಾಲನ್ನು ಸಮಕೋನದಲ್ಲಿರುವಂತೆ ಬಾಗಿಸಿ. ಪಟ್ಟಿಯ ಮೇಲ್ತುದಿಯು ರೋಗಿಯ ತೊಡೆಯ ಮೇಲೆ ಬರುವಂತೆ ಹರಡಿ. ಈಗ ಪಟ್ಟಿಯ ತಳಭಾಗದಲ್ಲಿ ಒಮ್ಮಡತೆ ಮಾಡಿಕೊಂಡು, ಮೊಣಕಾಲು ಕೆಳಗೆ ಸುತ್ತುಹಾಕಿ, ಹಿಂದಿನಿಂದ ತೊಡೆಯ ಮೇಲೆ ತಂದು ಮೊಣಕಾಲಿನ ಮೇಲ್ಭಾಗದಲ್ಲಿ ಸಮಗಂಟು ಹಾಕಿ. ಈಗ ಪಟ್ಟಿಯ ಮೇಲ್ತುದಿಯನ್ನು ಸಮಗಂಟಿನ ಮೇಲೆ ತಂದು ಮೊಣಕಾಲಿನ ಮೇಲೆ ಸೇಫ್ಟಿಪಿನ್ ಹಾಕಿ.

**ಪಾದ ಪಟ್ಟಿ:** ಪಟ್ಟಿಯನ್ನು ಹರಡಿ. ರೋಗಿಯ ಕಾಲ್ಬೆರಳುಗಳು, ಪಟ್ಟಿಯ ಮೇಲ್ತುದಿಯು ಕಡೆಗಿರುವಂತೆ, ಅವನ ಪಾದವನ್ನು ಅದರ ಮೇಲಿಡಿ. ಮೇಲ್ತುದಿಯನ್ನು ಕಾಲುಬೆರಳುಗಳು ಮತ್ತು ಪಾದದ ಮೇಲೆ ತಂದು ಕಾಲಿನ ಮೇಲೆ ಹಿಡಿಯಲು ಹೇಳಿ. ಪಟ್ಟಿಯ ತಳಭಾಗದಲ್ಲಿ, ಒಮ್ಮಡತೆ ಮಾಡಿಕೊಂಡು, ಹಿಮ್ಮಡಿಯು ಒಳಬರುವಂತೆ, ಕಾಲಿನ ಹಿಂಭಾಗದಿಂದ ಸುತ್ತಿ ಮುಂದೆ ತಂದು ತುದಿಗಳನ್ನು

ಸೇರಿಸಿ, ಸಮಗಂಟು ಹಾಕಿ. ಈಗ ಮೇಲ್ತುದಿಯನ್ನು ಸಮಗಂಟಿನ ಮೇಲೆ ತಂದು ಸೇಫ್ಟಿಪಿನ್ ಹಾಕಿ.

**ಆಘಾತ (Shock)**

ಆಘಾತವಾದಾಗ ದೇಹದ ಅಥವಾ ಮೆದುಳಿನ ಅವಶ್ಯಕ ಜೀವಕ್ರಿಯೆಗಳು ಅತೀವವಾಗಿ ಶಕ್ತಿಗುಂದಿರುತ್ತವೆ. ಈ ಪರಿಸ್ಥಿತಿಗೂ, ಬದಲಾದ ಸ್ಥಿತಿಯಲ್ಲುಂಟಾಗುವ ರಕ್ತ ಸಂಚಾರಕ್ಕೂ, ತಾತ್ಕಾಲಿಕ ಶಕ್ತಿಹೀನತೆ ಮತ್ತು ರಕ್ತದ ಸಂಪೂರ್ಣ ಕೊರತೆಗಳಿಗೂ ಒಂದು ರೀತಿಯ ಸಂಬಂಧವಿದೆ.

**ಕಾರಣಗಳು:**

(i) ಬಾಹ್ಯ ಅಥವಾ ಆಂತರಿಕ ರಕ್ತಸ್ರಾವ ಅಥವಾ ಎರಡೂ ಸೇರಿದಂತೆ

(ii) ಸುಟ್ಟ, ಜಜ್ಜಿ ಹೋದ ಗಾಯಗಳು ಇತ್ಯಾದಿ ಸಂದರ್ಭಗಳಲ್ಲಿ ರಕ್ತರಸದ (ಪ್ಲಾಸ್ಮಾ) ನಾಶವಾಗಿರುವುದು.

**ಆಘಾತದ ತೀವ್ರತೆಯು ಹೆಚ್ಚಲು ಕಾರಣಗಳು:** (i) ನೆಗಡಿ (ii) ಅತಿಯಾಗಿ ಬೆವರುವುದು (iii) ನೋವು

**ಲಕ್ಷಣಗಳು:**

(i) ತಲೆ ತಿರುಗುವುದು, ಕುಸಿದು ಬೀಳುವುದು, ಜ್ಞಾನತಪ್ಪಿಬೀಳುವುದು.

(ii) ಚರ್ಮವು ತಣ್ಣಗಾಗುವುದು, ಒರಟಾಗುವುದು.

(iii) ಬಿಳಿಚಿಕೊಳ್ಳುವುದು

(iv) ವಾಕರಿಕೆ ಮತ್ತು ವಾಂತಿ

(v) ನಾಡಿಯ ಮಿಡಿತವು ನಿಧಾನವಾಗುವುದು, ಕ್ರಮೇಣ ಸಿಗದಂತಾಗುವುದು, ಇದ್ದಕ್ಕಿದ್ದಂತೆ ವೇಗವಾಗುವುದು.

**ಹಂತಗಳು:** ಆಘಾತವು ಎರಡು ಹಂತಗಳಲ್ಲುಂಟಾಗಬಹುದು

(i) ಮೊದಲ ಹಂತದಲ್ಲಿ ಜ್ಞಾನ ತಪ್ಪಿ ಬೀಳಬಹುದು

(ii) ಎರಡನೆಯ ಹಂತದಲ್ಲಿ ಕಳವಳಕಾರಕ ಸ್ಥಿತಿಯುಂಟಾಗಬಹುದು

ಇದು ಕೆಲವು ಸಮಯದ ಬಳಿಕ ಆಗಬಹುದು.

**ಚಿಕಿತ್ಸೆ:**

(i) ರಕ್ತಸ್ರಾವವಿದ್ದರೆ ಕೂಡಲೇ ನಿಲ್ಲಿಸಿ.

(ii) ರೋಗಿಯನ್ನು ಬೆನ್ನು ಕೆಳಗೆ ಮಾಡಿ ಮಲಗಿಸಿ. ತಲೆಯ ಭಾಗವು ಸ್ವಲ್ಪ ಕೆಳಗಿರಲಿ, ತಲೆಯು ಪಕ್ಕಕ್ಕೆ ತಿರುಗಿರಲಿ. [ರೋಗಿಯು ವಾಂತಿ ಮಾಡುತ್ತಿದ್ದರಾಗಲೀ, ಉಸಿರಾಡಲು ಕಷ್ಟಪಡುತ್ತಿದ್ದರಾಗಲೀ, ಒರಗಿ ಕೂಡುವ ಅಥವಾ ಅರ್ಧಮಲಗುವ ಸ್ಥಿತಿಯಲ್ಲಿಡಬಹುದು.]

(iii) ಬಟ್ಟೆಗಳನ್ನು ಸಡಿಲಿಸಿ

(iv) ಹೆಚ್ಚು ಸೆಖೆ ಆಗದಂತೆ, ರೋಗಿಯನ್ನು ಬೆಚ್ಚಗಿಡಿ. (ಕಂಬಳಿ ಹೊದಿಸಬಹುದು) ಕೈಕಾಲುಗಳನ್ನುಜ್ಜುವುದು, ಬಿಸಿ ನೀರು ಚೀಲ ಕೊಡುವುದು ಮಾಡಬಾರದು.

(v) ರೋಗಿಯು ಎಚ್ಚರವಾಗಿದ್ದರೆ ಒಂದೊಂದೇ ಚಮಚ ಬೆಚ್ಚಗಿನ ನೀರು/ ಟೀ ಕೊಡಬಹುದು. ಆಘಾತ ಸ್ಥಿತಿಯು ಎರಡನೆಯ ಹಂತ ಎಂದರೆ ಚಿಂತಾಜನಕ ಸ್ಥಿತಿಯಲ್ಲಿ ಇದ್ದರೆ ಬಾಯಿ ಮೂಲಕ ಏನನ್ನೂ ಕೊಡಬಾರದು.

(vi) ಉದ್ರೇಕಗೊಳ್ಳುವುದು ಅಥವಾ ಚಿಂತಿಸುವುದನ್ನು ನಿಲ್ಲಿಸಬೇಕು.

**ಕಣ್ಣಿನಲ್ಲಿ ಧೂಳು**

ರೋಗಿಯು ಕಣ್ಣನ್ನು ಉಜ್ಜಿಕೊಳ್ಳದಂತೆ ಎಚ್ಚರವಹಿಸಿ. ಅವನನ್ನು ದೀಪಕ್ಕೆ ಎದುರಾಗಿ ಕೂಡಿಸಿ. ಅವನೆದುರಿಗೆ ನಿಂತು, ಧೂಳಿನ ಕಣ ಅಥವಾ ಇತರೇ ವಸ್ತು ಇರುವುದನ್ನು ಗಮನಿಸಿ. ಈಗ ಕಣ್ಣು ರೆಪ್ಪೆಯನ್ನು ಕೆಳಗೆ (ಧೂಳಿನ ಕಣ ಕೆಳಗಿದ್ದರೆ) ಅಥವಾ ಮೇಲೆ/ಧೂಳಿನ ಕಣ ಮೇಲಿದ್ದರೆ) ಮಾಡಿ, ಶುಭ್ರವಾದ, ನಿರ್ಮಲವಾದ ನೀರಿನಲ್ಲಿ ಅದ್ದಿದ ಕರ ವಸ್ತ್ರದ ತುದಿಯಿಂದ ತೆಗೆಯಿರಿ. ನೀರಿನಲ್ಲಿ ರೆಪ್ಪೆಯನ್ನಾಡಿಸಲು ಹೇಳಬಹುದು ಅಥವಾ ಕಣ್ಣು ರೆಪ್ಪೆಯನ್ನಾಡಿಸಿ (ಮೇಲಿದ್ದರೆ ಕೆಳಗಿನ ರೆಪ್ಪೆ, ಕೆಳಗಿದ್ದರೆ ಮೇಲಿನ ರೆಪ್ಪೆ) ಅಥವಾ ಬಾಯಿಯಿಂದ ಊದಿ ಸಹ ತೆಗೆಯಬಹುದು.

ಧೂಳಿನ ಕಣವು ಇದಾವ ಪ್ರಯತ್ನಕ್ಕೂ ಅಲುಗದೆ ಭದ್ರವಾಗಿ ಊರಿದ್ದರೆ, ಬೇರೇನೂ ಮಾಡದೆ, ಪ್ರಯತ್ನವನ್ನು ನಿಲ್ಲಿಸಿ, ಅಳಕವಾಗಿ ಪಟ್ಟಿಕಟ್ಟಿ, ಡಾಕ್ಟರ ಬಳಿಗೆ ಕರೆದೊಯ್ಯಬೇಕು.

**ಹಿರಿಯರ ಸಹಾಯ ಕೋರುವುದು:**

ಬುದ್ಧಿಯನ್ನು ಉಪಯೋಗಿಸಬೇಕು, ಶಾಂತವಾಗಿರಬೇಕು, ತಾಳ್ಮೆಯಿಂದಿರಬೇಕು. ಟೆಲಿಫೋನ್ ಉಪಯೋಗಿಸಬೇಕು. ಅವಶ್ಯಕವೆನಿಸಿದರೆ, ಸ್ಫುಟವಾಗಿ ಬರೆದು ಸಂದೇಶ ಕಳುಹಿಸಬೇಕು. ಏನಾಗಿದೆ? ಯಾವ ರೀತಿಯ ಸಹಾಯಬೇಕು? ಎಂಬುದನ್ನು ವಿವರಿಸಿ ಬರೆಯಬೇಕು. ಹಾಗೆಯೇ ರೋಗಿಯು ಇರುವ –ನೀವು ಸಹಾಯ ಮಾಡುತ್ತಿರುವ ಸ್ಥಳವನ್ನು ಶೀಘ್ರವಾಗಿ ತಲುಪುವ ಮಾರ್ಗದರ್ಶನ ಸಹ ನೀಡಬೇಕು.



## ಅಧ್ಯಾಯ–28

# ಆರೋಗ್ಯ ನಿಯಮಗಳು

ಸ್ಕೌಟಿಂಗ್‌ನ ಸಂಸ್ಥಾಪಕರಾದ ಲಾರ್ಡ್ ಬೇಡನ್ ಪೊವೆಲ್‌ರವರು "ಸ್ಕೌಟು ಬಲಶಾಲಿಯೂ, ಆರೋಗ್ಯವಂತನೂ ಆಗಬೇಕು. ಆ ಕಾರಣ, ಹಿತವಾದ, ಮಿತವಾದ ಆಹಾರವನ್ನು ಸೇವಿಸಬೇಕು. ಅವಶ್ಯಕವಾದಷ್ಟು ವ್ಯಾಯಾಮ ಮಾಡಬೇಕು. ಹಾಗೆ ಮಾಡಿದಲ್ಲಿ, ಅವನು ದೊಡ್ಡವನಾದಾಗ ಮಾಂಸಖಂಡಗಳು ಸರಿಯಾದ ಬೆಳವಣಿಗೆ ಹೊಂದಿ, ಬಲಿಷ್ಠವಾಗಿರುತ್ತವೆ. ಅದರಿಂದ ಅವನು ಕಷ್ಟಕರ ಸನ್ನೀವೇಶಗಳನ್ನು ಎದುರಿಸಲೂ, ಆ ಸನ್ನಿವೇಶಗಳ ಸ್ತರ ಭಾರವನ್ನು ಭರಿಸಲೂ ಶಕ್ತನಾಗುತ್ತಾನೆ. ಅದೇ ನಿಶ್ಯಕ್ತ ವ್ಯಕ್ತಿಯಾದರೆ ಅವನು ಜೀವನದ ಸಂಕಷ್ಟಗಳನ್ನು ಎದುರಿಸಲು ಅಶಕ್ತನಾಗುತ್ತಾನೆ" ಎಂದು ಹೇಳಿದ್ದಾರೆ.

"ನೀವು ದೃಢಕಾಯರಾಗಿ, ಆರೋಗ್ಯವಂತರಾಗಲು ವ್ಯಾಯಾಮವು ಅತ್ಯವಶ್ಯಕವಾದುದು. ದೇಹದ ಒಳ ಭಾಗದಲ್ಲಿ ರಕ್ತ ಶುದ್ಧಿ ಮಾಡುವುದೂ, ಹೃದಯವು ಸಕ್ರಮವಾಗಿ ಉತ್ತಮವಾಗಿ ಕೆಲಸ ಮಾಡುವಂತಾಗುವುದೂ ವ್ಯಾಯಾಮದಿಂದ ಸಾಧ್ಯ ಎಂಬುದು ಒಳಗುಟ್ಟು" ಎಂದೂ ಹೇಳಿದ್ದಾರೆ. ಬಾಲಕರಿಗಾಗಿ ಸ್ಕೌಟಿಂಗ್ ಪುಸ್ತಕದ, 6ನೇ ಅಧ್ಯಾಯದಲ್ಲಿ ಅವರು ವಿವರಿಸಿರುವ ಹಿತನುಡಿಗಳು 6 ಅಂಶಗಳನ್ನೊಳಗೊಂಡಿದೆ.

(i) **ಹೃದಯವನ್ನು ಶಕ್ತಿವಂತವನ್ನಾಗಿ ಮಾಡುವುದು:–** ಇದು ರಕ್ತವನ್ನು ದೇಹದ ಎಲ್ಲಾ ಭಾಗಗಳಲ್ಲಿಯೂ ಪ್ರವಹಿಸುವಂತೆ ಮಾಡುತ್ತದೆ. ಇದರಿಂದ ದೇಹದ ಮಾಂಸ, ಮೂಳೆ ಮತ್ತು ಮಾಂಸ ಖಂಡಗಳು ಬೆಳೆಯುತ್ತವೆ. ಇದಕ್ಕೆ ಪೂರಕವಾದ ವ್ಯಾಯಾಮಗಳು "ಒದ್ದಾಟ" ಮತ್ತು "ಕೈಮಣಿಕಟ್ಟು ತಳ್ಳುವಿಕೆ"

(ii) **ಶ್ವಾಸಕೋಶಗಳನ್ನು ಬಲಪಡಿಸುವುದು, ಉದ್ದೇಶ:–** ರಕ್ತ ಶುದ್ಧಿಗಾಗಿ ಶುದ್ಧ ಗಾಳಿಯನ್ನೊದಗಿಸುವುದು. ಇದಕ್ಕಾಗಿ ದೀರ್ಘವಾಗಿ ಉಸಿರಾಡಬೇಕು.

(iii) **ಚರ್ಮವು ಬೆವರುವಂತೆ ಮಾಡುವುದು:–** ಇದರಿಂದ ರಕ್ತದಲ್ಲಿರುವ ಮಲಿನತೆಯನ್ನು ಹೊರ ಹಾಕಲು ಸಹಾಯವಾಗುತ್ತದೆ. ಪ್ರತಿ ದಿನವೂ

ಚೆನ್ನಾಗಿ ಮೈಯ್ಯುಜ್ಜಿ ಸ್ನಾನವನ್ನು ಮಾಡುವುದು, ಒದ್ದೆ ಟವೆಲ್ಲಿನಿಂದ ಮೈಯುಜ್ಜುವುದು ಮಾಡಬೇಕು.

(iv) **ಹೊಟ್ಟೆಯು ಕೆಲಸ ಮಾಡುವಂತೆ ಮಾಡುವುದು:** ಇದರಿಂದ ರಕ್ತಕ್ಕೆ ಬೇಕಾದ ಆಹಾರವು ಒದಗುತ್ತದೆ. ಇದಕ್ಕಾಗಿ **ವ್ಯಾಯಾಮಗಳು**– 'ಶಂಖು' ಆಕಾರದಲ್ಲಿ ದೇಹವನ್ನು "ಬಾಗಿಸುವುದು" ಮತ್ತು "ತಿರುಚುವುದು".

(v) **ಮಲ ವಿಸರ್ಜನಾಂಗಗಳನ್ನು ಚುರುಕುಗೊಳಿಸುವುದು:** ಇದರಿಂದ ಆಹಾರದ ಬೇಡವಾದ ಭಾಗವನ್ನು ದೇಹದಿಂದ ಹೊರ ಹಾಕಲು ಅನುಕೂಲವಾಗುತ್ತದೆ. **ವ್ಯಾಯಾಮಗಳು:** "ದೇಹವನ್ನು ಬಾಗಿಸುವುದು", "ಹೊಟ್ಟೆಯನ್ನು ಮರ್ದನ ಮಾಡುವುದು." ಸಮೃದ್ಧವಾಗಿ ಶುದ್ಧವಾದ ನೀರನ್ನು ಕುಡಿಯಬೇಕು. ಕ್ರಮ ತಪ್ಪದೆ ಪ್ರತಿದಿನ ಮಲವಿಸರ್ಜನೆ ಮಾಡಬೇಕು.

(vi) **ದೇಹದಲ್ಲಿರುವ, ಪ್ರತಿ ಮಾಂಸ ಖಂಡವನ್ನೂ ಕೆಲಸ ಮಾಡುವಂತೆ ಮಾಡುವುದು:** ಇದರಿಂದ ಆಯಾ ಭಾಗಗಳಲ್ಲಿ ರಕ್ತ ಸಂಚಾರವುಂಟಾಗಿ, ಆ ಭಾಗಗಳು ಶಕ್ತಿವಂತವಾಗುತ್ತವೆ. ನೀವೂ ಶಕ್ತಿವಂತರಾಗುತ್ತೀರಿ. **ವ್ಯಾಯಾಮ:** ಓಡುವುದು, ನಡೆಯುವುದು, ಮಣಿಕಟ್ಟು ತಳ್ಳುವುದು, ಇತ್ಯಾದಿ.

"ರಕ್ತವನ್ನು ಪರಿಶುದ್ಧವಾಗಿಯೂ, ಸದಾ ಪ್ರವಹಿಸುತ್ತಿರುವಂತೆಯೂ, ಇಟ್ಟುಕೊಳ್ಳುವುದು, ಆರೋಗ್ಯ ದೃಢಕಾಯರಾಗಿರುವುದರ ಗುಟ್ಟು" ಎಂದು ಬಿ.ಪಿ. ಹೇಳುತ್ತಾರೆ.

"ಸರಳವೂ, ಸತ್ವಯುತವೂ ಆದ ಆಹಾರ, ಹೇರಳವಾದ ಪರಿಶುದ್ಧವಾದ ಗಾಳಿ, ಸಾಕಷ್ಟು ವ್ಯಾಯಾಮ, ದೇಹದ ಒಳ ಮತ್ತು ಹೊರ ಭಾಗಗಳ ಶುದ್ಧತೆ, ಮಧ್ಯೆ ಮಧ್ಯೆ ಅವಶ್ಯಕವಾದ ಮಾನಸಿಕ ಮತ್ತು ದೈಹಿಕ ವಿಶ್ರಾಂತಿ, ಇವುಗಳಿದ್ದಲ್ಲಿ ರಕ್ತವು ಅಭಿವೃದ್ಧಿ ಆಗುತ್ತದೆ."

ಆರೋಗ್ಯದಿಂದಿರಬೇಕಾದರೆ ಅವಶ್ಯಕವಾಗಿರುವ, 6 ಸರಳವಾದ ವ್ಯಾಯಾಮಗಳನ್ನು ಬಿ.ಪಿ.ರವರು ಸೂಚಿಸಿದ್ದಾರೆ. ಅವರು, ಅವರ ಜೀವನ ಪರ್ಯಂತ ಈ ವ್ಯಾಯಾಮಗಳನ್ನು ಮಾಡುತ್ತಿದ್ದರು. ವ್ಯಾಯಾಮ ಮಾಡುವಾಗ, ಪ್ರತಿ ಚಲನೆಯ ಉದ್ದೇಶವನ್ನು ಮನನ ಮಾಡಿಕೊಂಡರೆ, ಅದರ ಮೌಲ್ಯವು ಹೆಚ್ಚುತ್ತದೆ. ಮೂಗಿನಿಂದಲೇ ಉಸಿರೆಳೆದುಕೊಂಡು ಬಾಯಿ ಮೂಲಕವೇ ಉಸಿರು ಬಿಡಬೇಕು. ಇದು ಅತಿ ಮುಖ್ಯವಾಗಿ ಗಮನಿಸಬೇಕಾದ ಅಂಶವಾಗಿದೆ.

ಪ್ರತಿದಿನವೂ 10 ನಿಮಿಷಗಳ ಕಾಲ ಅವಕಾಶ ಮಾಡಿಕೊಳ್ಳಬೇಕು. ವ್ಯಾಯಾಮ ಮಾಡಲು ಯಾವುದೇ ಉಪಕರಣಗಳ ಅವಶ್ಯಕತೆ ಇರುವುದಿಲ್ಲ. ಬರಿಯ ಕಾಲಿನಲ್ಲಿ ವ್ಯಾಯಾಮ ಮಾಡುವುದಾದರೆ ಕಾಲುಬೆರಳುಗಳು ಮತ್ತು ಪಾದಗಳು ಬಲಗೊಳ್ಳುತ್ತವೆ.

ಈ ಎಲ್ಲಾ ಬುದ್ಧಿವಾದವನ್ನು 'ಬಾಲಕರಿಗಾಗಿ ಸ್ಕೌಟಿಂಗ್' ಪುಸ್ತಕದ 6ನೇ ಅಧ್ಯಾಯದ, ಶಿಬಿರಾಗ್ನಿ ಉದಂತ 17ರಲ್ಲಿ "ಬಲಶಾಲಿಗಳಾಗುವುದು ಹೇಗೆ?" ಎಂಬ ಶೀರ್ಷಿಕೆಯಡಿಯಲ್ಲಿ ವಿವರಿಸಲಾಗಿದೆ.

**ವ್ಯಾಯಾಮ 1: ತಲೆ ಮತ್ತು ಕುತ್ತಿಗೆಗೆ**

ತಲೆ, ಮುಖ ಮತ್ತು ಕುತ್ತಿಗೆಗಳನ್ನು, ಎರಡು ಕೈಗಳನ್ನೂ ಉಪಯೋಗಿಸಿ, ಹಸ್ತಗಳಿಂದಲೂ, ಕೈಬೆರಳುಗಳಿಂದಲೂ, ಚೆನ್ನಾಗಿ ತೀಡಬೇಕು.

ತಲೆಯನ್ನು ಬಾಚಿಕೊಳ್ಳುವುದು, ಹಲ್ಲುಜ್ಜಿಕೊಳ್ಳವುದು, ಬಾಯಿ ಮತ್ತು ಮೂಗುಗಳನ್ನು ಚೆನ್ನಾಗಿ ತೊಳೆಯುವುದು. ಆ ಬಳಿಕ ಒಂದು ಲೋಟ ತಣ್ಣೀರನ್ನು ಕುಡಿಯುವುದು. ಅನಂತರದಲ್ಲಿ ಈ ಕೆಳಕಂಡ ವ್ಯಾಯಾಮಗಳನ್ನು ಮಾಡಬೇಕು.

ಅಂಗಾಂಗಗಳ (ದೇಹದ) ಚಲನೆಯು ಆದಷ್ಟೂ ನಿಧಾನವಾಗಿರಬೇಕು.

**ವ್ಯಾಯಾಮ 2: ಎದೆಗೆ**

ನೇರ ಸ್ಥಿತಿಯಿಂದ ಮುಂದಕ್ಕೆ ಬಾಗುವುದು. ಕೈಗಳನ್ನು ಮುಂದಕ್ಕೆ, ಕೆಳಕ್ಕೆ ಚಾಚಿರಬೇಕು. ಹಿಂಗೈಗಳು ಒಟ್ಟಿಗಿರಬೇಕು ಮತ್ತು ಮೊಣಕಾಲುಗಳ ಎದುರಿಗಿರಬೇಕು. ಈಗ ಉಸಿರನ್ನು ಬಿಡಿ.

ಕೈಗಳನ್ನು ನಿಧಾನವಾಗಿ, ತಲೆಯ ಮೇಲಕ್ಕೆ ತನ್ನಿ, ಆದಷ್ಟೂ ಹಿಂದಕ್ಕೆ ಬಾಗಿ. ಮೂಗಿನ ಮೂಲಕ ಉಸಿರನ್ನು ತೆಗೆದುಕೊಳ್ಳುತ್ತಾ ಹೋಗಿ. ಇದರಿಂದ ನೀವು, ದೇವರು ಕೃಪೆದೋರಿ ನೀಡಿರುವ, ಪರಿಶುದ್ಧವಾದ ಗಾಳಿಯನ್ನು ನಿಮ್ಮ ಶ್ವಾಸಕೋಶಗಳಿಗೂ, ರಕ್ತಕ್ಕೂ ಕುಡಿಸುತ್ತಿದ್ದೀರಿ. ತೋಳುಗಳನ್ನು ನಿಧಾನವಾಗಿ ಪಕ್ಕಕ್ಕಿಳಿಸಿ. ಈಗ ಬಾಯಿಯಿಂದ ಉಸಿರುಬಿಡಿ. ಹಾಗೆ ಉಸಿರು ಬಿಡುವಾಗ "ಧನ್ಯವಾದ್" (ದೇವರಿಗೆ) ಹೇಳಿ. ಕೊನೆಯದಾಗಿ, ಮುಂದಕ್ಕೆ ಬಾಗಿ, ಅಳಿದುಳಿದ

ಉಸಿರನ್ನು ಪೂರಾ ಬಿಟ್ಟು, ನೀವು ಎಷ್ಟನೆಯ ಬಾರಿ ಮಾಡುತ್ತಿರುವಿರೆಂಬುದಕ್ಕೆ ಸಂಖ್ಯೆಯನ್ನು ಹೇಳಿಕೊಳ್ಳಿ.




ಈ ವ್ಯಾಯಾಮವನ್ನು ಹನ್ನೆರಡು ಬಾರಿ ಮಾಡಿ.

ಈ ವ್ಯಾಯಾಮವನ್ನು ಮಾಡುವಾಗ, ಭುಜಗಳು, ಎದೆ, ಹೃದಯ ಮತ್ತು ಶ್ವಾಸಕೋಶಗಳ ಬೆಳವಣಿಗೆಯು, ಇದರ ಉದ್ದೇಶವೇನು ಎಂಬುದನ್ನು ಪೂರಾ ನೆನಪಿನಲ್ಲಿಡಿ.

ದೀರ್ಘವಾಗಿ ಉಸಿರಾಡುವುದು ಬಹಳ ಮುಖ್ಯವಾದುದು. ಇದರಿಂದ ಶ್ವಾಸಕೋಶಗಳಿಗೆ ಪರಿಶುದ್ಧವಾದ ಗಾಳಿಯು ದೊರಕಿ, ಆ ಮೂಲಕ ರಕ್ತಕ್ಕೂ ಸಿಗುತ್ತದೆ. ಎದೆಯ ಗೂಡನ್ನು ಅಗಲ ಮಾಡಲು ಸಹಾಯವಾಗುತ್ತದೆ. ಆದರೆ ಎಚ್ಚರಿಕೆ. ಅತಿಯಾಗಿ ಮಾಡಬೇಡಿ. ಮೂಗಿನ ಮೂಲಕ ಆದಷ್ಟೂ ಗಾಳಿಯನ್ನು ಒಳಗೆಳೆದುಕೊಳ್ಳಿ. ಇದರಿಂದ ಎದೆಯಗೂಡು ಹಿಗ್ಗುತ್ತದೆ. ಎದೆಯ ಗೂಡಿನ ಮೂಳೆಗಳು, ವಿಶೇಷವಾಗಿ ಬೆನ್ನಿನ ಕಡೆಯ ಮೂಳೆಗಳು ಬಿರಿಯುತ್ತವೆ. ಸ್ವಲ್ಪ ಕಾಲದ ಬಳಿಕ ನಿಧಾನವಾಗಿ, ಕ್ರಮವಾಗಿ, ಬಾಯಿಯ ಮೂಲಕ ಉಸಿರುಬಿಡಿ. ಸ್ವಲ್ಪ ಹೊತ್ತು ಬಿಟ್ಟು ಮತ್ತೆ ಮೂಗಿನ ಮೂಲಕ ಮೊದಲಿನಂತೆ ಉಸಿರೆಳೆದುಕೊಳ್ಳಿ.

ಹಾಡುವುದರಿಂದ, ಏಕಕಾಲದಲ್ಲಿ ಸರಿಯಾಗಿ ಉಸಿರಾಡುವುದು, ಹೃದಯ, ಶ್ವಾಸಕೋಶಗಳು, ಎದೆ ಮತ್ತು ಗಂಟಲು ಇವುಗಳ ಬೆಳವಣಿಗೆ ಆಗುತ್ತದೆ. ಇವೆಲ್ಲದರ ಜೊತೆಗೆ ಹಾಡುವಾಗ ಒಂದು ರೀತಿಯ ಭಾವನಾತ್ಮಕತೆ ಉಂಟಾಗುತ್ತದೆ.

## ವ್ಯಾಯಾಮ 3: ಹೊಟ್ಟೆಗೆ

ನೇರವಾಗಿ ನಿಂತು, ಎರಡು ಕೈಗಳನ್ನೂ, ಕೈಗಳ ಬೆರಳುಗಳನ್ನೂ ಭುಜದ ಮಟ್ಟಕ್ಕೆ ಮುಂದಕ್ಕೆ ಚಾಚಿ ಹಿಡಿಯಿರಿ. ಈಗ ನಿಧಾನವಾಗಿ ಬಲಗಡೆಗೆ ತಿರುಗಿ. ಕಾಲುಗಳನ್ನು ಕದಲಿಸಬಾರದು. ಚಾಚಿರುವ ಕೈಗಳು ಬಲಗಡೆಗೆ, ಆದಷ್ಟೂ ಹಿಂದುಗಡೆಗೆ ತಿರುಗಿ ನಿಲ್ಲಲಿ. ಹೀಗೆ ತಿರುಗುವಾಗ, ನೀವು ಸೊಂಟದ ಮೇಲೆಯೇ ತಿರುಗಿ. ಎರಡು ಕೈಗಳೂ ಭುಜದ ಮಟ್ಟಕ್ಕೆ ಅಥವಾ ಸ್ವಲ್ಪ ಮೇಲೆಯೇ ಇರಲಿ. ಸ್ವಲ್ಪ ಹೊತ್ತಿನ ಬಳಿಕ, ನಿಧಾನವಾಗಿ, ಆದಷ್ಟೂ ಎಡಗಡೆಗೆ ಹಿಂದಕ್ಕೆ ತಿರುಗಿ. ಹೀಗೆ 12 ಬಾರಿ ಮಾಡಿ.



ಈ ವ್ಯಾಯಾಮದಿಂದ ದೇಹದೊಳಗಿನ ಭಾಗಗಳು ಎಂದರೆ ಕರುಳು, ಪಿತ್ತಜನಕಾಂಗ ಮುಂತಾದವುಗಳು ಜಾಗೃತಗೊಂಡು ಕೆಲಸಮಾಡಲು, ಅನುವಾಗುತ್ತದೆ. ಎದೆ ಮೂಳೆಗಳು ಮತ್ತು ಮಾಂಸಖಂಡಗಳು (ಹೊಟ್ಟೆ ಸುತ್ತಲಿರುವ) ಬಲಗೊಳ್ಳುತ್ತವೆ.

ಈ ವ್ಯಾಯಾಮವನ್ನು ಮಾಡುವಾಗ, ಉಸಿರಾಟವನ್ನು ಕ್ರಮಬದ್ಧಗೊಳಿಸ ಬೇಕು. ಬಲಭಾಗದ ಹಿಂಭಾಗಕ್ಕೆ ಕೈಚಾಚಿ ತಿರುಗಿರುವಾಗ, ಮೂಗಿನಿಂದ ಉಸಿರನ್ನೆಳೆದುಕೊಳ್ಳಬೇಕು. (ಬಾಯಿ ಮೂಲಕ ಕೂಡದು) ಹಾಗೆಯೇ ತಿರುಗುತ್ತಾ ಎಡಭಾಗದ ಹಿಂಬದಿಗೆ ಕೈ ಚಾಚುವವರೆಗೆ ಉಸಿರುಬಿಡುತ್ತಾ ಬನ್ನಿ. ಅದೇ ಸಮಯದಲ್ಲಿ ಎಷ್ಟನೆಯ ಬಾರಿ ತಿರುಗುತ್ತಿರುವಿರೆಂದು ಗಟ್ಟಿಯಾಗಿ ಹೇಳಿಕೊಳ್ಳಿ ಅಥವಾ ಇನ್ನೂ ಉತ್ತಮವಾದುದೆಂದರೆ, ನಿಮ್ಮ ಬೆಳಗಿನ ಪ್ರಾರ್ಥನೆಯ ಭಾಗವಾಗಿ, ನಿಮ್ಮ ಕುಟುಂಬದ ಸದಸ್ಯರ ಮಿತ್ರರ ಹಸರು ಹೇಳಿ ಅವರನ್ನನುಗ್ರಹಿಸುವಂತೆ ದೇವರಲ್ಲಿ ಪ್ರಾರ್ಥಿಸಿ.

ಹೀಗೆ 6 ಬಾರಿ ಮಾಡಿದ ಮೇಲೆ, ಉಸಿರಾಡುವ ದಿಕ್ಕನ್ನು ಬದಲಾಯಿಸಿ, ಎಂದರೆ ಎಡಗಡೆ ಹಿಂಬದಿಗೆ ತಿರುಗುವಾಗ ಶ್ವಾಸವನ್ನೆಳೆದುಕೊಂಡು, ಬಲಗಡೆಯ ಹಿಂಬದಿಗೆ ತಿರುಗಿದಾಗ ಶ್ವಾಸವನ್ನು ಬಿಡಿ.

## ವ್ಯಾಯಾಮ 4: ಸೊಂಟಕ್ಕೆ

'ಶಂಕು' ವ್ಯಾಯಾಮ, ಸಾವಧಾನ್‌ನಲ್ಲಿ ನಿಲ್ಲಿ. ಕೈಗಳನ್ನು ತಲೆಯ ಮೇಲೆ ಆದಷ್ಟೂ ಮೇಲಕ್ಕೆ ಎತ್ತಿ. ಎರಡೂ ಕೈಗಳಿನ ಬೆರಳು ಜೋಡಿಸಿ ಹಿಡಿದುಕೊಳ್ಳಿ. ಆದಷ್ಟೂ ಹಿಂದಕ್ಕೆ ಬಾಗಿ ತೋಳುಗಳನ್ನು ಶಂಕುವಿನಂತೆಯೇ ಹಿಡಿದು ನಿಧಾನವಾಗಿ ಸುತ್ತುತ್ತಾ ಬನ್ನಿ. ಇದರಿಂದ ಕೈಗಳು ಮೇಲಿನಿಂದ ಹೊರಟು ದೇಹದ ಸುತ್ತಲೂ ಒಂದು ದೊಡ್ಡ ವೃತ್ತವನ್ನು ಮಾಡುತ್ತವೆ. ದೇಹವು ಸೊಂಟದ ಭಾಗದಲ್ಲಿ ತಿರುಗುತ್ತಾ ಮೊದಲು ಪಕ್ಕಕ್ಕೂ, ಬಳಿಕ ಮುಂದಕ್ಕೂ, ಆ ಮೇಲೆ ಇನ್ನೊಂದು ಪಕ್ಕಕ್ಕೂ ಕೊನೆಗೆ ಮತ್ತೆ ಹಿಂದಕ್ಕೂ ಸರಿಯುತ್ತದೆ. ಈ ವ್ಯಾಯಾಮವು ಸೊಂಟ ಮತ್ತು ಹೊಟ್ಟೆಯ ಮಾಂಸಖಂಡಗಳನ್ನು ಪಳಗಿಸುತ್ತದೆ.



ಈ ವ್ಯಾಯಾಮವನ್ನು ಬಲಗಡೆಯಿಂದ ಆರು ಬಾರಿ, ಎಡಗಡೆಯಿಂದ ಆರುಬಾರಿ ಪುನರಾವರ್ತಿಸಿ. ಚಲಿಸುವಾಗ, ನಿಮ್ಮ ಹಿಂಬದಿಯಲ್ಲಿ ಏನು ನಡೆಯುತ್ತಿದೆ ಎಂಬುದನ್ನು, ನಿಮ್ಮ ಕಣ್ಣುಗಳು, ನೋಡುವಂತಿರಬೇಕು.

ಈ ವ್ಯಾಯಾಮದನ್ವಯ ಇರುವ ಅಂತರಾರ್ಥವನ್ನು ವ್ಯಾಯಾಮ ಮಾಡುವಾಗ ಅವಶ್ಯಕವಾಗಿ, ನೀವು ಯೋಚಿಸಬೇಕು.

ಬೆರಳಲ್ಲಿ ಬೆರಳು ಜೋಡಿಸಿ, ಕೈಗಳನ್ನು ಹಿಡಿದಿರುವುದು. ನಿಮ್ಮ ಮಿತ್ರರೊಡನೆ, ಸ್ಕೌಟ್‌ಗಳೊಡನೆ, ಅನ್ಯೋನ್ಯವಾಗಿದ್ದೀರೆಂದು ಸೂಚಿಸುತ್ತದೆ. ನಿಮ್ಮ ದೇಹವು

ಬಲಗಡೆ, ಎಡಗಡೆ, ಹಿಂದೆ, ಮುಂದೆ ಚಲಿಸುವುದು ಎಲ್ಲಾ ದಿಕ್ಕುಗಳಲ್ಲಿಯೂ ನೀವು ನಿಮ್ಮ ಮಿತ್ರರೊಡನೆ ಒಡಗೂಡಿರುವುದನ್ನು ಸೂಚಿಸುತ್ತದೆ. ಪ್ರೇಮ, ಮೈತ್ರಿಗಳು ಭಗವಂತನು ನೀಡಿರುವ ಅಮೂಲ್ಯ ಕೊಡುಗೆಯಾಗಿವೆ. ಆದ್ದರಿಂದ, ನಿಮ್ಮ ಕೈ ಮೇಲೆತ್ತಿ ಉಸಿರೆಳೆದುಕೊಳ್ಳುವಾಗ, ಮೇಲೆ ಸ್ವರ್ಗದೆಡೆಗೆ ನೋಡುತ್ತಾ, ಈ ಸದ್ಭಾವನೆಯನ್ನು ಹೀರಿಕೊಳ್ಳುತ್ತೀರಿ. ಶ್ವಾಸವನ್ನು ಬಿಡುವಾಗ, ನಿಮ್ಮ ಸುತ್ತಲೂ ಇರುವ ಮಿತ್ರರೊಡನೆ ಈ ಸದ್ಭಾವನೆಯನ್ನು ಹಂಚಿಕೊಳ್ಳುತ್ತೀರಿ.

**ವ್ಯಾಯಾಮ 5 :- ದೇಹದ ಕೆಳಭಾಗ ಮತ್ತು ಕಾಲುಗಳ ಹಿಂಭಾಗಕ್ಕೆ**

ಇತರ ವ್ಯಾಯಾಮಗಳಂತೆ ಇದೂ ಸಹ, ನಿಮ್ಮ ಉಸಿರಾಟಕ್ಕೆ ಸಂಬಂಧಿಸಿದ್ದು. ಇದರಿಂದ ಶ್ವಾಸಕೋಶಗಳು ಮತ್ತು ಹೃದಯದ ಬೆಳವಣಿಗೆಯಾಗುತ್ತದೆ. ರಕ್ತವು ಪುಷ್ಟಿ ಹೊಂದಿ ಪರಿಶುದ್ಧವಾಗುತ್ತದೆ.

ನೀವು ಸುಮ್ಮನೆ ನೇರವಾಗಿ ನಿಂತು, ಮೇಲೆ ಆಕಾಶದೆಡೆಗೆ, ಹಾಗೂ ಹಿಂದಕ್ಕೆ ಆದಷ್ಟೂ ಚಾಚಬೇಕು. ಆ ಬಳಿಕ ಮುಂದಕ್ಕೆ ಹಾಗೂ ಕೈ ಬೆರಳುಗಳು ಕಾಲ್ಬೆರಳುಗಳನ್ನು ಮುಟ್ಟುವವರೆಗೆ, ಕೆಳಕ್ಕೆ ಬಾಗಬೇಕು. ಮೊಣಕಾಲುಗಳು ನೇರವಾಗಿರಬೇಕು. ಬಾಗಬಾರದು.

ನಿಲ್ಲುವಾಗ ಕಾಲುಗಳು ಸ್ವಲ್ಪ ದೂರವಿರಲಿ. ತಲೆಯ ಹಿಂಭಾಗವನ್ನು ಎರಡೂ ಕೈಗಳಿಂದ ಹಿಡಿದು ಆದಷ್ಟೂ ಹಿಂದೆ ಬಾಗಿ ಆಕಾಶದೆಡೆಗೆ ನೋಡಬೇಕು. (ಚಿತ್ರ 1) ನಾನು ಈ ಮೊದಲೇ ತಿಳಿಸಿರುವಂತೆ, ವ್ಯಾಯಾಮದೊಡನೆ ನಿಮ್ಮ ಪ್ರಾರ್ಥನೆಯನ್ನೂ ಸೇರಿಸುವುರಾದರೆ, ಹಾಗೆಯೂ ಮಾಡಬಹುದು. ಮೇಲೆ ನೋಡುವಾಗ, ದೇವರಿಗೆ ಹೇಳಿ "ಅಡಿಯಿಂದ ಮುಡಿಯವರೆಗೆ ನಿನ್ನವನು ನಾನು." ಹೀಗೆ ಹೇಳುತ್ತಾ ಮೂಗಿನಿಂದ (ಬಾಯಿನಿಂದಲ್ಲ) ಉಸಿರನ್ನು ತೆಗೆದುಕೊಳ್ಳಿ. ಆ ಬಳಿಕ ಎರಡು ಕೈಗಳನ್ನೂ ಆದಷ್ಟೂ ಮೇಲೆತ್ತಿ (ಚಿತ್ರ 2). ಎಷ್ಟನೇ ಬಾರಿ ಮಾಡುತ್ತಿದ್ದೀರಿ ಎಂಬುದನ್ನು ಹೇಳಿಕೊಳ್ಳಿ. ಈಗ ನಿಧಾನವಾಗಿ ಉಸಿರುಬಿಡುತ್ತಾ, ಮುಂದಕ್ಕೂ, ಕೆಳಕ್ಕೂ ಬಾಗಿ, ಮೊಣಕಾಲುಗಳು ಪೆಡಸಾಗಿರಲಿ. ಕಾಲು ಬೆರಳುಗಳನ್ನು, ಕೈಬೆರಳ ತುದಿಗಳು ಮುಟ್ಟಲಿ. (ಚಿತ್ರ 3)

ಮುಂದೆ ಬಾಗುವಾಗ, ಬೆನ್ನಿನ ಕಿರುಭಾಗವನ್ನು ಒಳಗೆಳೆದುಕೊಳ್ಳಿ. ತೋಳುಗಳನ್ನೂ, ಮೊಣಕಾಲುಗಳನ್ನೂ ಹಾಗೆಯೇ ಪೆಡಸಾಗಿಟ್ಟುಕೊಂಡು, ಮುಂಡವನ್ನು ಮೇಲೆತ್ತಿ, ಮೊದಲ ಸ್ಥಿತಿಗೆ ಬನ್ನಿ. ಈ ವ್ಯಾಯಾಮವನ್ನು 12 ಬಾರಿ ಮಾಡಿ.



ಕಾಲ್ಬೆರಳುಗಳನ್ನು ಮುಟ್ಟುವುದು ಈ ವ್ಯಾಯಾಮದ ಉದ್ದೇಶವಲ್ಲ. ಹೊಟ್ಟೆಯ ಭಾಗವನ್ನು "ಅಂಗಮರ್ದನ" (Massage) ಮಾಡುವುದು ಇದರ ಉದ್ದೇಶ. ನಿಮಗೆ ಕಾಲುಬೆರಳು ಮುಟ್ಟಲು ಸಾಧ್ಯವಾಗದಿದ್ದರೆ, ಅದಕ್ಕಾಗಿ ಶ್ರಮಪಡಬೇಡಿ, ಬಿಟ್ಟುಬಿಡಿ. ನೀವೇ ತಿಣಕಾಡುವುದು ಅಥವಾ ಇತರರ ಸಹಾಯವನ್ನು ತೆಗೆದುಕೊಳ್ಳುವುದು ಮಾಡಬೇಡಿ. ದೇಹವನ್ನು ಮೇಲೆತ್ತುವುದರ ಮೇಲೆ, ಈ ವ್ಯಾಯಾಮದ ಮೌಲ್ಯವಿದೆಯೇ ಹೊರತು, ಕೆಳಗೆ ಬಾಗುವುದರಲ್ಲಲ್ಲ.

**ವ್ಯಾಯಾಮ 6: ಕಾಲುಗಳು, ಪಾದಗಳು ಮತ್ತು ಕಾಲ್ಬೆರಳುಗಳು**

ಬರಿಯ ಕಾಲಿನಲ್ಲಿ 'ಸಾವಧಾನ್'ನಲ್ಲಿ ನಿಲ್ಲಿ. ಕೈಗಳನ್ನು ಸೊಂಟದ ಮೇಲಿಟ್ಟುಕೊಳ್ಳಿ. ಕಾಲ್ಬೆರಳುಗಳ ಮೇಲೆ ನಿಲ್ಲಿ. ಮಂಡಿಗಳನ್ನು ನಿಧಾನವಾಗಿ ಮಡಚುತ್ತಾ, ಕಾಲುಗಳನ್ನು ಮೊಣಕಾಲು ಮಟ್ಟದಲ್ಲಿ ಅಗಲಿಸುತ್ತಾ, ಕೊನೆಕೊನೆಗೆ ಕೂಡುವ ಸ್ಥಿತಿಗೆ ಬನ್ನಿ. ಹಿಮ್ಮಡಿಗಳು ಮಾತ್ರ ನೆಲದಿಂದ ಮೇಲೆಯೇ ಇರಬೇಕು.

ಈಗ ನಿಧಾನವಾಗಿ ದೇಹವನ್ನು ಮೇಲೆತ್ತಿ. ಪುನಃ, ಮೊದಲ ಸ್ಥಿತಿಗೆ ಬನ್ನಿ. ಇದನ್ನು 12 ಬಾರಿ ಮಾಡಿ.



ಬೆನ್ನಿನ ಕಿರುಭಾಗವನ್ನು ಒಳಗೆಳೆದುಕೊಳ್ಳಬೇಕು. ದೇಹವನ್ನು ಮೇಲೆತ್ತುವಾಗ, ಮೂಗಿನಿಂದ ಉಸಿರೆಳೆದುಕೊಳ್ಳಬೇಕು. ದೇಹವು ಕೆಳಬರುವಾಗ, ಸಂಖ್ಯೆಯನ್ನು ಹೇಳಿಕೊಂಡು, ಬಾಯಿ ಮೂಲಕ ಉಸಿರುಬಿಡಬೇಕು. ದೇಹವು ಓಲಾಡದಂತೆ ಸುಲಭವಾಗಿ ಸರಿದೂಗುವುದಕ್ಕಾಗಿ, ಮೊಣಕಾಲು ಮಟ್ಟದಲ್ಲಿ ಕಾಲುಗಳನ್ನು ಅಗಲಿಸಲಾಗುತ್ತದೆ. ಈ ವ್ಯಾಯಾಮವನ್ನು ಅಭ್ಯಾಸ ಮಾಡುವಾಗ ತೊಡೆಗಳು, ಮೀನ ಖಂಡಗಳು ಮತ್ತು ಕಾಲ್ಬೆರಳುಗಳ ಸ್ನಾಯುಗಳನ್ನು ಬಲಪಡಿಸುವುದು, ಈ ವ್ಯಾಯಾಮದ ಉದ್ದೇಶವೆಂಬುದನ್ನು ಗಮನದಲ್ಲಿಡಿ.

ಈ ವ್ಯಾಯಾಮದಿಂದ ಹೊಟ್ಟೆಯ ಸ್ನಾಯುಗಳು ಬಲಗೊಳ್ಳುತ್ತವೆ. ಆದ್ದರಿಂದ ನೀವು ಈ ವ್ಯಾಯಾಮವನ್ನು ದಿನಕ್ಕೆ ಎಷ್ಟು ಬಾರಿ ಆದರೆ ಅಷ್ಟು ಬಾರಿ, ಯಾವಾಗಲಾದರೆ ಆವಾಗ, ಅಭ್ಯಾಸ ಮಾಡಿದರೆ, ಅದರಿಂದ ಅಷ್ಟೂ ಒಳ್ಳೆಯದಾಗುತ್ತದೆ.

ಈ ವ್ಯಾಯಾಮಕ್ಕೆ ಕೆಳಕಂಡಂತೆ ಅರ್ಥೈಸಬಹುದು. ಈ ವ್ಯಾಯಾಮದಲ್ಲಿ ಒಮ್ಮೆ ಕೂಡುವುದು, ಒಮ್ಮೆ ಏಳುವುದು, ಒಂದಾದ ಮೇಲೊಂದರಂತೆ ಮಾಡುತ್ತೀರಿ. ನೀವು ನಿಂತಿರಲಿ, ಕುಳಿತಿರಲಿ, ಕೆಲಸ ಮಾಡುತ್ತಿರಲಿ, ವಿಶ್ರಾಂತಿ ತೆಗೆದುಕೊಳ್ಳುತ್ತಿರಲಿ. ನಿಮ್ಮ ಕೈಗಳು ಸೊಂಟವನ್ನು ಬಿಡದೆ ಹಿಡಿದಿರುವಂತೆ, ಸಮ್ಯಕ್ ದೃಷ್ಟಿಯುಳ್ಳವರಾಗಿ (Hold yourself together) ಸರಿಯೆನಿಸಿದುದನ್ನು ಮಾತ್ರ ಮಾಡುತ್ತೀರಿ.

**ಗಮನಿಸಿ:** ಬಿ.ಪಿ. ಅವರ 6 ವ್ಯಾಯಾಮಗಳ ಬಗ್ಗೆ ರಾಜ್ಯ ಕಾರ್ಯಾಲಯದ ಪ್ರಕಟಣೆ. "ಬಿ.ಪಿ. ಅವರ 6 ವ್ಯಾಯಾಮಗಳು" ಕಿರುಪುಸ್ತಿಕೆಯನ್ನು ಕೊಳ್ಳಿ. ಅದರಲ್ಲಿ ಈ ಬಗ್ಗೆ ಸಮಗ್ರ, ಸಚಿತ್ರ ಮಾಹಿತಿ ಸಿಗುತ್ತದೆ.

## ಮೇಲೇರುವುದು (Climbing)

ಪ್ರತಿ ಬಾಲಕನೂ, ಮೇಲೇರುವುದಕ್ಕೆ ಇಷ್ಟಪಡುತ್ತಾನೆ. ಪಟ್ಟುಹಿಡಿದರೆ ನೀನು ಅದರಲ್ಲಿ ನಿಷ್ಣಾತನಾಗುವುದಲ್ಲದೆ, ಎಂದೆಂದಿಗೂ ಹಾಗೆಯೇ ಮಾಡುತ್ತಿರುತ್ತೀಯೇ.

ಅನೇಕ ಖ್ಯಾತ ಪರ್ವತಾರೋಹಿಗಳು ಬಾಲಕರಾಗಿದ್ದಾಗ ಹಗ್ಗಗಳನ್ನೂ, ಕಂಬಗಳನ್ನೂ, ಮರಗಳನ್ನೂ, ಹತ್ತುವುದರಿಂದ ಪ್ರಾರಂಭಿಸುತ್ತಾರೆ. ಅಲ್ಲಿಂದ ಬಹಳ ದೂರ ಕ್ರಮಿಸಿ, ಬಂಡೆ ಹತ್ತುವುದನ್ನೂ, ಮುಂದೆ ಪರ್ವತಾರೋಹಣವನ್ನೂ ಮಾಡಿರುತ್ತಾರೆ. ನಿನಗೆ ಸಾಕಷ್ಟು ಅಭ್ಯಾಸವಿಲ್ಲದಿದ್ದರೆ ಆರೋಗ್ಯ ದೃಢಕಾಯ ನಾಗಿಯೂ, ಬಲಶಾಲಿಯಾಗಿಯೂ ಬೆಳೆಯದಿದ್ದರೆ ಎಲ್ಲಾದರೂ ಮುಗ್ಗರಿಸಿ ಬಿದ್ದು ಸ್ಮಶಾನಯಾತ್ರೆ ಮಾಡಬೇಕಾಗುತ್ತದೆ.



ಮೇಲೇರುವುದು ಅತ್ಯಂತ ಆಹ್ಲಾದಕರವಾದ ಮತ್ತು ಸಾಹಸಯುತವಾದ ಕ್ರೀಡೆ, ಆದರೆ ಅದಕ್ಕೆ ಬಲವಾದ ಕೈಕಾಲುಗಳೂ, ಕೆಚ್ಚು ಮತ್ತು ಧೈರ್ಯೋತ್ಸಾಹಗಳೂ, ಧೃಢವಾದ ಮನಸ್ಸೂ ಮತ್ತು ಕಷ್ಟಸಹಿಷ್ಣುತೆಯೂ ಇರಬೇಕಾಗುತ್ತದೆ. ಇವೆಲ್ಲವೂ ಅಭ್ಯಾಸಬಲದಿಂದ ಬರುತ್ತವೆ.

ಪರ್ವತಾರೋಹಣದಲ್ಲಿ, ನೀವು ಓಲಾಡದೇ ಸರಿದೂಗಿ ನಡೆಯುವುದು, ಚುರುಕು ಗತಿಯಲ್ಲಿ (Nimble) ಬೇಗನೆ (Quickly) ಹೆಜ್ಜೆ ಹಾಕುವುದೂ ಬಹಳ ಮುಖ್ಯವಾದುದು. ಹಲಗೆಯ ಮೇಲೆ ನಡೆಯುವುದು ಅಥವಾ ವಿವಿಧ ದೂರಗಳಲ್ಲಿ ಮತ್ತು ಕೋನಗಳಲ್ಲಿ ವ್ಯವಸ್ಥೆ ಮಾಡಿರುವ, ಇಟ್ಟಿಗೆ ಅಥವಾ ಕಲ್ಲುಗಳ ಮೇಲೆ ನಡೆಯುವುದೂ ಒಳ್ಳೆಯ ಅಭ್ಯಾಸಗಳು. ಇವುಗಳನ್ನು ಸೂಕ್ತ ಮಾರ್ಪಾಟುಗಳೊಡನೆ, ಆಟಗಳನ್ನಾಗಿ ಆಡಿಸಬಹುದು.



ಇದು ಮನೆಯಲ್ಲಿ ತಯಾರಿಸಿದ, ಶಿಬಿರ ವ್ಯಾಯಾಮ ಶಾಲೆ. ಇದನ್ನು ಬಲವಾದ ಹಗ್ಗಗಳು ಮತ್ತು ಕಂಬಗಳನ್ನುಪಯೋಗಿಸಿ, ಕಟ್ಟುಗಳನ್ನು ಹಾಕಿ ಕಟ್ಟಬೇಕು. ಅಗೋ! ತಯ್ಯಾರ್! ಇದರಲ್ಲಿ ಕ್ರಮಬದ್ಧವಾದ ವ್ಯಾಯಾಮವೇನೂ ಇಲ್ಲದಿದ್ದರೂ, ನೀವು ನಿಮ್ಮದೇ ಆದ ರೀತಿಯಲ್ಲಿ ಆಡಿಕೊಳ್ಳಬಹುದು.

---

ನಾನು ಸಾಕಷ್ಟು ಚಟುವಟಿಕೆಯುಳ್ಳ, ಎಳೆವಯಸ್ಸಿನ, ಪಟಿಂಗನಾಗಿದ್ದಾಗ ಹುರುಪಿನಿಂದ ಕೂಡಿದ, ತೀವ್ರಗತಿಯ ಜಾನಪದ ನೃತ್ಯಗಳನ್ನು ಮಾಡುತ್ತಿದ್ದೆ. ಮುಂದೆ ಅದು ನನ್ನ ರೆಜಿಮೆಂಟಿನ ನಾಟಕ ಪ್ರದರ್ಶನಗಳ ವೇಳೆಗಳಲ್ಲಿ ಜನರಿಗೆ ಮನರಂಜನೆಯನ್ನೂ, ನನಗೆ ವ್ಯಾಯಾಮವನ್ನೂ ನೀಡುತ್ತಿದ್ದಿತು. ಅಲ್ಲಿಂದ ಮುಂದಿನ

ದಿನಗಳಲ್ಲಿ ದ. ಆಫ್ರಿಕಾದ ಮೆಟಾಬಿಲಿಯಲ್ಲಿ, ಸೇವಾನುಸಾರವಾಗಿ ಸ್ವಲ್ಪ ಸ್ಕೌಟಿಂಗ್ ಮಾಡಬೇಕಾಗಿ ಬಂದಾಗ ಇದಕ್ಕೆ ಒಂದು ಹೊಸ ಮೌಲ್ಯವನ್ನೇ ಕಂಡುಕೊಂಡೆ.

ಜಾನಪದ ನೃತ್ಯದಲ್ಲಿ ಪಡೆದ ಶಿಕ್ಷಣವು ಮೆಟಾಬಿಲಿ ಶತ್ರುಗಳ ಕಣ್ಣು ತಪ್ಪಿಸಲು ಬಹಳ ಸಹಾಯವಾಯಿತು.

ಮೊಟಪ್ಪೋ ಬೆಟ್ಟ ಪ್ರದೇಶದಲ್ಲಿ, ನಾನು ಶತ್ರುಗಳ ಗಿರಿದುರ್ಗಗಳನ್ನು ದಾಟಿ ಒಳಹೋಗಿದ್ದೆ. ಶತ್ರುಗಳು ನನ್ನನ್ನು ಕಂಡುಬಿಟ್ಟರು. ಆ ಕಾರಣಕ್ಕಾಗಿ ನಾನು ಓಡಬೇಕಾಗಿ ಬಂದಿತು. ನನ್ನನ್ನು ಅವರು ಸಜೀವವಾಗಿ ಸೆರೆಹಿಡಿಯುವ ಉದ್ದೇಶವನ್ನಿಟ್ಟುಕೊಂಡಿದ್ದರು. ನನಗೆ ವಿಶೇಷ ರೀತಿಯ ಹಿಂಸೆ ಕೊಟ್ಟು ಸಾಯಿಸಲು ಯೋಚಿಸಿದ್ದರು. ಆದ್ದರಿಂದ ನಾನು ಓಡುವಾಗ, ತುಂಬು ಧೈರ್ಯದಿಂದ ಮನಸೋ ಇಚ್ಛೆ ಓಡಿದೆ.

ಆ ಪರ್ವತ ಪ್ರದೇಶದಲ್ಲಿ ದೊಡ್ಡ ದೊಡ್ಡ ಕಲ್ಲು ಬಂಡೆಗಳು, ಒಂದರಮೇಲೊಂದು ಜೋಡಿಸಿದಂತಿತ್ತು. ಬಹುತೇಕ ಅದೇ ರೀತಿಯ ಗುಡ್ಡಗಾಡು. ನನ್ನ ಓಟದ ಬಹುಭಾಗ ಬಂಡೆಯಿಂದ ಬಂಡೆಗೆ ಹಾರುವುದೇ ಆಗಿತ್ತು. ಆಗ, ನಾನು ಈಗಾಗಲೇ ಹೇಳಿದ, ಸರಿದೂಗಿ ನಡೆಯುವುದೂ, ಜಾನಪದ ನೃತ್ಯದಲ್ಲಿ ಕಲಿತ ಪಾದ ನಿರ್ವಹಣೆ (Foot Management) ನನ್ನ ಸಹಾಯಕ್ಕೆ ಬಂದುವು. ಆ ರೀತಿಯಲ್ಲಿ ನಾನು ಪರ್ವತವನ್ನು ಇಳಿದುದರಿಂದ, ಬಹಳ ಸುಲಭವಾಗಿ, ನನ್ನ ಹಿಂಬಾಲಕರನ್ನು ದೂರ ಹಾಕಲು ಸಾಧ್ಯವಾದುದನ್ನು ಕಂಡೆ. ಅವರುಗಳು ಬಯಲು ಪ್ರದೇಶದವರಾದ್ದರಿಂದ, ಬಂಡೆಗಳ ಮೇಲೆ ಓಡುವುದು (Rock trotting) ಬರುತ್ತಿರಲಿಲ್ಲ. ಬಹಳ ಕಷ್ಟಪಟ್ಟು ಬಂಡೆಗಳ ಮೇಲೆ ಜಾರುತ್ತಾ (Slithering) ಪ್ರಯಾಸಪಟ್ಟು ದೇಕುತ್ತಾ (Clambering) ಅಂತೂ ನಾನು ತಪ್ಪಿಸಿಕೊಂಡೆ. ಇದರಿಂದ ಬಲಗೊಂಡ ಆತ್ಮ ವಿಶ್ವಾಸದಿಂದ, ನಾನು ಮತ್ತೆ ಕೆಲವು ಬಾರಿ ಆ ಪರ್ವತ ಪ್ರದೇಶಕ್ಕೆ ಭೇಟಿಕೊಟ್ಟೆ, ಅವು ಫಲಪ್ರದವೆನಿಸಿದವು ಎಂದು "ಬಿ.ಪಿ." ಅವರು ಹೇಳಿದ್ದಾರೆ.

### ಮೂಗು

ರಾತ್ರಿಯ ವೇಳೆಯಲ್ಲಿ ಶತ್ರುಗಳನ್ನು ಗಮನಿಸಬೇಕಾದರೆ ಸ್ಕೌಟ್‌ಗೆ ಚೆನ್ನಾಗಿ ವಾಸನೆ ಹಿಡಿಯಲು ಬರಬೇಕು. ಅವನು ಯಾವಾಗಲೂ ಮೂಗಿನಲ್ಲೇ (ಬಾಯಿನಲ್ಲಲ್ಲ) ಉಸಿರಾಡಿದರೆ, ಈ ದಿಶೆಯಲ್ಲಿ ಸಾಕಷ್ಟು ಸಹಾಯವಾಗುತ್ತದೆ. ಮೂಗಿನಲ್ಲೇ ಉಸಿರಾಡಲು ಇನ್ನೂ ಕೆಲವು ಮುಖ್ಯ ಕಾರಣಗಳಿವೆ.

ಅಮೆರಿಕನ್ನನೊಬ್ಬನು, "ಬಾಯಿ ಮುಚ್ಚಿಕೊಂಡು ನಿನ್ನ ಜೀವವನ್ನುಳಿಸಿಕೋ" (Shut your mouth and save your life) ಎಂಬ ಪುಸ್ತಕವನ್ನು ಬರೆದಿದ್ದಾನೆ. ಅದರಲ್ಲಿ ರೆಡ್ ಇಂಡಿಯನ್ನರು ಬಹಳ ಕಾಲದಿಂದ, ಇದನ್ನು ಮಕ್ಕಳ ವಿಷಯದಲ್ಲಿ ಹೇಗೆ ಅಳವಡಿಸಿಕೊಂಡಿದ್ದಾರೆಂದು ವಿವರಿಸಿದ್ದಾನೆ. ಮೂಗಿನಲ್ಲಿಯೇ ಉಸಿರಾಡಲು ಅಭ್ಯಾಸವಾಗಬೇಕೆಂಬ ಉದ್ದೇಶದಿಂದ ರಾತ್ರಿಯ ಹೊತ್ತು ಅವರು ಮಕ್ಕಳ ಗಲ್ಲವನ್ನು ಎತ್ತಿ ಕಟ್ಟುತ್ತಿದ್ದರೆಂದು ತಿಳಿಸಿದ್ದಾನೆ.

ಮೂಗಿನಲ್ಲಿ ಉಸಿರಾಡುವುದರಿಂದ, ಅನೇಕ ರೋಗಾಣುಗಳು, ಗಂಟಲು ಮತ್ತು ಶ್ವಾಸಕೋಶಗಳೊಳಗೆ ನುಗ್ಗುವುದನ್ನು ತಡೆಹಿಡಿಯಲಾಗುತ್ತದೆ.

ಸ್ಕೌಟ್‌ಗೆ ಇದರಿಂದ ವಿಶೇಷ ಉಪಯೋಗವುಂಟು. ಬಾಯಿ ಮುಚ್ಚಿಕೊಂಡು ಇರುವುದರಿಂದ ನೀವು ಕಷ್ಟಪಟ್ಟು ಕೆಲಸಮಾಡುವಾಗ ಬಾಯಾರಿಕೆ ಆಗುವುದನ್ನು ತಡೆಗಟ್ಟುತ್ತೀರಿ. ರಾತ್ರಿಯ ವೇಳೆ ಮೂಗಿನಲ್ಲೇ ಉಸಿರಾಡುವುದರಿಂದ ಗೊರಕೆ ಹೊಡೆಯುವುದು ನಿಲ್ಲುತ್ತದೆ. ಗೊರಕೆ ಹೊಡೆಯುವುದು ಅದರಲ್ಲೂ ಶತ್ರು ನೆಲೆಯಲ್ಲಿರುವಾಗ ಬಹಳ ಅಪಾಯಕರವಾದುದು. ಆದ್ದರಿಂದ ಎಲ್ಲಾ ವೇಳೆಗಳಲ್ಲಿಯೂ ಮೂಗಿನಲ್ಲೇ ಉಸಿರಾಡುವುದನ್ನೂ, ಬಾಯಿ ಮುಚ್ಚಿಕೊಂಡಿರುವುದನ್ನೂ ಅಭ್ಯಾಸ ಮಾಡಿಕೊಳ್ಳಿ.

**ಕಿವಿಗಳು**

ಸ್ಕೌಟು ಚೆನ್ನಾಗಿ ಕೇಳಿಸಿಕೊಳ್ಳುವಂತಿರಬೇಕು. ಕಿವಿಗಳು ಬಹಳ ಸೂಕ್ಷ್ಮವಾದುವು. ಒಮ್ಮೆ ಅಪಾಯವಾಯಿತೆಂದರೆ, ಮುಂದೆ ಸರಿಪಡಿಸಲಾಗದಷ್ಟು ಕಿವುಡರಾಗಬಹುದು.

ಸಾಮಾನ್ಯವಾಗಿ ಚೊಕ್ಕಟಮಾಡಿಕೊಳ್ಳುವ ಉದ್ದೇಶದಿಂದ, ಜನರು ಕರವಸ್ತ್ರದ ಮೂಲೆಯನ್ನಿಟ್ಟು ತಿರುಚುವುದು, ಹೇರ್‌ಪಿನ್ನು ಮುಂತಾದವುಗಳಿಂದ ಚುಚ್ಚಿಕೊಳ್ಳುವುದು, ಹತ್ತಿಯನ್ನು ತುರುಕುವುದು ಇತ್ಯಾದಿ ಮಾಡುತ್ತಾರೆ. ಇವೆಲ್ಲವೂ ಬಹಳ ಅಪಾಯಕರವಾದುದು. ಏಕೆಂದರೆ ಕಿವಿಯ ಹರೆಯು, ಬಹಳ ಸೂಕ್ಷ್ಮಗ್ರಾಹಿಯಾದ, ಎಳೆತದಲ್ಲಿರುವ ಪೊರೆಯಾಗಿದೆ. ಆದ್ದರಿಂದ ಸುಲಭವಾಗಿ ಹಾನಿಯುಂಟಾಗುವ ಸಾಧ್ಯತೆಯಿದೆ. ಕಿವಿಯ ಬಳಿ ಹೊಡೆತ ತಿಂದ ಅನೇಕ ಮಕ್ಕಳು, ಶಾಶ್ವತವಾಗಿ, ಕಿವಿಯ ಹರೆಯನ್ನು ಕಳೆದುಕೊಂಡು, ಕಿವುಡರಾಗಿರುತ್ತಾರೆ.

## ಕಣ್ಣುಗಳು

ಸ್ಕೌಟುಗಳಿಗೆ ವಿಶೇಷವಾಗಿ ದೃಷ್ಟಿ ಶಕ್ತಿಯು ಚೆನ್ನಾಗಿರಬೇಕು. ಬಹಳ ದೂರ ನೋಡುವಂತಿರಬೇಕು. ದೂರದಲ್ಲಿರುವ ವಸ್ತುವಿಶೇಷಗಳನ್ನು ನೋಡಲು ಅಭ್ಯಾಸ ಮಾಡಿಕೊಳ್ಳುವುದರಿಂದ, ಅದು ಬಲಪಡುತ್ತದೆ. ನೀವು ಚಿಕ್ಕವರಾಗಿದ್ದಾಗ ನಿಮ್ಮ ಕಣ್ಣುಗಳನ್ನು ಆದಷ್ಟೂ ರಕ್ಷಿಸಿಕೊಳ್ಳಬೇಕು. ಮಂದ ಬೆಳಕಿನಲ್ಲಿ ಓದಬಾರದು. ಹಗಲು ಹೊತ್ತು ಓದಿ ಬರೆದು ಮಾಡಲು ಬೆಳಕು ಪಕ್ಕದಿಂದ ಬೀಳುವ ರೀತಿಯಲ್ಲಿ ಕುಳಿತುಕೊಳ್ಳಬೇಕು. ಎದುರು ಬೆಳಕಾದರೆ ಕಣ್ಣಿಗೆ ಹೆಚ್ಚು ಆಯಾಸವಾಗುತ್ತದೆ.

ಬೆಳೆಯುವ ಬಾಲಕರಲ್ಲಿ ಕಣ್ಣಿಗೆ ಆಯಾಸವಾಗುವುದು ಸಾಮಾನ್ಯ. ಇದು ಅವರಿಗೆ ತಿಳಿಯುವುದಿಲ್ಲ. ಕಣ್ಣಿಗೆ ಆಯಾಸವಾದಾಗ, ಆಗಾಗ್ಗೆ ತಲೆನೋವು ಬರುತ್ತದೆ. ಬಾಲಕರು ಹುಬ್ಬು ಗಂಟಿಕ್ಕಿಕೊಂಡರೆ, ಮುಖ ಸಿಂಡರಿಸಿಕೊಂಡರೆ, ಅದು ಸಾಮಾನ್ಯವಾಗಿ ಕಣ್ಣಿಗೆ ಆಯಾಸವಾಗಿರುವುದನ್ನು ಸೂಚಿಸುತ್ತದೆ.

ದೃಷ್ಟಿ ಶಕ್ತಿಯು ಚೆನ್ನಾಗಿರುವುದರ ಜೊತೆಗೆ ನೋಡಿದ ವಸ್ತುಗಳ ಬಣ್ಣವನ್ನು ಹೇಳಲು ಸ್ಕೌಟ್‌ಗೆ ಬರುತ್ತದೆ. ಕೆಲವು ಬಾಲಕರು ಬಣ್ಣಗುರುಡಿನಿಂದ (Colour blindness) ಅತೀವವಾಗಿ ಹಿಂಸೆಪಡುತ್ತಾರೆ. ಅವರಲ್ಲಿ ಸಂತೋಷವು ಮಾಯವಾಗುತ್ತದೆ. ಕೆಲವು ರೀತಿಯ ವೃತ್ತಿ ವ್ಯಾಪಾರಗಳಿಗೆ ಅವರು ಉಪಯೋಗ ವಿಲ್ಲದವರಾಗುತ್ತಾರೆ. ಉದಾ: ರೈಲ್ವೆ ಸಿಗ್ನಲ್ ಮೆನ್, ಎಂಜಿನ್ ಚಾಲಕರು ಮತ್ತು ನಾವಿಕರು, ಹಸಿರು ಮತ್ತು ಕೆಂಪು ಬಣ್ಣಗಳ ವ್ಯತ್ಯಾಸವನ್ನು ಹೇಳಲಾಗದಿದ್ದರೆ ಅವರು ಆ ವೃತ್ತಿಗಳಿಗೆ ನಾಲಾಯಕ್ಕು.

ಕೆಲವು ಸಂದರ್ಭಗಳಲ್ಲಿ ಈ ಕೊರತೆಯನ್ನು ನೀಗಿಸಬಹುದು. ನೀವು ಬಣ್ಣಗುರುಡರೆಂದೆನಿಸಿದರೆ, ವಿವಿಧ ಬಣ್ಣಗಳ ಕಾಗದ ಮತ್ತು ಉಣ್ಣೆಯನ್ನು ತಂದು, ಅವುಗಳಲ್ಲಿ ನಿಮಗೆ ಕೆಂಪು, ನೀಲಿ, ಹಳದಿ, ಹಸಿರು ಇತ್ಯಾದಿ ಎಂದು ತೋಚಿದ ಬಣ್ಣಗಳನ್ನು ಆರಿಸಿ ಹೇಳಿ. ನಿಮ್ಮ ಜೊತೆಯಲ್ಲಿರುವವರು ಅದು ಸರಿಯೋ, ತಪ್ಪೋ ಹೇಳಲಿ. ತಪ್ಪಾದರೆ ಸರಿಪಡಿಸಲಿ. ಹೀಗೆ ಪ್ರಯತ್ನಿಸುತ್ತಾ ಹೋದರೆ ನೀವಾಗಿ ಉತ್ತಮಗೊಳ್ಳುತ್ತಾ ಹೋಗುತ್ತೀರಿ. ಕೊನೆಗೆ ಬಣ್ಣಗಳನ್ನು ಗುರುತಿಸುವುದರಲ್ಲಿ ನಿಮಗೆ ಯಾವ ರೀತಿಯ ಕಷ್ಟವೂ ಇರುವುದಿಲ್ಲ.

## ಹಲ್ಲುಗಳು

ಸೈನ್ಯಕ್ಕೆ ಸೇರುವ ಉದ್ದೇಶದಿಂದ ಒಬ್ಬ ವ್ಯಕ್ತಿಯು ಆರ್ಮಿ ರೆಕ್ರೂಟ್‌ಮೆಂಟ್ ಆಫೀಸಿಗೆ ಬಂದನು. ಅವನು ಸಾಕಷ್ಟು ಬಲಶಾಲಿಯೂ, ದೇಹದಾರ್ಢ್ಯವುಳ್ಳವನೂ ಆಗಿದ್ದನು. ಅವನ ಹಲ್ಲುಗಳನ್ನು ಪರೀಕ್ಷಿಸಿದ ಡಾಕ್ಟರುಗಳು ಅವು ಬಹಳ ಹೀನ ಸ್ಥಿತಿಯಲ್ಲಿರುವುದನ್ನು ಕಂಡರು. ಆ ಬಳಿಕ ಅವನನ್ನು ಸೈನ್ಯಕ್ಕೆ ಸೇರಿಸಿಕೊಳ್ಳಲು ಆಗುವುದಿಲ್ಲವೆಂದು ಹೇಳಿದರು. ಅದಕ್ಕವನು "ಸರ್, ಇದು ಅನ್ಯಾಯ, ನಾನೇನೂ ಶತ್ರುಗಳನ್ನು ಕೊಂದು ತಿನ್ನಬೇಕಾಗಿಲ್ಲ, ಅಲ್ಲವೇ?" ಎಂದು ಉತ್ತರಿಸಿದನು.

ಒಳ್ಳೆಯ ಹಲ್ಲುಗಳು ನೀವು ಚಿಕ್ಕವರಾಗಿದ್ದಾಗ ಹೇಗೆ ಅವುಗಳನ್ನು ನೋಡಿಕೊಂಡಿದ್ದೀರಿ? ಎಂಬುದನ್ನು ಅವಲಂಬಿಸಿರುತ್ತದೆ. ಎಂದರೆ ನೀವು ಅವುಗಳನ್ನು ಎಚ್ಚರಿಕೆಯಿಂದ ಪರಿಶುದ್ಧವಾಗಿಟ್ಟುಕೊಳ್ಳಬೇಕು. ಬೆಳಗ್ಗೆ ಎದ್ದ ಕೂಡಲೇ ಮತ್ತು ರಾತ್ರಿ ಮಲಗುವುದಕ್ಕೆ ಮುಂಚೆ ಪೇಸ್ಟ್ ಮತ್ತು ಬ್ರಷ್‌ನಿಂದ ಹಲ್ಲುಗಳ ಮುಂಭಾಗ, ಹಿಂಭಾಗಗಳನ್ನು ಉಜ್ಜಿ ತೊಳೆಯಿರಿ. ಪ್ರತಿಬಾರಿ ಊಟ, ತಿಂಡಿ ಆದ ಮೇಲೂ ನೀರಿನಿಂದ ಬಾಯಿ ಮುಕ್ಕಳಿಸಿ.



**1.5 ಸೆಂ.ಮೀ. ಉದ್ದದ ಕಡ್ಡಿಯ ಕೊನೆಯನ್ನು ದಾರದಾರವಾಗಿ ಬಿಡಿಸಿ ಸರಳವಾದ ಟೂತ್ ಬ್ರಷ್ ಮಾಡಿಕೊಳ್ಳಬಹುದು.**

ಸ್ಕೌಟುಗಳಿಗೆ ಕಾಡಿನಲ್ಲಿ ಟೂತ್ ಬ್ರಷ್ ಎಲ್ಲಿ ಬರಬೇಕು? ಅವರು ಒಣಗಿದ ಕಡ್ಡಿಗಳನ್ನು ತೆಗೆದುಕೊಂಡು ಕೊನೆಯಲ್ಲಿ ನಾರುಬಿಡಿಸಿ, ಟೂತ್ ಬ್ರಷ್ ಮಾಡಿಕೊಳ್ಳುತ್ತಾರೆ.

**ಟಿಪ್ಪಣಿ:** ನಮ್ಮ ಹಳ್ಳಿಗಳ ಕಡೆ, ಬೇವು, ಆಲದ ಮರ, ಮಾವು ಇವುಗಳ ಕಡ್ಡಿಗಳ ಕೊನೆಯಲ್ಲಿ ನಾರುಬಿಡಿಸಿ (ದಾರ ದಾರವಾಗಿ ಬಿಡಿಸಿ) ಹಲ್ಲುಜ್ಜುವುದನ್ನು ಇಲ್ಲಿ ಉಲ್ಲೇಖಿಸಬಹುದು.

## ಉಗುರುಗಳು

ಸೈನಿಕರೂ, ಇತರ ಜನರೂ ಕೆಲವು ವೇಳೆ ತಮ್ಮ ಪಾದಗಳ ಹೆಬ್ಬೆರಳುಗಳ ಉಗುರುಗಳು ಪಕ್ಕದ ಬೆರಳಿಗೆ ಒತ್ತುತ್ತಿರುವುದರಿಂದ ತೊಂದರೆಗೊಳಗಾಗುತ್ತಾರೆ. ಸಾಮಾನ್ಯವಾಗಿ ಹೆಬ್ಬೆರಳುಗಳ ಉಗುರು ಬೆಳೆಯುತ್ತಾ ಹೋಗಿ, ಬೂಟುಗಳ

ಒತ್ತಡದಿಂದ ಮುಂದೆ ಬೆಳೆಯಲಾಗದೆ, ಪಕ್ಕಕ್ಕೆ ಬೆಳೆಯಲಾರಂಭಿಸುತ್ತದೆ. ಇದರಿಂದ ನೋವು ಪ್ರಬಲಿಸಿ, ಬೂಟ್, ಷೂ ಧರಿಸಲು ತ್ರಾಸದಾಯಕವಾಗುತ್ತದೆ. ಆದ್ದರಿಂದ ಸ್ಕೌಟುಗಳು ಎಚ್ಚರಿಕೆವಹಿಸಿ ತಮ್ಮ ಕಾಲಬೆರಳುಗಳ ಉಗುರುಗಳನ್ನು ವಾರಕ್ಕೊಮ್ಮೆ ಕತ್ತರಿಸಿಕೊಳ್ಳಬೇಕು. ಮುಂಭಾದಲ್ಲಿ ಚೌಕವಾಗಿ ಕತ್ತರಿಸಬೇಕು. ಗುಂಡಗೆ ಮಾಡಬಾರದು. ಹರಿತವಾಧ ಉಗುರು ಕತ್ತರಿಯನ್ನೇ ಉಪಯೋಗಿಸಬೇಕು.

ಕೈಬೆರಳುಗಳ ಉಗುರುಗಳನ್ನೂ ಅದೇ ರೀತಿ, ವಾರಕ್ಕೊಮ್ಮೆ ಹರಿತವಾದ ಉಗುರು ಕತ್ತರಿಯಿಂದ ಕತ್ತರಿಸಬೇಕು.



## ಅಧ್ಯಾಯ–29

# ದಿಕ್ಕುಗಳು ಮತ್ತು ಆ ಬಗ್ಗೆ ತಿಳುವಳಿಕೆ

**ದಿಕ್ಸೂಚಿ:**

ಸ್ಕೌಟುಗಳಿಗೆ ದಿಕ್ಕುಗಳ ಬಗ್ಗೆ ತಿಳುವಳಿಕೆ ಇರಬೇಕು. ದಿಕ್ಸೂಚಿಯಲ್ಲಿ ಕಾಣಿಸಿರುವ 16 ದಿಕ್ಕುಗಳನ್ನು ಪೂರ್ಣವಾಗಿ ತಿಳಿದಿರಬೇಕು ಮತ್ತು ಹೆಸರಿಸಲು ಬರಬೇಕು. ದಿಕ್ಸೂಚಿಯಲ್ಲಿ ಉತ್ತರ, ದಕ್ಷಿಣ, ಮತ್ತು ಪೂರ್ವ, ಪಶ್ಚಿಮಗಳು ನಾಲ್ಕು ಮುಖ್ಯ ಬಿಂದುಗಳು. ಉಳಿದ ಎಲ್ಲಾ ದಿಕ್ಕುಗಳೂ ಇವುಗಳಿಂದ ತಮ್ಮ ಹೆಸರನ್ನು ಪಡೆಯುತ್ತವೆ. ಮುಖ್ಯ ಬಿಂದುಗಳನ್ನು ಸೂರ್ಯನ ಸಹಾಯದಿಂದಲೂ, ಆಯಸ್ಕಾಂತೀಯ ದಿಕ್ಸೂಚಿಯ ಸಹಾಯದಿಂದಲೂ ಕಂಡುಕೊಳ್ಳಬಹುದು.

ಬೆಳಗಿನ ವೇಳೆ ಉದಯ ಸೂರ್ಯನಿಗೆ (ಎಂದರೆ ಪೂರ್ವಕ್ಕೆ) ಮುಖ ಮಾಡಿ ನಿಂತರೆ, ಬಲಗಡೆಗೆ ದಕ್ಷಿಣ ದಿಕ್ಕು, ಎಡಗಡೆಗೆ ಉತ್ತರ ದಿಕ್ಕು ಮತ್ತು ಹಿಂಭಾಗಕ್ಕೆ ಪಶ್ಚಿಮ ದಿಕ್ಕು ಇರುತ್ತದೆ.

ಆಯಸ್ಕಾಂತೀಯ ದಿಕ್ಸೂಚಿಯು ಉತ್ತರ ದಿಕ್ಕನ್ನು ಕಂಡುಕೊಳ್ಳಲು ಸಹಾಯವಾಗುತ್ತದೆ. ಈ ದಿಕ್ಸೂಚಿಯಲ್ಲಿ ಅಯಸ್ಕಾಂತೀಯ ಮುಳ್ಳು ತಿರುಗು ಗೂಟದ ಮೇಲೆ, ಸುಲಭದಲ್ಲಿ ತಿರುಗುವಂತೆ, ತೇಲಿಕೆಯ ರೀತಿಯಲ್ಲಿ ಇರುತ್ತದೆ. ಹಾಗಾಗಿ ದಿಕ್ಸೂಚಿಯನ್ನು ಹೇಗೆ ತಿರುಗಿಸಿದರೂ ಅದು ಉತ್ತರ ದಕ್ಷಿಣವಾಗಿಯೇ ನಿಲ್ಲುತ್ತದೆ. ದಿಕ್ಸೂಚಿಯನ್ನು ಮಟ್ಟವಾದ ಕ್ಷೇತ್ರದ ಮೇಲಿಟ್ಟಾಗ, ಮುಳ್ಳು ತಿರುಗಿ, ಅಲುಗಾಡಿ, ಒಂದು ಸ್ಥಿಮಿತಕ್ಕೆ ಬಂದು ನಿಲ್ಲುತ್ತದೆ. ಆಗ ಅದರ ಉತ್ತರದ (N) ಗುರುತಿರುವ ತುದಿಯು ಉತ್ತರ ದಿಕ್ಕನ್ನೂ, ದಕ್ಷಿಣದ (S) ಗುರುತಿನ ತುದಿಯು ದಕ್ಷಿಣ ದಿಕ್ಕನ್ನೂ ಸೂಚಿಸುತ್ತದೆ. ನಾವು ಉತ್ತರಾಭಿಮುಖವಾಗಿ, ನಿಂತರೆ, ನಮ್ಮ ಬಲಗಡೆಗೆ ಪೂರ್ವದಿಕ್ಕೂ ಎಡಗಡೆಗೆ ಪಶ್ಚಿಮದಿಕ್ಕೂ ಬರುತ್ತವೆ. ಈಗ ನಾಲ್ಕು ಮುಖ್ಯ ದಿಗ್ಬಿಂದುಗಳು (ಕಾರ್ಡಿನಲ್ ಪಾಯಿಂಟ್ಸ್) ಸಿಕ್ಕಿದಂತಾಯಿತು. ಈ ನಾಲ್ಕು ಬಿಂದುಗಳ ಜೊತೆಗೆ ಮತ್ತೆ ನಾಲ್ಕು ಬಿಂದುಗಳು ದೊರಕುತ್ತವೆ.




ಉತ್ತರಕ್ಕೂ, ಪೂರ್ವಕ್ಕೂ ಮಧ್ಯೆ ಈಶಾನ್ಯ (ಉತ್ತರ ಪೂರ್ವ ದಿಕ್ಕು); ದಕ್ಷಿಣಕ್ಕೂ-ಪೂರ್ವಕ್ಕೂ ಮಧ್ಯೆ ಆಗ್ನೇಯ (ದಕ್ಷಿಣ ಪೂರ್ವದಿಕ್ಕು); ದಕ್ಷಿಣಕ್ಕೂ, ಪಶ್ಚಿಮಕ್ಕೂ ಮಧ್ಯೆ ನೈರುತ್ಯ (ದಕ್ಷಿಣ ಪಶ್ಚಿಮ ದಿಕ್ಕು) ಮತ್ತು ಉತ್ತರಕ್ಕೂ, ಪಶ್ಚಿಮಕ್ಕೂ ಮಧ್ಯೆ ವಾಯುವ್ಯ (ಉತ್ತರ ಪಶ್ಚಿಮ ದಿಕ್ಕು) ಇರುತ್ತವೆ. ಈಗ ನಮಗೆ ಒಟ್ಟು ಎಂಟು ದಿಕ್ಕುಗಳು ದೊರಕಿದಂತಾಯಿತು. ಈ ಎಂಟು ದಿಕ್ಕುಗಳೂ ಮುಖ್ಯ ದಿಗ್ಬಿಂದುಗಳೇ/ ಇದೇ ರೀತಿಯಲ್ಲಿ ಮೊದಲ ನಾಲ್ಕು ಬಿಂದುಗಳಿಗೂ ಬಳಿಕದ ನಾಲ್ಕು ಬಿಂದುಗಳಿಗೂ ಮಧ್ಯೆ ಮತ್ತೆ ಎಂಟು ದಿಕ್ಕುಗಳು ದೊರಕುತ್ತದೆ, ಪ್ರದಕ್ಷಿಣವಾಗಿ

(1) ಉತ್ತರಕ್ಕೂ ಈಶಾನ್ಯಕ್ಕೂ ಮಧ್ಯೆ ಉ.ಈ. (ಉ.ಉ.ಪೂ;) (2) ಈಶಾನ್ಯಕ್ಕೂ ಪೂರ್ವಕ್ಕೂ ಮಧ್ಯೆ ಪೂ.ಈ. (ಪೂ.ಉಪೂ.) (3) ಪೂರ್ವಕ್ಕೂ, ಆಗ್ನೇಯಕ್ಕೂ ಮಧ್ಯೆ; ಪೂಆ; (ಪೂದಆ); (4) ಆಗ್ನೇಯಕ್ಕೂ ದಕ್ಷಿಣಕ್ಕೂ ಮಧ್ಯೆ ದಆ (ದ ದಪೂ.) (5) ದಕ್ಷಿಣಕ್ಕೂ ನೈರುತ್ಯಕ್ಕೂ ಮಧ್ಯೆ ದನೈ (ದ ದಪ); (6) ನೈರುತ್ಯಕ್ಕೂ ಪಶ್ಚಿಮಕ್ಕೂ ಮಧ್ಯೆ ಪನೈ (ಪದಪ); (7) ಪಶ್ಚಿಮಕ್ಕೂ ವಾಯುವ್ಯಕ್ಕೂ ಮಧ್ಯೆ ಪವಾ (ಪಉಪ); (8) ವಾಯುವ್ಯಕ್ಕೂ ಉತ್ತರಕ್ಕೂ ಮಧ್ಯೆ ಉವಾ (ಉ ಉಪ).

ಈ 16 ದಿಕ್ಕುಗಳನ್ನು ಕೋನಗಳ ಮೂಲಕ ತಿಳಿಸುವುದು ಅನುಕೂಲಕರ ವಾಗಿರುತ್ತದೆ. ಉತ್ತರ $0^0$; ಉತ್ತರ ಈಶಾನ್ಯ $22.5^0$; ಈಶಾನ್ಯ $45^0$; ಪೂರ್ವ ಈಶಾನ್ಯ $67.5^0$; ಪೂರ್ವ $90^0$; ಪೂರ್ವ ಆಗ್ನೇಯ $112.5^0$; ಆಗ್ನೇಯ $135^0$;

ದಕ್ಷಿಣ ಆಗ್ನೇಯ 157.5°; ದಕ್ಷಿಣ 180°; ದಕ್ಷಿಣ ನೈರುತ್ಯ 202.5°; ಪಶ್ಚಿಮ ನೈರುತ್ಯ 247.5°; ಪಶ್ಚಿಮ 270°; ಪಶ್ಚಿಮ ವಾಯುವ್ಯ 292.5°; ವಾಯುವ್ಯ 315°; ಉತ್ತರ ವಾಯುವ್ಯ 337.5°; ಉತ್ತರ 360°/0°.

## ದಿಕ್ಸೂಚಿಯ ಬೇರಿಂಗ್
### (ಸ್ಥಾನಸಂ, ಸ್ಥಾನ ಸಂಬಂಧ ಕೋನಗಳು)

ಒಂದು ನಿಗದಿತ ಗೆರೆಯ (ಉದಾ: ನೈಜ ಉತ್ತರ; ನ.ಜಾಲ ಉತ್ತರ; ಅಯಸ್ಕಾಂತೀಯ ಉತ್ತರ.) ಮೇಲಿನ ಬಿಂದುವಿನಿಂದ, ಪ್ರದಕ್ಷಿಣವಾಗಿ, ಆಶಿತ ಸ್ಥಳ / ಗೆರೆಯವರೆಗೆ, ಅಳತೆ ಮಾಡಿದ ಕೋನಕ್ಕೆ ಸ್ಥಾನಸಂಬಂಧ ಕೋನ (ಸ್ಥಾಸಂ.ಕೋ) ಬೇರಿಂಗ್ ಎಂದು ಹೇಳುತ್ತಾರೆ.




ಉದಾ: ಒಬ್ಬ ವ್ಯಕ್ತಿಯು 'ರ' ಎಂಬಲ್ಲಿ, ನೈಜ ಉತ್ತರಾಭಿಮುಖವಾಗಿ ನಿಂತಿರುವುದಾಗಿ ಭಾವಿಸೋಣ. ಆಗ ಅವನು ನೈಜ ಉತ್ತರ–ದಕ್ಷಿಣ ರೇಖೆಯ ಮೇಲೆ, 'ರ' ಎಂಬಲ್ಲಿ ನಿಂತು, ನೈಜ ಉತ್ತರವನ್ನು ನೋಡುತ್ತಿರುತ್ತಾನೆ. ಈಗ ಅವನು ಈ ನಿಲುಗಡೆಯಿಂದ ಪ್ರದಕ್ಷಿಣವಾಗಿ 'ಮ' ಎಂಬ ದೇವಾಲಯಕ್ಕೆ ಅಭಿಮುಖವಾಗುವವರೆಗೂ ತಿರುಗಿ ನಿಲ್ಲುತ್ತಾನೆ. ಇದರಿಂದ ಉಂಟಾಗುವ "ಉ–ರ–ಮ" ಕೋನವನ್ನು ಡಿಗ್ರಿಗಳಲ್ಲಿ ತಿಳಿಸಿದಾಗ, ಅದು 'ಮ' ದೇವಾಲಯದ ಸ್ಥಾನ ಸಂ. ಕೋ (ಬೇರಿಂಗ್ ಆಗುತ್ತದೆ).

ಹಾಗಾಗಿ ಅವನು 125° ತಿರುಗಿದ್ದರೆ, ದೇವಾಲಯದ ನೈಜ ಸ್ಥಾನ ಸಂ. ಕೋನವು 125° ಆಗುತ್ತದೆ.

ನೈಜ ಉತ್ತರದಿಂದ ತಿರುಗಿದ ಕೋನವು ನೈ ಸ್ಥಾನಸಂ. ಕೋನ: ನಕ್ಷಾ ಜಾಲ ಉತ್ತರದಿಂದ ತಿರುಗಿದ ಕೋನವು ನ.ಜಾ.ಸ್ಥಾ. ಸಂ.ಕೋನ: ಅಯಸ್ಕಾಂತೀಯ ಉತ್ತರದಿಂದ ತಿರುಗಿದ ಕೋನವು ಕಾಂತೀಯ ಸ್ಥಾ.ಸಂ.ಕೋನ –ಎಂದು ವ್ಯವಹರಿಸಲ್ಪಡುತ್ತದೆ.

ಮುನ್ನೋಟದಲ್ಲಿ ತೆಗೆದ ಕೋನವು, ಮುನ್ನಡೆ/ಮುನ್ನೋಟ ಸ್ಥಾ.ಸಂ.ಕೋನ ಎನಿಸುತ್ತದೆ.

ಹಾಗಲ್ಲದೆ ಸಂವೀಕ್ಷಕನು 'ರ' ಸ್ಥಳದಿಂದ ಹೊರಟು, ಮುನ್ನಡೆದು, 'ಮ' ದೇವಾಲಯವನ್ನು ಮುಟ್ಟಿ, ಅಲ್ಲಿಂದ ತಾನು ಮುಂಚೆ ನಿಂತಿದ್ದ 'ರ' ವರೆಗೆ ಕೋನವನ್ನು ತೆಗೆಯುವುದಾದರೆ, ಅದು ಹಿನ್ನಡೆ/ಹಿನ್ನೋಟ ಸ್ಥಾ.ಸಂ.ಕೋನ ಎನಿಸುತ್ತದೆ. ಹಿನ್ನೋಟ ಸ್ಥಾ.ಸಂ.ಕೋನವು, ಮುನ್ನಡೆದ ಜಾಡಿನಲ್ಲೇ ಹಿಂದಿರುಗಲು ಸಹಾಯವಾಗುತ್ತದೆ.

ಹಿನ್ನೋಟ ಸ್ಥಾ.ಸಂ.ಕೋನವನ್ನು ದಿಕ್ಸೂಚಿಯ ಮೂಲಕವೂ, ಲೆಕ್ಕಾಚಾರದ ಮೂಲಕವೂ ಕಂಡುಕೊಳ್ಳಬಹುದು. ಹಿ.ಸ್ಥಾ.ಸಂ.ಕೋನವನ್ನು ತಿಳಿಯಬೇಕಾದರೆ

(i) ಮು ಸ್ಥಾ.ಸಂ.ಕೋನವು $180^0$ ಕಡಿಮೆ ಇದ್ದರೆ, ಅದಕ್ಕೆ $180^0$ ಸೇರಿಸಬೇಕು.

(ii) ಮು ಸ್ಥಾ.ಸಂ.ಕೋನವು $180^0$ ಗಳಿಗೆ ಮೀರಿದ್ದರೆ, ಅದರಲ್ಲಿ $180^0$ ಕಳೆಯಬೇಕು.

ಒಂದು ನಿಗದಿತ ದೂರವಿರುವ, ಮೂಲ ರೇಖೆಯ, ಎರಡೂ ತುದಿಗಳಿಂದ, ಗಮನಿಸುತ್ತಿರುವ ಒಂದು ವಸ್ತುವನ್ನು ಗುರಿಯಾಗಿಟ್ಟುಕೊಂಡು, ಸ್ಥಾ.ಸಂ. ಕೋನಗಳನ್ನು ಗುರುತಿಸಿ ಅದನ್ನು ನಕ್ಷೆ ಮಾಡಿದಾಗ, ಆ ಸ್ಥಾ.ಸಂ.ಕೋನಗಳನ್ನು ಅಡ್ಡ ಸ್ಥಾ.ಸಂ.ಕೋನಗಳೆಂದು ಕರೆಯುತ್ತಾರೆ.

**ನೈಜ ಉತ್ತರವನ್ನು ಕಂಡುಹಿಡಿಯುವ ವಿಧಾನ:**

(1) **ಸೂರ್ಯನು ಪ್ರಕಾಶಿಸುತ್ತಿದ್ದರೆ ನಿಜವಾದ ಉತ್ತರವನ್ನು ಗಡಿಯಾರದ ಸಹಾಯದಿಂದ ಕಂಡುಹಿಡಿಯಬಹುದು.**



ನೆಲದ ಮೇಲೆ (ಮೇಜಿನ ಮೇಲೆ) ಮಟ್ಟವಾದ ಕ್ಷೇತ್ರದಲ್ಲಿ ಗಂಟೆ ಮುಳ್ಳನ್ನು ಸೂರ್ಯನ ಕಡೆಗೆ ತಿರುಗಿ ನೇರವಾದ ಕಡ್ಡಿ ಪೆನ್ಸಿಲನ್ನು ಗಂಟೆ ಮುಳ್ಳಿನ ತುದಿಯ ಮೇಲೆ ನಿಲ್ಲಿಸಿ. ಈಗ ಗಂಟೆ ಮುಳ್ಳು ಮತ್ತು ಪೆನ್ಸಿಲ್/ಕಡ್ಡಿ ನೆರಳು ಒಂದೇ ಆಗುವಂತೆ ಮುಳ್ಳನ್ನು ತಿರುಗಿಸಿ. ಈಗ ಗಂಟೆ ಮುಳ್ಳಿಗೂ, ಗಡಿಯಾರದ ಮೇಲಿನ 12 ಸಂಖ್ಯೆಗೂ ನಡುವಣ ಕೋನವನ್ನು ತೆಗೆದುಕೊಳ್ಳಿ. ಈ ಕೋನವನ್ನು ಅರ್ಧಕ್ಕೆ ಛೇದಿಸಿ ರೇಖೆಯನ್ನು ಹಾಕಿ. ಈ ರೇಖೆಯು ಉತ್ತರ ದಕ್ಷಿಣ ರೇಖೆ ಆಗಿರುತ್ತದೆ. 12 ಸಂಖ್ಯೆಯಿಂದ ದೂರವಿರುವ ಉತ್ತರ–ದಕ್ಷಿಣ ರೇಖೆಯ ತುದಿಯು ಉತ್ತರ ದಿಕ್ಕನ್ನು ಸೂಚಿಸುತ್ತದೆ. ಹತ್ತಿರವಿರುವ ತುದಿಯು ದಕ್ಷಿಣ ದಿಕ್ಕಿಗೆ ಇರುತ್ತದೆ.

(2) **ಮಟ್ಟವಾದ ನೆಲದ ಮೇಲೆ ಒಂದು ರೀತಿಯ ಉಪಕರಣವನ್ನು (Gadget) ಉಪಯೋಗಿಸಿ ಉತ್ತರ ದಿಕ್ಕನ್ನು ಹೇಳಬಹುದು.** ಸೂರ್ಯ ಪ್ರಕಾಶವಿರುವ ದಿನ ಬೆಳಗ್ಗೆ 10–11 ಗಂಟೆ ಸಮಯದಲ್ಲಿ ಒಂದು ನೇರವಾದ ಕೋಲನ್ನು ನೆಡಿ. ಉತ್ತರ ದಿಕ್ಕು ಇರಬಹುದೆಂದುಕೊಂಡ ಕಡೆಗೆ ಅದು ವಾಲಿರಲಿ. ಅದರ ಮೇಲ್ತುದಿಗೆ ಒಂದು ದಾರವನ್ನು ಕಟ್ಟಿ ದಾರದ ಕೆಳ ತುದಿಗೊಂದು ಸಣ್ಣ ಕಲ್ಲನ್ನು ಕಟ್ಟಿ, ಕಲ್ಲು ನೆಲಕ್ಕೆ ಮುಟ್ಟದೆ ನೇತಾಡುತ್ತಿರಬೇಕು. ಅಕಸ್ಮಾತ್ ಆ ಕಲ್ಲು ಕೆಳಗೆ ಬಿದ್ದರೆ/ಬಿದ್ದರೆ ಮುಟ್ಟಬಹುದಾದ ಬಿಂದುವನ್ನು ನೆಲದ ಮೇಲೆ ಗುರುತಿಸಿ. ಇದನ್ನು (ಸಿ) ಎನ್ನೋಣ.

ಈ ಉಪಕರಣದ ನೆರಳನ್ನು ಗುರುತಿಸಿ, (ಸಿ) ಬಿಂದುವನ್ನು ಆಧಾರವಾಗಿಟ್ಟುಕೊಂಡು, ದಾರದ ಸಹಾಯದಿಂದ ಒಂದು ಅರ್ಧ ಚಂದ್ರಾಕೃತಿಯನ್ನು ರಚಿಸಿ. ಈ ಅರ್ಧ ಚಂದ್ರಾಕೃತಿಯ ರೇಖೆಯ ಮೇಲೆ ದಾರದ ನೆರಳು ಬೀಳುವ ಬಿಂದುವನ್ನು "ಪಿ" ಎಂದು ಕರೆಯೋಣ. 2 ಗಂಟೆಯವರೆಗೆ ನೆರಳೂ ಸಣ್ಣಗಾಗುತ್ತಾ ಹೋಗುತ್ತದೆ. ಅಲ್ಲಿಂದ ಮುಂದೆ ದೊಡ್ಡದಾಗುತ್ತಾ ಹೋಗುತ್ತದೆ. ದಾರದ ನೆರಳು, ಅರ್ಧ ಚಂದ್ರ ರೇಖೆಯನ್ನು ಮುಟ್ಟುವ ಬಿಂದುವನ್ನು ಗುರುತಿಸಿ. ಇದನ್ನು "ಕ್ಯು" ಎನ್ನೋಣ. 'ಪಿ' ಮತ್ತು 'ಕ್ಯು' ಗಳನ್ನೂ ಸೇರಿಸಿ. ಈಗ 'ಸಿ' ಬಿಂದುವಿನಿಂದ, 'ಪಿ'–'ಕ್ಯು' ರೇಖೆಯ ಮಧ್ಯೆ ಹಾದು, ಒಂದು ರೇಖೆಯನ್ನು ಹಾಕಿ, ಮುಂದುವರೆಸಿ. ಈ ರೇಖೆಯು ನಿಜವಾದ ಉತ್ತರ ದಿಕ್ಕನ್ನು ಸೂಚಿಸುತ್ತದೆ.

(3) **ಅಯಸ್ಕಾಂತೀಯ ದಿಕ್ಸೂಚಿಯ ಸಹಾಯದಿಂದ ನಿಜವಾದ ಉತ್ತರ ದಿಕ್ಕನ್ನು ಹೇಳಬಹುದು.** ಸ್ಥಳೀಯವಾಗಿ ಆಯಸ್ಕಾಂತೀಯ ವ್ಯತ್ಯಾಸವನ್ನು ತಿಳಿದುಕೊಂಡರೆ, ಅಷ್ಟು ಡಿಗ್ರಿಗಳನ್ನು ಕೂಡಿ ಅಥವಾ ಕಳೆದು ನೈಜ ಉತ್ತರ ದಿಕ್ಕನ್ನು ಹೇಳಬಹುದು.

(4) **ನಕ್ಷತ್ರ ರಾಶಿಗಳ ಸಹಾಯದಿಂದಲೂ ನೈಜ ಉತ್ತರ ದಿಕ್ಕನ್ನು ಹೇಳಬಹುದು.** ಉದಾ: ಸಪ್ತರ್ಷಿ ಮಂಡಲ; ಕ್ಯಾಸಿಯೋಪಿಯಾ ಸಿಂಹಾಸನ; ಓರಿಯಾನ್ ಇತ್ಯಾದಿಗಳ ಸಹಾಯದಿಂದ ಉತ್ತರ ಧೃವ ನಕ್ಷತ್ರವನ್ನು ಕಂಡುಕೊಳ್ಳಬಹುದು. ಧೃವ ನಕ್ಷತ್ರವು ಸದಾಕಾಲ ನೈಜ (ನಿಜವಾದ) ಉತ್ತರ ದಿಕ್ಕಿನಲ್ಲಿರುತ್ತದೆ. ಧೃವನಕ್ಷತ್ರವನ್ನು ಗುರುತಿಸಿದರಾಯಿತು. ನೈಜ ಉತ್ತರ ದಿಕ್ಕಿಗೆ ಅಭಿಮುಖವಾದಂತಾಯಿತು.




**ಸಪ್ತರ್ಷಿ ಮಂಡಲದಲ್ಲಿ** ಏಳು ನಕ್ಷತ್ರಗಳಿವೆ. ಈ ನಕ್ಷತ್ರ ರಾಶಿಯನ್ನು ಇಂಗ್ಲೀಷ್‌ನಲ್ಲಿ 'ಗ್ರೇಟ್ ಬೇರ್' ಎಂದೂ "ಪ್ಲವ್" (ನೇಗಿಲು) ಎಂದೂ ಕರೆಯುತ್ತಾರೆ. ಈ ರಾಶಿಮಂಡಲದ ಮೊದಲೆರಡು ನಕ್ಷತ್ರಗಳು ತೋರು ನಕ್ಷತ್ರಗಳು, ಈ ಎರಡನ್ನೂ ಸೇರಿಸಿ, ಮುಂದುವರೆಸಿದರೆ, ಆ ಊಹಾ ರೇಖೆಯು, ಅವೆರಡರಂತರದ ನಾಲ್ಕರಷ್ಟು ದೂರದಲ್ಲಿ ಧೃವನಕ್ಷತ್ರವನ್ನು ಮುಟ್ಟುತ್ತದೆ.

**ಕ್ಯಾಸಿಯೋಪಿಯಾ ಸಿಂಹಾಸನದಲ್ಲಿ** 5 ನಕ್ಷತ್ರಗಳು ಇದ್ದು, ಅವು ಇಂಗ್ಲೀಷ್ ಅಕ್ಷರ ಮಾಲೆಯ M ಅಥವಾ W ಆಕಾರದಲ್ಲಿರುತ್ತದೆ. ಅದರೊಳಗಿನ ಕೋನಗಳು ಒಂದೇ ಆಗಿರದೆ ಹೆಚ್ಚು ಕಡಿಮೆ ಇರುತ್ತದೆ. ಹೆಚ್ಚಿರುವ ಕೋನವನ್ನು ಅರ್ಧಕ್ಕೆ ಛೇದಿಸಿ, ಮುಂದುವರೆಸುವ ಊಹಾ ರೇಖೆಯು ಧೃವ ನಕ್ಷತ್ರವನ್ನು ಮುಟ್ಟುತ್ತದೆ. ಅದನ್ನು ಹಾಗೆಯೇ ಮುಂದುವರೆಸಿ ಸಪ್ತರ್ಷಿ ಮಂಡಲದ ತೋರು ನಕ್ಷತ್ರಗಳನ್ನು ಸೇರಬಹುದು.




ಓರಿಯಾನ್ ನಕ್ಷತ್ರ ರಾಶಿಯು ಮಾನವ ದೇಹದ ಆಕಾರದಲ್ಲಿರುತ್ತದೆ. ಇದರ ತಲೆಯ ಭಾಗವು ಉತ್ತರ ದಿಕ್ಕಿಗಿರುತ್ತದೆ. ಕತ್ತಿಯ ಮೊನೆ ಹಾಗೂ ಪಾದಗಳ ಭಾಗವು ದಕ್ಷಿಣ ದಿಕ್ಕಿಗಿರುತ್ತದೆ.



ನಡುಪಟ್ಟಿಯ ಮಧ್ಯ ನಕ್ಷತ್ರಕ್ಕೂ, ತಲೆಯ ಭಾಗದ ಮಧ್ಯ ನಕ್ಷತ್ರಕ್ಕೂ ರೇಖೆಯನ್ನೆಳೆದರೆ, ಆ ರೇಖೆಯು ಉತ್ತರ ದಕ್ಷಿಣವಾಗಿದ್ದು, ಉತ್ತರ ದಿಕ್ಕು ತಲೆಯ ಕಡೆಗಿರುತ್ತದೆ.



## ಅಧ್ಯಾಯ-30

# ಹಗ್ಗದ ಕೌಶಲ

ಸ್ಕೌಟುಗಳಿಗೆ ಗಂಟುಗಳನ್ನು ಹಾಕಲು ಹೇಳಿಕೊಟ್ಟರೆ ಸಾಲದು. ಅವುಗಳನ್ನು ಪ್ರಾಯೋಗಿಕವಾಗಿ ಉಪಯೋಗಿಸುವ ಅವಕಾಶಗಳನ್ನು ಕಲ್ಪಿಸಬೇಕು.

ಹಗ್ಗಗಳ ಒಡನಾಟದ ಶೈಕ್ಷಣಿಕ ಮೌಲ್ಯವು ಅಪಾರವಾದುದು. ಅದರಿಂದ (i) ಸಂವೀಕ್ಷಣೆ, (ii) ಕೈಚಳಕ, (iii) ಜ್ಞಾಪಕ ಶಕ್ತಿ (iv) ಸೃಜನ ಶೀಲತೆ (v) ಮಿತವ್ಯಯ ಮತ್ತು (vi) ಕೈ ಮತ್ತು ಕಣ್ಣುಗಳ ಮಧ್ಯೆ ಸಮನ್ವಯತೆ, ಇವುಗಳಿಗೆ ಉತ್ತೇಜನ ದೊರಕುತ್ತದೆ ಮತ್ತು ಅವುಗಳು ಅಭಿವೃದ್ಧಿ ಹೊಂದುತ್ತವೆ.

ಹಗ್ಗಗಳನ್ನು ಪ್ರಕೃತಿ ಸಹಜವಾದ ಹಾಗೂ ಕೃತಕವಾದ ನಾರು/ನೂಲಿನಿಂದ ತಯಾರಿಸಲಾಗುತ್ತದೆ. ಪ್ರಕೃತಿ ಸಹಜವಾದ ನಾರು/ನೂಲುಗಳು ಎಂದರೆ ತೆಂಗು, ಸಣಬು, ಮನಿಲಾ, ಹತ್ತಿ, ಕತ್ತಾಳೆ ಮತ್ತು ಅಗಸೆ ಮುಂತಾದವು ಇದಕ್ಕೆ ಉದಾಹರಣೆ.

ನೈಲಾನ್, ಕಬ್ಬಿಣ ಇತ್ಯಾದಿ ಲೋಹ ಮೂಲ ಹಗ್ಗ, ಕಂಬಿ, ಸರಪಳಿಗಳು ಕೃತಕವಾದುವುಗಳು.

ಪ್ರಕೃತಿ ಸಹಜ ನಾರುಗಳನ್ನು ಸಣ್ಣ ಸಣ್ಣ ದಾರಗಳನ್ನಾಗಿ ತೆಗೆದು, ಅವುಗಳನ್ನು ಎದಿರು ಬದಿರು ಸುತ್ತಿ ಎಳೆಗಳನ್ನಾಗಿ ಮಾಡಬಹುದು. (ಏಕಮುಖವಾಗಿ ಸುತ್ತಿದರೆ ಅದು ದಾರವಾಗುತ್ತದೆ) ಎಳೆಗಳನ್ನು ಹೆಣೆ ಸುತ್ತಿ ಹಗ್ಗಗಳನ್ನಾಗಿ ಮಾರ್ಪಡಿಸಲಾಗುತ್ತದೆ. ಎದಿರು ಬದಿರು ಎಳೆತದ ಶಕ್ತಿಯಿರುವ ಎಳೆಗಳು ಒಂದಾಗಿರುವುದರಿಂದ ಹಗ್ಗವು ಶಕ್ತಿಯುತವಾಗಿ ಒಂದಾಗಿರುತ್ತದೆ. ಅವುಗಳನ್ನು ಜಾಗ್ರತೆವಹಿಸಿ ನೋಡಿಕೊಳ್ಳದಿದ್ದರೆ, ಹಗ್ಗಗಳಲ್ಲಿರುವ ಈ ಅಂತಶ್ಶಕ್ತಿಯು ಕುಗ್ಗುತ್ತದೆ.

ತುದಿಯಲ್ಲಿ ಎಳೆಗಳು ಬಿಚ್ಚಿಕೊಳ್ಳದಂತೆ, ಹಗ್ಗಗಳ ತುದಿಯನ್ನು ಭದ್ರಗೊಳಿಸಬೇಕು. ಹುರಿಸುತ್ತಬೇಕು (ವ್ಹಿಪ್ಪಿಂಗ್) ಅಥವಾ ಹಿಂದಕ್ಕೆ ಸುತ್ತಿ ಹೊಸೆಯಬೇಕು (ಬ್ಯಾಕ್ ಸ್ಪ್ಲೈಸ್) ಹೀಗೆ ಭದ್ರಗೊಳಿಸದೆ, ಎಳೆಗಳು ಬಿಚ್ಚಿಕೊಂಡರೆ, ಹಗ್ಗವು ಅಳಕವಾಗಿ ಅದರ ಶಕ್ತಿಯು ಹಾಳಾಗುತ್ತದೆ. ಸಾಮಾನ್ಯವಾಗಿ ಹುರಿ

ಸುತ್ತುವುದನ್ನು ಅನುಸರಿಸಲಾಗುತ್ತದೆ. ಇದು ಅನುಕೂಲಕರವೂ, ಹೌದು. ಹಿಂದಕ್ಕೆ ಸುತ್ತಿ ಹೊಸೆಯುವುದರಿಂದ ಹಗ್ಗದ ದಪ್ಪ ಹೆಚ್ಚುತ್ತದೆ. ಹಾಗಾಗಿ ಅದನ್ನು ಕಪಲಿ (ಪುಲ್ಲೀ)ಯೊಳಗೆ ತೂರಿಸಿ ಉಪಯೋಗಿಸಲು ಕಷ್ಟವಾಗುತ್ತದೆ.

ಒದ್ದೆಯಾದ ಅಥವಾ ತೇವಾಂಶವಿರುವ ಹಗ್ಗಗಳನ್ನು ಮಡಿಸಿ ಜೋಪಾನ ಮಾಡಬಾರದು. ಮಳೆಯಲ್ಲಿ ಅಥವಾ ಕೆರೆ ಕಟ್ಟೆಗಳಲ್ಲಿ ಉಪಯೋಗಿಸಿ ನೆನೆದ ಹಗ್ಗಗಳನ್ನು, ನೆರಳಿನಲ್ಲಿ ಪೂರಾ ಒಣಗಿಸಿ, ಆ ಬಳಿಕವೇ ಜೋಪಾನ ಮಾಡಬೇಕು. ಸೂರ್ಯನ ಶಾಖದಲ್ಲಿ ಒಣಗಿಸಬಾರದು. ಹಾಗೆ ಮಾಡಿದರೆ ಹಗ್ಗವು ಹಾಳಾಗುತ್ತದೆ.

ತೇವಾಂಶವು ಅಧಿಕವಾಗಿರುವ ಕೋಣೆಗಳಲ್ಲಿ ಹಗ್ಗಗಳನ್ನು ಜೋಪಾನ ಮಾಡಬಾರದು. ಅತಿ ಶಾಖವಿರುವ ಕೋಣೆಗಳಲ್ಲಿಯೂ ಅವುಗಳನ್ನು ಶೇಖರಿಸಬಾರದು. ಈ ಎರಡೂ ಪರಿಸ್ಥಿತಿಗಳಲ್ಲಿ ಹಗ್ಗವು ಬೇಗ ಹಾಳಾಗುತ್ತದೆ. ನೆನೆದ ಹಗ್ಗಗಳನ್ನು ಬೇಗ ಒಣಗಿಸಲು ಪ್ರಯತ್ನಿಸುವುದರಿಂದಲೂ ಹಗ್ಗವು ಬೇಗ ಹಾಳಾಗುತ್ತದೆ.

ಗಂಟುಗಳು, ತಿರುಚುಗಳನ್ನು ಹಾಗೆಯೇ ಬಿಡುವುದು, ಅವುಗಳು ಇದ್ದ ಹಾಗೆಯೇ ಎಳೆಯುವುದೂ ಮಾಡಿದರೆ ಹಗ್ಗಕ್ಕೆ ಒಳ್ಳೆಯದಲ್ಲ, ಜೋಪಾನ ಮಾಡುವ ಮುನ್ನ, ಎಚ್ಚರಿಕೆಯಿಂದ ಗಂಟುಗಳನ್ನು ಬಿಚ್ಚಿ, ತಿರುಚುಗಳನ್ನು ತೆಗೆದು, ಎಳೆತವು ಇಲ್ಲದಂತೆ ಮಾಡಿ, ಸುತ್ತಿ ಜೋಪಾನ ಮಾಡಬೇಕು.

ಹಗ್ಗಗಳನ್ನು ಯದ್ವಾತದ್ವಾ ರಾಶಿ ಹಾಕಬಾರದು. ಸುತ್ತಿದ ಹಗ್ಗಗಳನ್ನು ಒಪ್ಪವಾಗಿ ನೇತು ಹಾಕಬೇಕು. ಎಡಮುರಿ ಹಗ್ಗಗಳನ್ನು ಎಡಗಡೆಗೂ, ಬಲಮುರಿ ಹಗ್ಗಗಳನ್ನು ಬಲಗಡೆಗೂ ಸುತ್ತಬೇಕು.

ಗಂಟುಗಳನ್ನು ಕಲಿಯುವಾಗ, ಕಲಿಸುವಾಗ, ಸೂಕ್ತವಾದ ಉದ್ದ ಮತ್ತು ಗಾತ್ರವಿರುವ ಹಗ್ಗಗಳನ್ನು ಉಪಯೋಗಿಸಿ. ಹಗ್ಗವು, ಗಂಟುಗಳನ್ನು ಕಲಿಯುವ ಸ್ಕೌಟ್‌ನ ಕಿರುಬೆರಳು ಗಾತ್ರವಾದರೂ ಇರಬೇಕು. ಹೆಸರು ತಿಳಿಸುವ ಮುನ್ನ, ಗಂಟಿನ ಉಪಯೋಗವನ್ನು ತಿಳಿಸಿ. ಸ್ಕೌಟು ಕಲಿಸುವವರ ಜೊತೆ ಕುಳಿತು, ಗಂಟನ್ನು ಹಾಕವುದನ್ನೂ ಕಲಿಯಲಿ. ಮತ್ತೆ ಮತ್ತೆ ಗಂಟು ಹಾಕಿ ತೋರಿಸಿ ಕಲಿಸಿರಿ. ಜೊತೆಯಲ್ಲಿ ಕುಳಿತು ಕಲಿಯುವುದರಿಂದ, ಹಗ್ಗ ಮತ್ತು ಬೆರಳುಗಳ ಚಲನವಲನಗಳನ್ನು ಗಮನಿಸಿ, ಅದೇ ರೀತಿ ಮಾಡಲು, ಅನುಕೂಲವಾಗುತ್ತದೆ. ನಾವಿಕರು ಉಪಯೋಗಿಸುವ ಪದ ಜಾಲವನ್ನು [ಉದಾ: ಕುಣಿಕೆ (ಬೆಂಡ್) ಬಿಗಿತ (ಸೀಜ್), ಬಿಗಿಸು (ಮೇಕ್ ಫಾಸ್ಟ್)

ಸಡಿಲಿಸು (ಡೀಲೇ) ಮುಂತಾದವು] ಉಪಯೋಗಿಸಿದರೆ ಕಲಿಕೆಗೆ ಪೂರಕವಾಗಿರುತ್ತದೆ.

ಹಗ್ಗವು ಬಿಗಿತುಕೊಂಡು, ಸಡಿಲಿಸಲು ಕಷ್ಟವಾಗಿರುವ ಹಾಗಿದ್ದರೆ. ಎಳೆದರೆ ಬಿಚ್ಚಿಕೊಳ್ಳುವಂತಹ ಗಂಟುಗಳನ್ನು ಹಾಕಲು ಉಪಯೋಗಿಸುವ, ವಿವಿಧ ರೀತಿಗಳು ಹಾಗೂ ಉಪಾಯಗಳು ಮತ್ತು ಚಮತ್ಕಾರಗಳನ್ನು ತಿಳಿಸುವುದರಿಂದ, ಕಲಿಕೆಯ ಸ್ವಾರಸ್ಯಕತೆಯು ಹೆಚ್ಚುತ್ತದೆ. ಉದಾ: ದಾರಿಗಳ್ಳನ ಮಲಕುಗಳು.

ಹಗ್ಗಗಳನ್ನು ಆಳುದ್ದ (ಫ್ಯಾದಮ್ಸ್) ಅಥವಾ ಅಡಿಗಳಲ್ಲಿ ಅಳತೆ ಮಾಡಲಾಗುತ್ತದೆ, ಆಳುದ್ದ ಅಂದರೆ ಸಾಮಾನ್ಯವಾಗಿ ಆರು ಅಡಿಗಳು ಅಥವಾ ಕೈಗಳನ್ನು ಆಕಡೆ ಈ ಕಡೆ ನೇರವಾಗಿ ಚಾಚಿ ನಿಂತಾಗ ಬಲಗೈನ ಮಧ್ಯ ಬೆರಳು ತುದಿಯಿಂದ ಎಡಗೈನ ಮಧ್ಯ ಬೆರಳು ತುದಿಯ ವರೆಗಿನ ದೂರ/ಉದ್ದ.

'ಹಗ್ಗದ ಗಾತ್ರ' ಎಂದರೆ ಅದರೆ ಸುತ್ತಳತೆಯ 1/3 ಭಾಗವನ್ನು ಇಂಚುಗಳಲ್ಲಿ ಹೇಳುವುದು. ಉದಾ: ಹಗ್ಗದ ಸುತ್ತಳತೆ 3 ಇಂಚು ಇದ್ದರೆ, ಗಾತ್ರವು 1 ಇಂಚು ಆಗುತ್ತದೆ. ಹಗ್ಗದ ಗಾತ್ರವು 1 ಇಂಚು ಸುತ್ತಳತೆಗೆ, ಕಡಿಮೆ ಇದ್ದರೆ ಅದನ್ನು ಸಾಮಾನ್ಯವಾಗಿ ಎಳೆ/ದಾರ ಎನ್ನುತ್ತಾರೆ.

**ಕಟ್ಟುಗಳು: (Lashings)**

ದಂಡ/ಕಂಬ/ದಡಿ/ಕೋಲುಗಳನ್ನು ಸೇರಿಸಿ ಕಟ್ಟುವ ಹಗ್ಗವನ್ನು "ಕಟ್ಟುಹಗ್ಗ" ಎನ್ನುತ್ತಾರೆ. ಅದರ ಉದ್ದ, ಗಾತ್ರವು, ಸೇರಿಸಿ ಕಟ್ಟುವ ದಂಡ ಇತ್ಯಾದಿಗಳ ಉದ್ದ ಗಾತ್ರಗಳನ್ನು ಮತ್ತು ಉದ್ದೇಶವನ್ನು ಅವಲಂಬಿಸುತ್ತದೆ.

**ಕಟ್ಟು ಹಗ್ಗದ ಗಾತ್ರವನ್ನು ಹೇಗೆ ಹೇಳುವುದು?** ಉಪಯೋಗಿಸುವ ಕಂಬಗಳಲ್ಲಿ ಉದ್ದದ ಕಂಬದ ವ್ಯಾಸದ (ಡಯಾ ಮೀಟರ್) ಅಳತೆಯನ್ನು ಅಡಿಗಳಲ್ಲಿ ಕಂಡುಕೊಳ್ಳಿ. ಅದು ಕಟ್ಟು ಹಗ್ಗದ ಗಾತ್ರ ಅಥವಾ ವ್ಯಾಸದ ಅಳತೆಯನ್ನು ಇಂಚುಗಳಲ್ಲಿ ಕೊಡುತ್ತದೆ. ಉದಾ: ಕಂಬದ ಗಾತ್ರವು ಅರ್ಧ ಅಡಿ ಇದ್ದರೆ, ಕಟ್ಟು ಹಗ್ಗದ ಗಾತ್ರವು ಅರ್ಧ ಇಂಚು ಇರುತ್ತದೆ.

**ಕಟ್ಟು ಹಗ್ಗದ ಉದ್ದವನ್ನು ಹೇಗೆ ಹೇಳುವುದು?** ಉಪಯೋಗಿಸುವ ಕಂಬಗಳಲ್ಲಿ ಉದ್ದನೆಯ ಕಂಬದ ಗಾತ್ರವನ್ನು ಇಂಚುಗಳಲ್ಲಿ ಕಂಡುಕೊಂಡರೆ, ಅಷ್ಟು ಆಳುದ್ದದ ಹಗ್ಗವು ಬೇಕಾಗುತ್ತದೆ. ಉದಾ: ಉದ್ದದ ಕಂಬವು 2 ಇಂಚು ಗಾತ್ರವಿದ್ದರೆ ಕಟ್ಟು ಹಗ್ಗವು 2 ಆಳುದ್ದ ಎಂದರೆ 12 ಅಡಿಗಳು ಇರಬೇಕಾಗುತ್ತದೆ. ಎಂಟರ

ಆಕಾರದ ಕಟ್ಟು ಬಿಗಿಸುವಾಗ ಹಗ್ಗದ ಉದ್ದವು ಇನ್ನೂ ಸ್ವಲ್ಪ ಹೆಚ್ಚಾಗಿ ಇರಬೇಕಾಗುತ್ತದೆ.

**ಹಗ್ಗದ ಸುರಕ್ಷಿತ ಕಾರ್ಯನಿರ್ವಹಣಾ ಭಾರ (Safe working load)**

ಉಪಯೋಗಿಸುವಾಗ ಹಗ್ಗದ ಮೇಲೆ ಹೆಚ್ಚು ಭಾರ ಬೀಳುತ್ತದೆ ಮತ್ತು ಎಳೆತವು ಬೀಳುತ್ತದೆ. ಈ ಭಾರ ಮತ್ತು ಎಳೆತಗಳನ್ನು, ಹಗ್ಗವು ಎಷ್ಟರ ಮಟ್ಟಿಗೆ ತಡೆದುಕೊಳ್ಳಬಲ್ಲುದು? ಈ ಅಂಶವನ್ನು, ಮಾರ್ಗ ಕಲ್ಪನೆಯ ಯೋಜನೆಗಳನ್ನು ರೂಪಿಸಿ, ಕಾರ್ಯಗತ ಮಾಡುವಾಗ ಗಮನಿಸಬೇಕಾಗುತ್ತದೆ.

ಹಗ್ಗದ ಶಕ್ತಿಯು ಅದನ್ನು ತಯಾರಿಸಲು ಉಪಯೋಗಿಸುವ ನಾರು/ನೂಲಿನ ಮೇಲೆ ಆಧಾರಿತವಾಗಿರುತ್ತದೆ. ಎರಡನೆಯದಾಗಿ ಅದರ ಗಾತ್ರವೂ ಮುಖ್ಯ ಆಧಾರ ಅಂಶವಾಗಿರುತ್ತದೆ. ಮೂರನೆಯ ಆಧಾರಾಂಶವೆಂದರೆ ಹಗ್ಗದ ವಯಸ್ಸು.

ಹಬಾಕಾ/ಮನಿಲಾ ಹಗ್ಗವನ್ನು ("ಮನಿಲ್ಲಾ ಹೆಂಪ್") ಮ್ಯೂಸಾ ಟೆಕ್ಸ್ಟಿವಾ ಎಂಬ ಗಿಡದ ಎಲೆಗಳ ತಾಳುಗಳಿಂದ ತೆಗೆಯುವ ನಾರಿನಿಂದ ತಯಾರಿಸುತ್ತಾರೆ. ಈ ಸಸ್ಯವನ್ನು ಫಿಲಿಪೈನ್ಸ್, ಬೋರ್ನಿಯೋ ಮತ್ತು ಜಾವಾ-ಸುಮಾತ್ರ ದ್ವೀಪಗಳಲ್ಲಿ ಸಾಮಾನ್ಯವಾಗಿ ಕಾಣಬಹುದು. ಇದು ಶಕ್ತಿಯುತವಾದುದು.

ಸಾಮಾನ್ಯವಾಗಿ ಸಿಗುವ "ಹೆಂಪ್" ಹಗ್ಗವನ್ನು ಕೆನಾಬಿಸ್ ಸೆಟೈವಾ ಎಂಬ ಸಸ್ಯದಿಂದ ತೆಗೆದ ನಾರಿನಲ್ಲಿ ತಯಾರಿಸುತ್ತಾರೆ. ಭಾರತ ಮತ್ತು ಪರ್ಷಿಯಾ ದೇಶಗಳು ಈ ಸಸ್ಯದ ಮೂಲ ಪ್ರದೇಶಗಳಾಗಿವೆ. ಆದರೆ ಈಗ, ಈ ಸಸ್ಯವನ್ನು ಉಷ್ಣವಲಯ ಮತ್ತು ಸಮಶೀತೋಷ್ಣ ವಲಯದ ಬಹುತೇಕ ಪ್ರದೇಶಗಳಲ್ಲಿ ಬೆಳೆಸಲಾಗುತ್ತಿದೆ. ರಷ್ಯಾ ಮತ್ತು ಪೋಲೆಂಡ್‌ಗಳಲ್ಲಂತೂ ಇದನ್ನು ಹೇರಳವಾಗಿ ಬೆಳೆಸುತ್ತಾರೆ. ಫ್ರಾನ್ಸ್ ದೇಶದಲ್ಲಿ ಬೆಳೆಸುವ ಈ ಸಸ್ಯದ ನಾರಿನಿಂದ ತಯಾರಿಸುವ ಹಗ್ಗವು ಹೆಚ್ಚಿನ ಗುಣಮಟ್ಟದ್ದಾಗಿರುತ್ತದೆ. "ಇಟಾಲಿಯನ್ ಹೆಂಪ್" ಹಗ್ಗವು ಅತ್ಯಂತ ಹೆಚ್ಚಿನ ಗುಣಮಟ್ಟದ್ದಾಗಿದೆ. "ಸಾನ್ಸ್ ವೀರಾ ಜೇವ್ಲಾ ನಿಕಾಸಾ" ಎಂಬ ಸಸ್ಯದಿಂದ ತೆಗೆದ ನಾರಿನಿಂದ ತಯಾರಿಸುವ ಹಗ್ಗವನ್ನು "ಆಫ್ರಿಕನ್ ಹೆಂಪ್" ಎಂದು ಕರೆಯುತ್ತಾರೆ. ಇದು ಆಫ್ರಿಕಾ ಖಂಡದಲ್ಲೂ, ಇಂಡಿಯಾ ಮತ್ತು ಶ್ರೀಲಂಕಾಗಳಲ್ಲೂ ಕಂಡು ಬರುತ್ತದೆ.

ಅಮೇರಿಕಾ ಸಂಯುಕ್ತ ಸಂಸ್ಥಾನಗಳ ಕೆಂಟಕಿ ರಾಜ್ಯದಿಂದ 'ಅಮೆರಿಕನ್ ಹೆಂಪ್' ಬರುತ್ತದೆ. ಹೆಂಪ್‌ನಾರಿನ ತಡೆತದ ಶಕ್ತಿಯು ಉತ್ತಮ ಮಟ್ಟದ್ದು. ಆ ಕಾರಣ ಇತರ ರೀತಿಯ ಹಗ್ಗಗಳ ತಡೆತ ಶಕ್ತಿಯನ್ನು ಇದರೊಡನೆ ಹೋಲಿಸುತ್ತಾರೆ.

ಸುರಕ್ಷಿತ ಕಾರ್ಯನಿರ್ವಹಣಾ ಭಾರವನ್ನು (ಸುಕಾನಿಭಾ) [Safe working load= SWL] ಲೆಕ್ಕ ಹಾಕುವುದು ಹೀಗೆ: ಉದಾ: **ಹೆಂಪ್ ಹಗ್ಗ:** ಅದರ ಸುತ್ತಳತೆಯನ್ನು ವರ್ಗ (square) ಮಾಡಿ, ಬರುವ ಲಭ್ದವನ್ನು ದ್ವಿಗುಣಗೊಳಿಸಿ. ಈ ದ್ವಿಗುಣ ಸಂಖ್ಯೆಯನ್ನು "ಕೂಟ್ಸ್" ಎನ್ನುತ್ತಾರೆ. ಈಗ ಹಗ್ಗದ ಸುತ್ತಳತೆ 3 ಎನ್ನೋಣ. ಇದನ್ನು 'ವರ್ಗ' ಮಾಡಿದರೆ ಬರುವ ಸಂಖ್ಯೆ 9. ಇದನ್ನು ದ್ವಿಗುಣಗೊಳಿಸಿದರೆ 18 ಕೂಟ್ಸ್ ಬರುತ್ತದೆ. ಎಂದರೆ ಹಗ್ಗದ ಸು.ಕಾ.ನಿ.ಭಾ.ವು. 18 ಕೂಟ್ಸ್. ಹಗ್ಗದ ತಡೆತದ ಶಕ್ತಿ 1 ಕೂಟ್ಸ್ ಇದ್ದರೆ, ಅದು 1 ಹಂಡ್ರೆಡ್ ವೈಟ್ಸ್ ತೂಕವನ್ನು ಭರಿಸಬಲ್ಲದು. ಪ್ರಸ್ತುತ ಹಗ್ಗವು 18 ಕೂಟ್ಸ್ ಇರುವುದರಿಂದ ಅದು 18 ಹಂಡ್ರೆಡ್ ವೈಟ್ಸ್ ತೂಕವನ್ನು ಭರಿಸಬಲ್ಲದು. (1 ಹಂಡ್ರೆಡ್ ವೈಟ್ಸ್= 50.8 ಕೆಜಿ)

ಮನಿಲ್ಲಾ ಹಗ್ಗವು ಹೆಂಪ್ ಹಗ್ಗಕ್ಕಿಂತಲೂ ಶಕ್ತಿಯುತವಾದುದು. ಹತ್ತಿಯ (ನೂಲು) ಹಗ್ಗವು ಹೆಂಪ್ ಹಗ್ಗದ 2/3 ರಷ್ಟು ಮಾತ್ರ ಶಕ್ತಿಯುತವಾದುದು. ಸಣಬು ಹಗ್ಗವು (ಜೂಟ್=ಗೋಣಿ) ಹತ್ತಿ ಹಗ್ಗಕ್ಕಿಂತಲೂ ಕಡಿಮೆ ಶಕ್ತಿಯದು. ನೈಲಾನ್ ಹಗ್ಗವು ಹೆಂಪ್ ಹಗ್ಗದ 2 ರಷ್ಟು ಶಕ್ತಿಯುತವಾದುದು.

ಸು.ಕಾ.ನಿ.ಭಾ.ಕ್ಕಿಂತಲೂ ಹೆಚ್ಚು ಭಾರ ಬಿದ್ದರೆ ಹಗ್ಗವು ಹರಿಯುತ್ತದೆ. ಉದಾ: 3" ಹೆಂಪ್ ಹಗ್ಗದ ಮೇಲೆ 2 ಟನ್ ತೂಕ ಬಿದ್ದರೆ ಅದು ಹರಿಯುತ್ತದೆ. ಅದೇ ಗಾತ್ರದ ಮನಿಲ್ಲಾ ಹಗ್ಗವು 3 ಟನ್ ತೂಕ ಬಿದ್ದಾಗ ಹರಿಯುತ್ತದೆ. ಈ ರೀತಿ ಹರಿಯುವಿಕೆಗೆ, "ಹರಿಯುವ ಜಗ್ಗು" – (Breaking Strain) ಎನ್ನುತ್ತಾರೆ.

ಈ ಎಲ್ಲಾ ಅಂಕಿ ಸಂಖ್ಯೆಗಳೂ, ಹೊಸ, ಸುರಕ್ಷಿತ ಹಗ್ಗಗಳಿಗೆ ಅನ್ವಯಿಸುತ್ತದೆ.

ಹಗ್ಗಗಳ ಎಳೆತ, ಬಿಗಿತ, ಹಾಗೂ ಅವುಗಳ ಮೇಲೆ ಬೀಳುವ ಭಾರ ಇವುಗಳ ಬಗ್ಗೆ ಸದಾ ಎಚ್ಚರದಿಂದಿರಲು ಸಾಧ್ಯವಾಗಲಾರದು. ಆದರೆ ಸೂಕ್ತ ರೀತಿಯಲ್ಲಿ ಎಚ್ಚರದಿಂದಿರಲು ಈ ತಿಳುವಳಿಕೆಯು ಸಹಾಯ ಮಾಡುತ್ತದೆ. ಹೆಚ್ಚು ಎಳೆತ ಮತ್ತು ಭಾರಗಳು ಬೀಳುವ ಸಂದರ್ಭದಲ್ಲಿ ಏಟು ಬಿದ್ದಿರುವ (damaged) ಅಥವಾ ಅಲ್ಲಲ್ಲಿ ನೂಲು ಹರಿದಿರುವ ಹಳೆಯ ಹಗ್ಗಗಳನ್ನು ಉಪಯೋಗಿಸಬಾರದು. ಅಂತಹ ಹಳತಾದ ಹಗ್ಗಗಳು ಅಪಾಯಕಾರಿ. ಅಭ್ಯಾಸಗಳಿಗೆ ಮಾತ್ರ ಉಪಯೋಗಕ್ಕೆ ಬರುತ್ತದೆ.

**ಗಂಟುಗಳು ಮತ್ತು ಅವುಗಳ ಉಪಯೋಗ:**

ಗಂಟುಗಳನ್ನು ಹಾಕಬೇಕಾದರೆ ಮೂಲವಾದ ವಿವಿಧ 6 ಉದ್ದೇಶಗಳಿವೆ ಯೆಂದು ಸ್ಥೂಲವಾಗಿ ಹೇಳಬಹುದು.

1. ಒಂದೇ ಹಗ್ಗದ ಎರಡು ಕೊನೆಗಳನ್ನು ಜೋಡಿಸುವುದು
2. ಎರಡು ಹಗ್ಗಗಳನ್ನು ಒಟ್ಟು ಜೋಡಿಸುವುದು.
3. ಹಗ್ಗದಲ್ಲಿ ಕುಣಿಕೆ ಮಾಡಿಕೊಳ್ಳುವುದು
4. ಕಂಬ ಅಥವಾ ಬಳೆಗೆ ಬಿಗಿಸುವುದು
5. ತಾತ್ಕಾಲಿಕವಾಗಿ ಉದ್ದವನ್ನು ಕಡಿಮೆ ಮಾಡುವುದು.
6. ಹಗ್ಗದ ಕೊನೆಯು ಬಿಚ್ಚಿಕೊಳ್ಳದಂತೆ ಬಂಧಿಸುವುದು.

ಪ್ರಥಮ ಸೋಪಾನ ಸ್ಕೌಟು ಕಲಿಯುವ ಗಂಟುಗಳು ಈ ಉದ್ದೇಶಗಳಲ್ಲಿ, ಒಂದಲ್ಲ ಒಂದನ್ನು ಪೂರೈಸುತ್ತದೆ.

| **ಗಂಟಿನ ಹೆಸರು** | **ಉದ್ದೇಶ ಸಂಖ್ಯೆ** |
|---|---|
| ಸಮಗಂಟು | ... 1 |
| ಮೂಲೆ ಗಂಟು<br>ಬೆಸ್ತರ ಗಂಟು | ... 2 |
| ಕುಣಿಕೆ ಗಂಟು | ... 3 |
| ಕೊಟ್ಟಿಗೆ ಗಂಟು<br>ಸುತ್ತೊಂದೆರಡುಮಲುಕು ಗಂಟು | ... 4 |
| ಕಣಕಾಲು ಗಂಟು | ... 5 |
| ಹುರಿ ಸುತ್ತುವುದು (Whipping) | ... 6 ಕ್ಕೆ ಬದಲು ಮಾಡಬಹುದಾದುದು. |

**ಗಂಟುಗಳ ಉಪಯೋಗಗಳು:**

(1) **ಸಮಗಂಟು (Reef knot):** ಒಂದೇ ಹಗ್ಗದ ಕೊನೆಗಳನ್ನು ಕಟ್ಟುವುದಕ್ಕಾಗಿ ಉದಾ: ಪಾರ್ಸೆಲ್ ಕಟ್ಟುವಾಗ; ಪ್ರಥಮ ಚಿಕಿತ್ಸೆ- ಬ್ಯಾಂಡೇಜ್ ಕಟ್ಟುವುದಕ್ಕಾಗಿ.



ಎರಡು ಹಗ್ಗಗಳನ್ನು ಸೇರಿಸಲು ಇದನ್ನು ಉಪಯೋಗಿಸಬಾರದು. ಹಾಗೇನಾದರೂ ಮಾಡಿದಾಗ– ಗಾತ್ರದಲ್ಲಿ ವ್ಯತ್ಯಾಸವಿದ್ದರೆ, ಒಂದು ಹಗ್ಗವು ತೇವದಿಂದ ಕೂಡಿದ್ದರೆ, ಎಳೆತವು ಬಿದ್ದಾಗ ಅದು ಸುಲಭವಾಗಿ ಬಿಚ್ಚಿಕೊಂಡು ಬಿಡುತ್ತದೆ.

(2) **ಮೂಲೆ ಗಂಟು (Sheet bend):** ಎರಡು ಹಗ್ಗಗಳನ್ನು ಸೇರಿಸುವಾಗ ಈ ಗಂಟನ್ನು ಉಪಯೋಗಿಸಿದರೆ, ಹಗ್ಗವನ್ನು ಉದ್ದ ಮಾಡಿಕೊಂಡಂತಾಗುತ್ತದೆ. ಶಕ್ತಿಯುತವಾಗಿಯೂ ಇರುತ್ತದೆ.



(3) ಎರಡೂ ಹಗ್ಗಗಳು ಒಂದೇ ಗಾತ್ರದವಾಗಿದ್ದರೆ ಮೂಲೆಗಂಟು ಸಾಕು. ಹಾಗಲ್ಲದೆ ಗಾತ್ರಗಳಲ್ಲಿ ವ್ಯತ್ಯಾಸವಿದ್ದರೆ ದ್ವಿಗುಣೀಕೃತ ಮೂಲೆ ಗಂಟು **ಇಮ್ಮೂಲೆಗಂಟು (Double sheet bend)** ಬೇಕಾಗುತ್ತದೆ.



(4) ಈ ಇಮ್ಮೂಲೆ ಗಂಟಿಗೂ ಹೆಚ್ಚು ಶಕ್ತಿಯುತವಾದ ಗಂಟು ಎಂದರೆ **ಕ್ಯಾರಿಕ್ ಬೆಂಡ್ (carrick bend).**



(5) ಜಾರಿ ಹೋಗುವಂತಹ ಎರಡು ಹಗ್ಗಗಳನ್ನು ಸೇರಿಸಲು ಬೆಸ್ತರ ಗಂಟು **(Fisher man's knot)** ಹಾಕಬೇಕಾಗುತ್ತದೆ. ಈ ಗಂಟು ಶಕ್ತಿಯುತವಾಗಿದ್ದು ಎಲ್ಲಾ ರೀತಿಯ ಹಗ್ಗಗಳಲ್ಲೂ ಉಪಯೋಗಿಸಬಹುದು.



(6) **ಕೊಟ್ಟಿಗೆ ಗಂಟು (Clove Hitch):** ಇದನ್ನು ಕಂಬ ಅಥವಾ ಕಬ್ಬಿಣದ ಬಳೆಗಳಿಗೆ ಕಟ್ಟಲು ಉಪಯೋಗಿಸಲಾಗುತ್ತದೆ. ಕೊಟ್ಟಿಗೆ ಗಂಟು ಹಾಕಿದ ಮೇಲೂ ಸಹ ಒಂದು ಅರೆ ಗಂಟು ಹಾಕಿ ಮುಗಿಸಬೇಕಾಗುತ್ತದೆ.



(7) **ಸುತ್ತೊಂದೆರಡು ಮಲುಕು ಗಂಟು (Round turn two half hitches):** ಕಂಬ/ಕಬ್ಬಿಣದ ಬಳೆಗಳಿಗೆ ಹಗ್ಗವನ್ನು ಬಿಗಿಸಲು ಈ ಗಂಟನ್ನು ಹಾಕಲಾಗುತ್ತದೆ.



(8) **ಕಣಕಾಲು ಗಂಟು (Sheeps Shank):** ಇದನ್ನು ತಾತ್ಕಾಲಿಕವಾಗಿ ಹಗ್ಗದ ಉದ್ದವನ್ನು ಕಡಿಮೆ ಮಾಡಲೂ, ತಾತ್ಕಾಲಿಕವಾಗಿ ಶಕ್ತಿಯುತ ಮಾಡಲೂ



ಉಪಯೋಗಿಸಲಾಗುತ್ತದೆ. ಉಪಯೋಗಿಸಲಾಗುವ ಹಗ್ಗದಲ್ಲಿ ಏಟುಬಿದ್ದ ಅಥವಾ ಹರಿದ ಭಾಗಗಳು ಕಂಡುಬಂದರೆ ಈ ಗಂಟನ್ನು ಬಳಸಬೇಕಾಗುತ್ತದೆ.

(9) **ದಿಮ್ಮಿ ಗಂಟು (Timber hitch):** ಇದೊಂದು ಉಪಯುಕ್ತವಾದ ಗಂಟು. ಸರಳವಾದ, ಸುಲಭವಾದ, ಸಮರ್ಥವಾದ ಗಂಟುಗಳು ಹಲವಾರು ಇದ್ದರೂ, ಈ ಗಂಟಿನ ಸಾಮರ್ಥ್ಯವೇ ಹೆಚ್ಚು, ದಿಮ್ಮಿಯ (ಕಟ್ಟಿಗೆ, ತೊಲೆ, ದಡಿ ಇತ್ಯಾದಿ) ಸುತ್ತಲೂ ಒಂದು ಸುತ್ತು ಹಗ್ಗವನ್ನು ತಂದು ಹಿಡಿದಿರುವ ಭಾಗಕ್ಕೆ ಒಂದು ಸುತ್ತು ಹಿಂದಕ್ಕೆ ಹಾಕಿ. ಮತ್ತದೇ ಭಾಗಕ್ಕೆ ಕಡಿಮೆ ಎಂದರೂ 2–3 ಸುತ್ತು ಹಿಂದಕ್ಕೆ ಹಾಕಿ ಜಗ್ಗಬೇಕು ಅಷ್ಟೆ.



(10) **ಜೋಡು/ಉರುಳು ಗಂಟು/ (Rolling hitch):** ಇದನ್ನು ಹಗ್ಗಗಳನ್ನು ಜೋಡಿಸಲು ಉಪಯೋಗಿಸಲಾಗುತ್ತದೆ. ಉಪಯೋಗಿಸುವ ಹಗ್ಗಕ್ಕೆ ಹೆಚ್ಚು ತಡೆತವನ್ನು ನೀಡುವ ಸಲುವಾಗಿ ಅದಕ್ಕಿಂತಲೂ ದಪ್ಪ ಗಾತ್ರದ ಹಗ್ಗಕ್ಕೆ ಜೋಡಿಸಲಾಗುತ್ತದೆ. ಒಂದು ಸುತ್ತು ಬಂದ ಮೇಲೆ, ಒಂದು ಮಲುಕು

ಗಂಟನ್ನು ಹಾಕಬೇಕು. ಒಂದು ಸುತ್ತು ಹೆಚ್ಚು ಹಾಕಿದ ಕೊಟ್ಟಿಗೆ ಗಂಟು ಎಂದೇ ಹೇಳಬೇಕು. ಎಳೆತವು ಎರಡನೆಯ ಮಲುಕಿನ ಮೇಲಿರಬೇಕು.

**ಹುರಿ ಸುತ್ತುವುದು (Whipping):** ಹಗ್ಗದ ಕೊನೆಯಲ್ಲಿ, ಎಳೆಗಳು ಬಿಚ್ಚಿಕೊಂಡು ಹಗ್ಗವು ಹಾಳಾಗದಂತೆ ಕಾಪಾಡುವುದು ಇದರ ಉದ್ದೇಶ.




ಹಲವಾರು ರೀತಿಗಳಲ್ಲಿ ಹುರಿ ಸುತ್ತಬಹುದು. ಸ್ಕೌಟುಗಳು, ಸಾಮಾನ್ಯ ರೀತಿಯನ್ನೂ ಹಾಯಿ ತಯಾರಕರು (sail makers) ಉಪಯೋಗಿಸುವ ರೀತಿಯನ್ನೂ ತಿಳಿದಿರಬೇಕು. ಸಾಮಾನ್ಯ ರೀತಿ: ಇದು ಹೀಗೆ. ಹಗ್ಗದ ಮೇಲೆ ಒಂದು ಹುರಿಯ (Twine thread) ದಾರದ ಕುಣಿಕೆಯನ್ನಿಡಿ. ಇದರ ಮೇಲೆ, ಸಾಕಷ್ಟು ಸುತ್ತುಗಳನ್ನು ಹತ್ತನಾಗಿ ಹಾಕಿದ ನಂತರ ಕೊನೆಯನ್ನು ಕುಣಿಕೆಯ ಒಳಗೆ ತೂರಿಸಿ, ಕೆಳಗಿನ ಕೊನೆಯನ್ನು ಜಗ್ಗಿ ಎಳೆಯಿರಿ. ಸುತ್ತುಗಳ ಮಧ್ಯಭಾಗದವರೆಗೆ, ಕುಣಿಕೆಯೊಳಗೆ ತೂರಿಸಿದ ಕೊನೆಯ ದಾರದ ಭಾಗವು ಬರುವವರೆಗೆ ಜಗ್ಗಬೇಕು. ಈಗ ಎರಡೂ ಕೊನೆಗಳನ್ನು ಕಂಡೂ ಕಾಣದಂತೆ ಬಿಟ್ಟು ಕತ್ತರಿಸಿ (ಚಿತ್ರವನ್ನು ನೋಡಿ).

**ಕಟ್ಟುಗಳು (Lashings):**

ಕಂಬಗಳು ಅಥವಾ ದಡಿಗಳು ಅಥವಾ ದಂಡಗಳನ್ನು ಸೇರಿಸಿ ಭದ್ರಪಡಿಸುವಾಗ ಕಟ್ಟುಗಳನ್ನು ಹಾಕುತ್ತೇವೆ. ಕಟ್ಟುಗಳಲ್ಲಿ ಬೇರೆ ಬೇರೆಯ ರೀತಿಯ ಕಟ್ಟುಗಳಿವೆ. ಉದ್ದೇಶಕ್ಕೆ ತಕ್ಕಂತೆ ಕಟ್ಟುಗಳು.

**ಚೌಕಕಟ್ಟು (Square Lashing):**



ಚೌಕಕಟ್ಟು

ಸೇರಿಸುವ ಎರಡು ದಂಡಗಳು ಒಂದಕ್ಕೊಂದು ಸಮಕೋನಕ್ಕೆ ಸಮೀಪದಲ್ಲಿ ಅಡ್ಡಹಾಯುವಾಗ ಸೇರಿಸಿ ಕಟ್ಟಲು ಉಪಯೋಗಿಸುವ ಕಟ್ಟು.

ಕಾಲುಮರ/ದಂಡದಲ್ಲಿ ಕೊಟ್ಟಿಗೆ ಗಂಟು ಹಾಕುವುದು. ಗಂಟಿನ ಕೊನೆಯ ಹಗ್ಗದ ಭಾಗವನ್ನು ನಿಮ್ಮ ಕಡೆಗಿರುವ ಹಗ್ಗಕ್ಕೆ ಸುತ್ತಿಕೊಳ್ಳುವುದು. ಹಗ್ಗವನ್ನು ಅಡ್ಡಮರ/ದಂಡವನ್ನು ಹಾದು ಕಾಲುಮರದ ಹಿಂದಿನಿಂದ ತಂದು, ಅಡ್ಡಮರದ ಮೇಲಿನಿಂದ ಕಾಲುಮರದ ಹಿಂದಕ್ಕೆ ತೆಗೆದುಕೊಳ್ಳುವುದು. ಅದು ಕೊಟ್ಟಿಗೆ ಗಂಟಿನ ಮೇಲಿನಿಂದ, ಅಡ್ಡಮರದ ಕೆಳಗೆ ಹಾದು ಮೇಲಿನಿಂದ ಪುನಃ ಕಾಲು ಮರದ ಹಿಂದಕ್ಕೆ ಹೋಗಬೇಕು. ಈ ರೀತಿಯಲ್ಲಿ 4–5 ಸುತ್ತುಗಳು ಕಳೆದ ಮೇಲೆ, ಅಡ್ಡ ಮರದ ಸುತ್ತುಗಳನ್ನು ಹೊರಗಿಟ್ಟುಕೊಂಡು, ಕಾಲು ಮರಕ್ಕೂ, ಅಡ್ಡಮರಕ್ಕೂ ಮಧ್ಯೆ ಬರುವಂತೆ ಹಗ್ಗವನ್ನು ಸುತ್ತಿ, (ಇದನ್ನು 'ಫ್ರಾಪ್ಪಿಂಗ್' ಎನ್ನುತ್ತಾರೆ) ಅಡ್ಡಮರದ ಕೊನೆಗೆ ಬರುವಂತೆ ಕೊಟ್ಟಿಗೆ ಗಂಟನ್ನು ಹಾಕಬೇಕು. ಹಗ್ಗದ ಉಳಿದ 2–3 ಇಂಚು ಉದ್ದವನ್ನು ಸುತ್ತುಗಳ ಮಧ್ಯೆ ಸೇರಿಸಿಬಿಡಬೇಕು. ಹಗ್ಗದ ಉದ್ದವು ಹೆಚ್ಚಾಗಿದ್ದರೆ ಕಂಬಕ್ಕೆ 2–3 ಅರೆ ಗಂಟುಗಳನ್ನು ಹಾಕಿ ಬಿಡಬೇಕು. ಹಗ್ಗವನ್ನು ಸುತ್ತುವಾಗ, ಗಂಟು ಹಾಕುವಾಗ, ಪ್ರತಿ ಹಂತದಲ್ಲಿಯೂ, ಬಲವಾಗಿ ಎಳೆದು ಬಿಗಿಮಾಡಬೇಕು. ಎಳೆದು ಬಿಗಿಸಲು ಮಾರ್ಲಿನ್ ಸ್ಪೈಕ್ ಅಥವಾ ಸಣ್ಣ ಕಡ್ಡಿ ಅಥವಾ ಬಡಿಗೆಯ ಹಿಡಿಯನ್ನು ಉಪಯೋಗಿಸಬಹುದು. ಬಿಗಿ ಸುತ್ತುಗಳು (ಫ್ರಾಪ್ಸ್) ಕಂಬದ ಮೇಲೆ ಹಾಯುವ ಸುತ್ತುಗಳಿಗೆ ಸಮಕೋನದಲ್ಲಿರುತ್ತದೆ, ಕಟ್ಟನ್ನು ಬಿಗಿಗೊಳಿಸುವುದು ಈ ಬಿಗಿ ಸುತ್ತುಗಳ (Frappings) ಉದ್ದೇಶವಾಗಿದೆ. ಒಂದು ಕಂಬವು ಇನ್ನೊಂದು ಕಂಬದ ತೂಕವನ್ನು ತೆಗೆದುಕೊಳ್ಳಲು ಸಹಾಯವಾಗುವಂತೆ ಸಹ ಚೌಕಟ್ಟನ್ನು ಬಳಸಲಾಗುತ್ತದೆ.

**ಕರ್ಣಕಟ್ಟು (Diagonal Lashing):** ಎರಡು ದಂಡಗಳು ಕರ್ಣ ರೇಖೆಗಳ ಮೇಲೆ ಅಡ್ಡಹಾಯುವಾಗ, ಅಲ್ಲಿ ಕರ್ಣ ಕಟ್ಟು ಹಾಕಲಾಗುತ್ತದೆ. ಮೊದಲು ಎರಡು ದಂಡಗಳನ್ನು ಸೇರಿಸಿ ದಿಮ್ಮಿಗಂಟು ಹಾಕಬೇಕು. ಅದನ್ನು ಬಿಗಿಸಿ, ಮೂರು ಬಿಗಿಸುತ್ತುಗಳನ್ನು ಒಂದುಕಡೆ ಹಾಕಬೇಕು. ಆ ಬಳಿಕ ಅದಕ್ಕೆ ಸಮಕೋನದಲ್ಲಿ ಮತ್ತೆ

ಮೂರು ಬಿಗಿ ಸುತ್ತುಗಳನ್ನು ಹಾಕಬೇಕು. ಈಗ ಎರಡು ದಂಡಗಳ ಮಧ್ಯೆ ಬರುವಂತೆ, ಈಗಾಗಲೇ ಹಾಕಿರುವ ಬಿಗಿ ಸುತ್ತುಗಳ ಮೇಲೆ ಮತ್ತೆರಡು ಬಿಗಿ ಸುತ್ತುಗಳನ್ನು ಹಾಕಬೇಕು. ಕೊನೆಯದಾಗಿ ಕೊಟ್ಟಿಗೆ ಗಂಟುಹಾಕಿ ಮುಗಿಸ್ಬೇಕು. ಹಗ್ಗದ ಕೊನೆಯನ್ನು ನೇತಾಡದಂತೆ ಗಂಟಿನೊಳಗೆ ಸೇರಿಸಿಬಿಡಬೇಕು ಅಥವಾ ಆಗುವುದಾದರೆ ದಂಡಕ್ಕೆ ಕೊಟ್ಟಿಗೆ ಗಂಟು ಹಾಕಬೇಕು. (ಚಿತ್ರವನ್ನು ನೋಡಿ)


ಕರ್ಣಕಟ್ಟು


ಕತ್ತರಿಕಟ್ಟು

**ಕತ್ತರಿಕಟ್ಟು (Shear Lashing):** ಇದನ್ನು ದುಂಡುಕಟ್ಟು ಎಂದೂ ಹೇಳುತ್ತಾರೆ. ಎರಡು ದಂಡಗಳನ್ನು ಸಮಾನಾಂತರವಾಗಿ ಬಿಗಿಸಿ ಕಟ್ಟು ಹಾಕಲಾಗುತ್ತದೆ. ಆ ಬಳಿಕ ದಂಡಗಳನ್ನು ಕತ್ತರಿಯ ಕಾಲುಗಳಂತೆ ಅಗಲಿಸಲಾಗುತ್ತದೆ. ಈ ಕಟ್ಟುಗಳನ್ನು ಎರಡು ಕಾಲುಮರ/ದಂಡಗಳನ್ನು ಸೇರಿಸಿ, ಉದ್ದ/ಎತ್ತರವನ್ನು ಹೆಚ್ಚಿಸಲು ಸಹ ಉಪಯೋಗಿಸಲಾಗುತ್ತದೆ. ಉದಾ:ಧ್ವಜ ಸ್ತಂಭ.

ಕಾಲುಮರಗಳನ್ನು ಅಗಲಿಸಲು ಕಟ್ಟು ಹಾಕಿದಾಗ ಒಂದು ದಂಡದ ಮೇಲೆ ಕೊಟ್ಟಿಗೆ ಗಂಟನ್ನು ಹಾಕಬೇಕು. ಅತಿ ಬಿಗಿಯಾಗಿ ಬಿಗಿಸದೆ, ಎರಡೂ ದಂಡಗಳ ಮೇಲೆ ಸುತ್ತುತ್ತಾ ಹೋಗಬೇಕು. ಕೊನೆಗೆ ಇನ್ನೊಂದು ದಂಡದ ಮೇಲೆ ಕೊಟ್ಟಿಗೆ ಗಂಟು ಹಾಕಿ ಮುಗಿಸಬೇಕು. ಕೊನೆಯ ಕೊಟ್ಟಿಗೆ ಗಂಟು ಹಾಕುವ ಮುನ್ನ ಎರಡೂ ದಂಡಗಳ ಮಧ್ಯೆ ಬಿಗಿಸುತ್ತುಗಳನ್ನು ಹಾಕಬೇಕು.

ಕಾಲುಮರದ ಉದ್ದ/ಎತ್ತರವನ್ನು ಹೆಚ್ಚಿಸಲು ಈ ಕಟ್ಟನ್ನು ಹಾಕಿದಾಗ, (ಉದಾ:ಧ್ವಜ ಸ್ಥಂಭ) ಎರಡೂ ದಂಡಗಳನ್ನು ಸೇರಿಸಿ ಕೊಟ್ಟಿಗೆ ಗಂಟು ಹಾಕಬೇಕು. ಎಳೆದು ಬಿಗಿಸುತ್ತಾ ಸುತ್ತಬೇಕು. ಕೊನೆಯಲ್ಲಿ ಕೊಟ್ಟಿಗೆ ಗಂಟು ಹಾಕಿ ಮುಗಿಸಬೇಕು. ತುದಿಯನ್ನು ಕಟ್ಟಿನೊಳಕ್ಕೆ ಸೇರಿಸಿಬಿಡಬೇಕು. ಇದರಿಂದ ಕಟ್ಟು ಬಿಗಿಗೊಳ್ಳುತ್ತದೆ. ಇನ್ನೊಂದು ಅಂಶವೆಂದರೆ, ಎರಡು ದಂಡಗಳು ಕೂಡುವ ಪ್ರತಿಕಡೆಯಲ್ಲಿಯೂ, ಸ್ವಲ್ಪ ಸ್ಥಳ ಬಿಟ್ಟು ಎರಡು ಕತ್ತರಿ ಕಟ್ಟುಗಳು ಬರಬೇಕು.

**'8' ಆಕಾರದ ಕಟ್ಟು (Figure of '8' Lashing):** ಗ್ರೀಕ್ ಪದವಾದ 'ಜಿನ್' ಎಂಬುದು "ಸ್ತ್ರೀ" ಎಂಬರ್ಥವಿರುವ ಪದದ ಸಂಕ್ಷಿಪ್ತ ರೂಪ. ಇದು ಮುಕ್ಕಾಲು ಮೇಜು/ಪೀಠ/ನಿಲುವನ್ನು ಮಾಡಲು 3 ದಂಡಗಳನ್ನುಪಯೋಗಿಸಿ ಹಾಕುವ ಕಟ್ಟು,

ಇದರಲ್ಲಿ ಎರಡು ದಂಡಗಳು ಒಂದು ದಿಕ್ಕಿನಲ್ಲೂ, ಮಧ್ಯದ ದಂಡವು ಎದುರು ದಿಕ್ಕಿನಲ್ಲೂ ಇರುತ್ತವೆ. ಮಧ್ಯದ ದಂಡದ ಮೇಲೆ ಕೊಟ್ಟಿಗೆ ಗಂಟು ಹಾಕಿ ಸುತ್ತುಗಳನ್ನು ಪ್ರಾರಂಭಿಸಬೇಕು. ಈ ಸುತ್ತುಗಳು '8' ಆಕಾರ ಬರುವಂತೆ ಮೂರು ದಂಡಗಳನ್ನು ಬಳಸಿ ಬರಬೇಕು. ಅದೇ ರೀತಿ ಸುತ್ತುಗಳನ್ನು ಅತಿಯಾಗಿ ಬಿಗಿಸಬಾರದು. ಹಾಗೆಂದು ಪೂರಾ ಡೀಲಾ ಇರಬಾರದು. ಸುತ್ತುಗಳನ್ನು ಎರಡು ದಂಡಗಳ ಮಧ್ಯದ ಎರಡು ಕಡೆಗಳಲ್ಲೂ ಹಾಕಬೇಕು. ಕೊನೆಯಲ್ಲಿ ಯಾವುದಾದರೊಂದು ಹೊರ ದಂಡದ ಮೇಲೆ ಕೊಟ್ಟಿಗೆ ಗಂಟು ಹಾಕಿ ಮುಗಿಸಬೇಕು. ಈಗ ಕಾಲುಗಳನ್ನು ಅಗಲ ಮಾಡಿ ಮೂರು ಕಾಲುಗಳ ನಿಲುವನ್ನಾಗಿ ಉಪಯೋಗಿಸಬಹುದು.

**ಕಾಲಟ್ಟ (Trestle):** ಚೌಕ ಕಟ್ಟು ಮತ್ತು ಕರ್ಣಕಟ್ಟುಗಳನ್ನು ಪ್ರಾಯೋಗಿಕವಾಗಿ ಉಪಯೋಗಿಸುವುದಕ್ಕೆ ಕಾಲಟ್ಟವು ಒಂದು ಒಳ್ಳೆಯ ಉದಾಹರಣೆ. ಕಾಲಿಟ್ಟದ ನಿರ್ಮಾಣವು ತಂತ್ರ ಶಿಲ್ಪಿಗಳ ಕೆಲಸ. ಸೇತುವೆ ಮಾದರಿಗಳನ್ನು ಕಟ್ಟುವಾಗ, ಕಾಲಟ್ಟವನ್ನು ಕಟ್ಟುವುದರ ಮೂಲಕ, ತಂತ್ರಜ್ಞಾನದ ಅನೇಕ ತತ್ವಗಳನ್ನು ತಿಳಿಯಲು, ಸ್ಕೌಟುಗಳಿಗೆ ಅನುಕೂಲವಾಗುತ್ತದೆ.




ಕಾಲಟ್ಟದ ನಿರ್ಮಾಣದಲ್ಲಿ ಅಡಗಿರುವ ಸಂಪೂರ್ಣ ಉದ್ದೇಶಿತ ಅಂಶಗಳನ್ನು ಸರಿಯಾಗಿ ಅರ್ಥ ಮಾಡಿಕೊಳ್ಳಬೇಕು.

ಕಾಲುಗಳು, ಪೂರಾ ರಚನೆಯ (ಸೇತುವೆ) ಮತ್ತು ಅದರ ಮೇಲೆ (ಅದರ ಮೇಲಿನ ರಸ್ತೆಯ ಮೇಲೆ) ಬೀಳಬಹುದಾದ ಹೆಚ್ಚುವರಿ ತೂಕವನ್ನು ಹೊರಲು ಆಧಾರವಾಗಿರುತ್ತವೆ. ಅಡ್ಡಮರಗಳು ರಸ್ತೆಯ ಭಾರವನ್ನು ಹೊರುತ್ತವೆ. ಬಿಗಿಪಟ್ಟಿ/ಕರ್ಣಮರಗಳು, ಕಾಲಟ್ಟವು ಬಿಗಿಯಾಗಿಯೂ, ದೃಢವಾಗಿಯೂ ಇರಲು ಸಹಾಯವಾಗುತ್ತವೆ.

ಕಾಲಟ್ಟದಲ್ಲಿ ಹಾಕುವ ಪ್ರತಿಕಟ್ಟೂ ಸರಿಯಾಗಿಯೂ, ಭದ್ರವಾಗಿಯೂ, ಇರಬೇಕಾದುದು ಬಹಳ ಮುಖ್ಯ. ಯಾವುದೇ ಕಾರಣದಿಂದ ಅಳಕವಾಗದಂತೆ ಎಚ್ಚರವಹಿಸಬೇಕು. ಪ್ರತಿ ದಂಡ/ಕಂಬವೂ ಈ ಕಟ್ಟುಗಳ ಬಿಗಿಹಿಡಿತದಲ್ಲಿ ಸುಭದ್ರವಾಗಿರಬೇಕು ಮತ್ತು ಅದರದರ ಸ್ಥಾನದಲ್ಲಿ ಅಲುಗದಂತಿರಬೇಕು.

ಕಾಲಟ್ಟಕ್ಕೆ 8 ಚೌಕ ಕಟ್ಟುಗಳೂ ಒಂದು ಕರ್ಣಕಟ್ಟೂ ಬೇಕಾಗುತ್ತದೆ. ಕಾಲುಮರಗಳ ಬುಡವು ಇಳಿಜಾರಾಗಿದ್ದು (Slopy), ನೆಲದ ಕಡೆಗೆ ಅಗಲವಾಗಿರಬೇಕು. ಈ ವಾಟವು 1:6 ಇರಬೇಕು.

ಕಾಲಟ್ಟವನ್ನು ಕಟ್ಟುವುದಕ್ಕೆ ಪ್ರಾರಂಭಿಸುವ ಮುನ್ನ ಸ್ಕೌಟುಗಳು ಗಮನಿಸಬೇಕಾದ ಅಂಶಗಳು.

(i) ನಿರ್ಮಾಣಕ್ಕೆ ಉಪಯೋಗಿಸುವ ದಂಡ/ಕಂಬ/ದೂಲಗಳನ್ನು ಆರಿಸಿಕೊಳ್ಳಬೇಕು.

(ii) ಅವುಗಳ ಉದ್ದ, ಗಾತ್ರ ಇತ್ಯಾದಿ ಅಳತೆಗಳನ್ನು ನಿರ್ಧರಿಸಿಕೊಳ್ಳಬೇಕು.

(iii) ಅವುಗಳನ್ನು ಬಂಧಿಸಲು ಅವಶ್ಯಕವಾದ ಹಗ್ಗಗಳು ಮತ್ತು ಹಗ್ಗಗಳ ತಡೆತದ ಶಕ್ತಿ ಇತ್ಯಾದಿ ನಿರ್ಧರಿಸಿಕೊಳ್ಳಬೇಕು.

(iv) ಅವುಗಳನ್ನು ಒಂದೆಡೆ ಜಮಾ ಮಾಡಿಕೊಳ್ಳಬೇಕು.

**ಸೂಚನೆ:** ಕಾಲಟ್ಟದ ಅಳತೆಯ ಪ್ರಮಾಣವು ಕಟ್ಟುವ ಸ್ಥಳದ ಪರಿಸ್ಥಿತಿ ಮತ್ತು ಕಟ್ಟವುದರ ಉದ್ದೇಶವನ್ನು ಅವಲಂಬಿಸಿರುವುದರಿಂದ (i)(ii)(iii) ನಿರ್ಧಾರ ಮಾಡುವಾಗ, ಈ ಅಂಶಗಳು ಗಮನದಲ್ಲಿರಬೇಕು.

ಸಾಮಾನ್ಯವಾಗಿ ಕಾಲಿಟ್ಟದಲ್ಲಿ ಉಪಯೋಗಿಸುವ ಮರಗಳು ಒಂದೇ ಅಳತೆಯವಾಗಿರುತ್ತವೆ. ವಿಶೇಷ ಸಂದರ್ಭಗಳಲ್ಲಿ ಕಾಲುಮರಗಳ ಉದ್ದವು ಹೆಚ್ಚಾಗಿರುತ್ತದೆ. ಉದಾ: ಕಾಲಟ್ಟಗಳನ್ನು ನದಿಯ/ತೊರೆಯ ಬುಡದಲ್ಲಿ ನೀರಿನೊಳಗೆ ಆನಿಸಬೇಕಾದಾಗ ಮತ್ತು ನದಿ/ತೊರೆ ಕೊಳದ ಪಾತ್ರದ ಪರಿಸ್ಥಿತಿ –ಅಗಲ, ಆಳ, ಪಾತ್ರದ ಮಣ್ಣಿನ ಗುಣ ಇತ್ಯಾದಿ, ಅನುಸರಿಸುತ್ತದೆ.

ಉಪಯೋಗಿಸುವ ಮರಗಳ ಗಾತ್ರವೂ ಸಹ, ಕಾಲಟ್ಟದ ಪ್ರಮಾಣಕ್ಕೆ ಹೊಂದಿಕೊಂಡು ಬದಲಾಗುತ್ತದೆ. ಸಾಮಾನ್ಯವಾಗಿ 3"–4" ಗಾತ್ರದ ಮರಗಳು ಸಾಕಾಗಬಹುದು.

## ಅಗ್ರಗಾಮಿತ್ವ – ಕೆಲವು ಸರಳ ಸೇತುವೆಗಳು

ಸ್ಕೌಟುಗಳಿಗೆ ಸೇತುವೆ ಕಟ್ಟುವುದೆಂದರೆ ಮೋಜು. ಪ್ರಾರಂಭದಲ್ಲಿ ಸರಳ ರೀತಿಯ ಸೇತುವೆಗಳನ್ನು ಕಟ್ಟುತ್ತಾ, ಅನುಭವ ಪಡೆದಂತೆಲ್ಲಾ, ಕಷ್ಟಕರವಾದ, ವಿಸ್ತೃತ ರೀತಿಯ ಸೇತುವೆಗಳಿಗೆ ಕೈಹಾಕಬಹುದು. ಉದಾ: (1) ಹಿಮಾಲಯ ಸೇತುವೆ (2) ಪೊದೆಗಾಡು ನಿವಾಸಿಯ ಸೇತುವೆ (3) ಕಾಲಟ್ಟಗಳ ಸೇತುವೆ (ಏಕತಡೆ ಸೇತುವೆ) ಇವುಗಳು ಸರಳ ರೀತಿಯ ಸೇತುವೆಗಳು (1) ಮತ್ತು (3) ಸೇತುವೆಗಳನ್ನು ಬಾಲಕರಿಗಾಗಿ ಸ್ಕೌಟಿಂಗ್ ಪುಸ್ತಕದ, ಶಿಬಿರಾಗ್ನಿ ಉದಂತ (8) ರಲ್ಲಿ ವಿವರಿಸಲಾಗಿದೆ. ಎರಡನೆಯದು ಮೊದಲನೆಯದರ ರೂಪಾಂತರ.



"ಕಿರಿದಾದ ಆಳದಲ್ಲಿ ಹರಿಯುವ ನದಿಯಾದರೆ, ಅದಕ್ಕೆ ಬಹಳ ಸರಳ ರೀತಿಯಲ್ಲಿ ಸೇತುವೆ ಕಟ್ಟಬಹುದು. ದಡದಿಂದ ದಡಕ್ಕೆ ಬರುವಂತೆ ಒಂದು ಮರವನ್ನೋ, ಅಕ್ಕ-ಪಕ್ಕಗಳಲ್ಲಿ ಬರುವಂತೆ ಎರಡು ಮರಗಳನ್ನೋ ಅಡ್ಡ ಕೆಡವಿ, ಸವರಿದರಾಯಿತು. ಮೇಲ್ಭಾಗವನ್ನು ಬಾಚಿಯಿಂದ ಕೆತ್ತಿ, ಮಟ್ಟವಾಗಿ ಮಾಡಬಹುದು. ಹಿಡಿದು ನಡೆಯಲು, ಅಕ್ಕ-ಪಕ್ಕಗಳಲ್ಲಿ ಕಂಬಿ ಹಾಕಬಹುದು. ಇಷ್ಟೆಲ್ಲಾ ಮಾಡಿದ ಮೇಲೆ, ಪಕ್ಕಾ ಸೇತುವೆಯೇ ಆಯಿತು," ಎಂದು ಬಿ.ಪಿ. ಹೇಳಿದ್ದಾರೆ.

### (1) ಹಿಮಾಲಯ ಸೇತುವೆ:

ಇಂಡಿಯಾದ ಹಿಮಾಲಯಾ ಪರ್ವತ ಪ್ರದೇಶಗಳಲ್ಲಿ, ಇಂಡಿಯನ್ನರು, ನದಿಯ ಮೇಲೆ, ದಡದಿಂದ ದಡಕ್ಕೆ ಮೂರು ಹಗ್ಗಗಳನ್ನು ಎಳೆದು ಕಟ್ಟಿರುತ್ತಾರೆ. ಈ ಹಗ್ಗಗಳಿಗೆ ಪ್ರತಿ ಕೆಲವು ಮೀಟರುಗಳಿಗೊಂದರಂತೆ Y ಆಕಾರದಲ್ಲಿ ದಂಡಗಳನ್ನು ಬಿಗಿಸಿರುತ್ತಾರೆ. ಕೆಳಗಿನ ಹಗ್ಗವು ನಡೆಯುವ ದಾರಿಯಾದರೆ, ಮೇಲಿನೆರಡು ಹಗ್ಗಗಳು ಹಿಡಿದು ನಡೆಯಲು ಬರುತ್ತದೆ. ನಡೆಯುವಾಗ ಈ ಸೇತುವೆಗಳು ಬಳುಕುತ್ತವೆ. ಆದರೆ ನಿಮ್ಮನ್ನು ಸುಲಭವಾಗಿ ದಡ ದಾಟಿಸುತ್ತವೆ.

ಈ ಸೇತುವೆಯ ಮಾದರಿಯನ್ನು ಸ್ಕೌಟುಗಳು ಸುಲಭವಾಗಿ ತಯಾರಿಸಬಹುದು. 1"-1½" ಗಾತ್ರದ 3 ಹಗ್ಗಗಳನ್ನು ಆ ಕಡೆ ಈ ಕಡೆ ಆಧಾರಗಳನ್ನುಪಯೋಗಿಸಿ ಎಳೆದು ಕಟ್ಟಬೇಕು. ಇವುಗಳ ಮಧ್ಯದಲ್ಲಿ ಅಲ್ಲಲ್ಲಿ ಸ್ಕೌಟ್ ದಂಡಗಳನ್ನು 'V' ಆಕಾರದಲ್ಲಿ ಕಟ್ಟಬೇಕು. ಆಚೀಚಿನ ಆಧಾರ (ಸ್ತಂಭ)ಗಳು ಕಟ್ಟು ಮಸ್ತಾಗಿರಬೇಕು. ಅದರ ಬದಲು ಮರಗಳೇ ಇದ್ದರಂತೂ ಬಹಳ ಉತ್ತಮವೇ ಸರಿ.

ಸ್ಕೌಟ್ ದಂಡಗಳನ್ನು 'V' ಆಕಾರದಲ್ಲಿ ಬಿಗಿಸಬೇಕು, ಮತ್ತೆ ಅವುಗಳನ್ನು ಮೇಲ್ಭಾಗದಲ್ಲಿ ಸಹ ಕಟ್ಟಬೇಕು. ಈ ಬಿಗಿಸುವುದಕ್ಕೆ ಸೂಕ್ತವಾದ ಕಟ್ಟುಗಳನ್ನು ಉಪಯೋಗಿಸಬೇಕು. ದಂಡಗಳನ್ನು ಬಿಗಿಸುವಾಗ ಬುಡ ಮೇಲಾಗಿ ಬಿಗಿಸಬೇಕು. ನಡೆಯುವ ಹಗ್ಗಕ್ಕೆ ಅವುಗಳ ಮೇಲ್ಭಾಗವಿರಬೇಕು. ಕೈಹಿಡಿಯುವ ಭಾಗದಲ್ಲಿ ಅವುಗಳ ಬುಡವಿರಬೇಕು. ಚೌಕಕಟ್ಟುಗಳು ಇವುಗಳ ಬಿಗಿತಕ್ಕೆ ಉಪಯುಕ್ತವಾಗಿವೆ.

**(2) ಪೊದೆಗಾಡು ನಿವಾಸಿಯ ಸೇತುವೆ:**

ಈ ಸೇತುವೆಗೆ ಸುಮಾರು ಸಂಖ್ಯೆಯಲ್ಲಿ ಕವೆಕಡ್ಡಿಗಳು ಬೇಕಾಗುತ್ತವೆ. ಇವನ್ನು ಪೊದೆಗಾಡಿನಲ್ಲಿ ಕತ್ತರಿಸಿಕೊಳ್ಳಬಹುದು. ಈ ಕವೆಕಡ್ಡಿಗಳ 4'–6' ಉದ್ದವಿದ್ದರಾಯಿತು. ಕವೆ ಭಾಗವು ಕೈಹಿಡಿಯುವ ಕಡೆ ಕಟ್ಟಲು ಬರುತ್ತದೆ. ಬುಡ ಭಾಗವನ್ನು ನಡೆಯುವ ಹಾದಿಕಡೆ ಕಟ್ಟಬೇಕು. ನದಿಯ ಎರಡೂ ಬದಿಗಳಲ್ಲಿ ನಿಲುವಾಧಾರಗಳು ಬಲವಾಗಿಯೂ, ಗಟ್ಟಿಯಾಗಿಯೂ ಇದೆಯೆಂಬ ಭರವಸೆ ಇರಬೇಕು.

ಎರಡೂ ಬದಿಗಳಲ್ಲಿ ಮರಗಳಿದ್ದರೆ, ಅವು ಬಲವಾದ ನಿಲುವಾಧಾರ ಗಳಾಗುತ್ತವೆ. ಇವೆರಡರ ಮಧ್ಯೆ ಇನ್ನೊಂದು ಮರವಿದ್ದರಂತೂ ನಡೆದಾಡುವ ದಾರಿಗೆ ಮತ್ತಷ್ಟು ಬಲ ಬಂದಂತಾಯಿತು.

**(3) ಏಕತಡೆ/ಕಾಲಟ್ಟ ಸೇತುವೆ:**

ನದಿ ಅಥವಾ ತೊರೆಯ ಅಗಲ ಕಡಿಮೆ ಇದ್ದು, ದಡಗಳು ಕಡಿದಾಗಿಯೂ, ಭದ್ರವಾಗಿಯೂ ಇದ್ದರೆ ಈ ಸೇತುವೆಗಳಿಗೆ ಬಹಳ ಅನುಕೂಲ.

ಕಾಲಟ್ಟವನ್ನು 6 ಸ್ಕೌಟ್ ದಂಡಗಳಿಂದ ಕಟ್ಟಬೇಕು. 2 ಕಾಲು ಮರಗಳು; 2 ಕರ್ಣಮರಗಳು: 2 ಅಡ್ಡಮರಗಳು ಆಗುತ್ತವೆ. ಕಾಲಟ್ಟದ 8 ಕಡೆಗಳಲ್ಲಿ 8 ಚೌಕಟ್ಟುಗಳು ಬರುತ್ತವೆ. ಕರ್ಣ ಮರಗಳು ಅಡ್ಡವಾಗುವ ಕಡೆ ಕರ್ಣಕಟ್ಟು ಬರುತ್ತದೆ.



ಕಾಲಟ್ಟಗಳ ಕಾಲುಗಳನ್ನು ನದೀ ದಡದ, ಕಡಿದಾದ ಮುಖದಲ್ಲಿ ದೃಢಪಡಿಸಬೇಕು. 2 ಕಾಲಿಟ್ಟಗಳ ಮೇಲ್ಭಾಗವು, ನದಿಯ ಮಧ್ಯೆ ಮೇಲ್ಭಾಗದಲ್ಲಿ ಒಂದಕ್ಕೊಂದು ತೊಡರಿಕೊಂಡು, ತಡೆಹಿಡಿಯುವಂತೆ ಮಾಡಬೇಕು. ನದೀ ದಡಕ್ಕೂ ಕಾಲಟ್ಟಗಳ, ಈ ತಡೆಭಾಗಕ್ಕೂ ಅಡ್ಡ ಮರಗಳನ್ನು ಹಾಕಿ ಸೂಕ್ತ ಕಟ್ಟುಗಳಿಂದ ಬಿಗಿಸಬೇಕು. ದಡಗಳ ಕಡೆಯೂ ಈ ಅಡ್ಡಮರಗಳಿಂದಲೇ ರಸ್ತೆ ಮಾಡುವಬದಲು, 2–3 ಅಡ್ಡ ಮರಗಳನ್ನು ಕಟ್ಟಿ, ಅವುಗಳ ಮೇಲೆ ಹಲಗೆಗಳನ್ನು ಹಾಕಿ ರಸ್ತೆ ಮಾಡಬಹುದು. ಹಲಗೆಗಳನ್ನು ಅಡ್ಡ ಮರಗಳಿಗೆ ಸೂಕ್ತ ಕಟ್ಟುಗಳಿಂದ ಬಿಗಿಸಬೇಕು.

ಅಗಲವು ಕಡಿಮೆ ಇರುವ ತೊರೆ/ಹಳ್ಳಕ್ಕೆ, ಈ ಸರಳವಾದ ಕಾಲಟ್ಟ/ಏಕತಡೆ ಸೇತುವೆಯು ಉಪಯುಕ್ತವಾದುದು.

ನದಿಯ ದಡವು ಆಳವಾಗಿ, ಕಡಿದಾಗಿ ಇಲ್ಲದಿದ್ದರೆ, ಕಾಲುಗಳನ್ನು ನದೀ ಪಾತ್ರದಲ್ಲೇ ನೆಡಬಹುದು.

ಸದೃಢ ಸೇತುವೆಗೆ, ಬಲವಾದ ಕಾಲಟ್ಟಗಳು ಬೇಕಾಗುತ್ತದೆ. ಇದಕ್ಕೆ 3" ದಪ್ಪ ಮರಗಳನ್ನು ಉಪಯೋಗಿಸಿದರಾಯಿತು.

**ಇನ್ನು ಕಟ್ಟು–ಹಗ್ಗಗಳ ಉದ್ದ ಮತ್ತು ಗಾತ್ರ:**

(i) **ಕಟ್ಟು–ಹಗ್ಗಗಳ ಉದ್ದ** – ಅಡ್ಡಮರದ (ಉಪಯೋಗಿಸುವುದರಲ್ಲಿ ದಪ್ಪನೆಯದು) ವ್ಯಾಸಗಳನ್ನು ಅಡಿಗಳಲ್ಲಿ ಲೆಕ್ಕ ಮಾಡಿ. ಅಷ್ಟು ಆಳುದ್ದ (ಒಂದು ಆಳುದ್ದ= 6 ಅಡಿಗಳು) ಗಳಷ್ಟು ಉದ್ದದ ಹಗ್ಗವು ಬೇಕಾಗುತ್ತದೆ.

(ii) **ಕಟ್ಟುಹಗ್ಗಗಳ ಗಾತ್ರ** – ಉಪಯೋಗಿಸುವ ದಪ್ಪ ಮರದ ಗಾತ್ರವನ್ನು (ವ್ಯಾಸವನ್ನು) ಅಡಿಗಳಲ್ಲಿ ಲೆಕ್ಕ ಮಾಡಿ ಎಷ್ಟು ಅಡಿಗಳಿವೆಯೋ ಅಷ್ಟು ಇಂಚು ಗಾತ್ರದ ಹಗ್ಗವು ಬೇಕಾಗುತ್ತದೆ.

## ಕೆಲವು ವಿಶೇಷ ಗಂಟುಗಳು ಮತ್ತು ಹೆಣಿಗೆಗಳು:
## (KNOTS & SPLICES)

### (1) ಅಗ್ನಿಶಾಮಕನ ಕುರ್ಚಿಗಂಟು (Fireman's Chair knot)

ಬೆಂಕಿ ಹತ್ತಿ ಉರಿಯುತ್ತಿರುವ ಕಟ್ಟಡದಿಂದ ವ್ಯಕ್ತಿಯನ್ನು ಕೆಳಗಿಳಿಸಲು ಉಪಯೋಗಿಸುವ ಒಂದು ರೀತಿಯ ಕುಣಿಕೆಗಂಟು. ಈ ಗಂಟಿನಲ್ಲಿ ಎರಡು ಕುಣಿಕೆಗಳಿರುತ್ತವೆ. ಒಂದು ಚಿಕ್ಕದು, ಒಂದು ದೊಡ್ಡದು, ರೋಗಿಯನ್ನು ಈ ಕುಣಿಕೆಗಳೊಳಗೆ ಕುರ್ಚಿಯ ಮೇಲೆ ಕುಳಿತಿರುವಂತೆ ಕೂಡಿಸಿಕೊಂಡು, ಸುರಕ್ಷಿತ ಸ್ಥಳಕ್ಕೆ ಇಳಿಸಿಕೊಳ್ಳಬಹುದು.

ಈ ಗಂಟನ್ನು ಹಾಕುವುದಕ್ಕೆ ದಪ್ಪ ಗಾತ್ರದ ಉದ್ದನೆಯ ಹಗ್ಗವು ಬೇಕಾಗುತ್ತದೆ. ಕನಿಷ್ಠ ಕಟ್ಟಡದ ಎತ್ತರದ ಎರಡರಷ್ಟು ಉದ್ದದ ಹಗ್ಗವು ಬೇಕಾಗುತ್ತದೆ. ಕುರ್ಚಿ ಗಂಟನ್ನು ಹಗ್ಗದ ಸುಮಾರು ಮಧ್ಯದಲ್ಲಿ ಹಾಕಲಾಗುತ್ತದೆ.

**ಕುರ್ಚಿ ಗಂಟನ್ನು ಹಾಕುವ ರೀತಿ:** ಹಗ್ಗದ ಮಧ್ಯಭಾಗವನ್ನು ಕೈಗೆತ್ತಿಕೊಳ್ಳಿ, ಕೊಟ್ಟಿಗೆ ಗಂಟಿಗೆ ಮಾಡುವ ರೀತಿಯಲ್ಲಿ ಎರಡು ಕುಣಿಕೆಗಳನ್ನು ಮಾಡಿಕೊಳ್ಳಿ. (ಚಿತ್ರದಲ್ಲಿರುವಂತೆ) ಈ ಎರಡು ಕುಣಿಕೆಗಳನ್ನು ಒಂದರೊಳಗೊಂದು ಬರುವಂತೆ ತೂರಿಸಿ, ಎಳೆದುಕೊಳ್ಳಿ. ಅವಶ್ಯಕತೆಗೆ ತಕ್ಕಂತೆ ಒಂದನ್ನು ದೊಡ್ಡದಾಗಿಯೂ, ಒಂದನ್ನು ಚಿಕ್ಕದಾಗಿಯೂ ಮಾಡಿಕೊಳ್ಳಿ. ಈ ಎರಡು ಕುಣಿಕೆಗಳ ಮೇಲೆ ಎಳೆತ ಬಂದಾಗ ಜಾರಿಕೊಳ್ಳದಂತೆ ಅರೆಗಂಟು/ತಡೆಗಂಟುಗಳನ್ನು ಹಾಕಿ (ಚಿತ್ರದಲಿರು ವಂತೆ). ಈಗ ಗಂಟು ಮುಗಿಯಿತು.



**ಉಪಯೋಗಿಸುವ ರೀತಿ:**

ನೆಲದ ಮೇಲೆ ನಿಂತು ಗಂಟನ್ನು ಹಾಕಿ, ಮೇಲಿರುವ ರಕ್ಷಕ ತಂಡದವರಿಗೆ ಗಂಟು ಸಮೇತ ಹಗ್ಗವನ್ನು ಕಳುಹಿಸಬೇಕು. ಅವರು, ರೋಗಿಯನ್ನು ಗಂಟಿನ ಕುಣಿಕೆಯೊಳಗೆ ಹಿತವಾಗಿರುವಂತೆ ಕೂಡಿಸುತ್ತಾರೆ. ಸಣ್ಣ ಕುಣಿಕೆಯ ಒಳಗೆ, ಭುಜ ಮಟ್ಟದಲ್ಲಿ ಕಂಕುಳುಗಳವರೆಗೆ, ಮುಂಡವು ಬರುವಂತೆ, ರೋಗಿಯ ತಲೆ ಮತ್ತು ಕೈಗಳನ್ನು ತೂರಿಸಬೇಕು. ದೊಡ್ಡ ಕುಣಿಕೆಯೊಳಗೆ ಮೊಣಕಾಲುಗಳ ಕೆಳಗಿನ ಭಾಗವು

ಇರುವಂತೆ ರೋಗಿಯ ಕಾಲುಗಳನ್ನು ತೂರಿಸಬೇಕು. ಈಗ ನಿಧಾನವಾಗಿ ರೋಗಿಯನ್ನು ಕೆಳಗಿಳಿಸಿದರೆ, ಅವನು ಸುಖಾಸೀನ ಕುರ್ಚಿಯ ಮೇಲೆ ಕುಳಿತಿರುವ ಭಂಗಿಯಲ್ಲಿ ಕೆಳಕ್ಕೆ ಬರುತ್ತಾನೆ.

ರೋಗಿಯನ್ನು ಕೆಳಗಿಳಿಸುವಾಗ ನಿಧಾನವಾಗಿ, ಏಕಗತಿಯಲ್ಲಿ ಒಂದೊಂದೇ ಇಂಚು ಇಳಿಸುತ್ತಾ ಬರಬೇಕು. ಹಾಗೆ ಇಳಿಸುವಾಗ ರೋಗಿಯ ತಲೆ, ಕೈಕಾಲುಗಳು ಗೋಡೆಗೂ, ಗೋಡೆಯ ಮೇಲಿನ ಕಪೋತ (cornice)ಗಳಿಗೂ ತಗುಲದಂತೆ ನೋಡಿಕೊಳ್ಳಬೇಕು. ಮೇಲಿನವರು, ಯಾವುದಾದರೊಂದು ದುಂಡನೆಯ ವಸ್ತುವನ್ನು ಬಳಸಿ ಅದರ ಮೇಲೆ ಹಗ್ಗವು ಸುಲಭವಾಗಿ ಜಾರುವಂತೆ ಕೆಳಗೆ ಬಿಡುವುದು ಉತ್ತಮ. ಕೆಳಗೆ ಬಿಡುವಾಗ ಥಟ್ಟನೆಯ ಸೆಳೆತ–ಸಂಕೋಚಗಳು (Jerks) ಇಲ್ಲದಂತೆ ಎಚ್ಚರದಿಂದಿರಬೇಕು. ಇದೇ ವೇಳೆ ಕೆಳಗಿನ ರಕ್ಷಣಾ ತಂಡದವರು, ಹಗ್ಗವನ್ನು ಎಳೆದಿಟ್ಟುಕೊಳ್ಳುತ್ತಾ, ರೋಗಿಯು ಗೋಡೆಗೆ ತಗುಲಿ, ಗಾಯಗೊಳ್ಳದಂತೆ ಜಾಗರೂಕರಾಗಿರಬೇಕು.

### (2) ದಾರಿಗಳ್ಳನ ಮಲಕು ಗಂಟು (Highway Man's Hitch):

ದಾರಿಗಳ್ಳನ ಮಲಕು ಗಂಟು, ಎಳೆದರೆ ಸುಲಭವಾಗಿ ಬಿಚ್ಚಿಕೊಳ್ಳುವ ಗಂಟುಗಳ ಗುಂಪಿಗೆ ಸೇರಿದ್ದು, ಇದು ಬಹಳ ಉಪಯುಕ್ತವಾದ ಗಂಟು ಕೊನೆಯನ್ನು ಜಗ್ಗಿ ಎಳೆದರೆ ಸಾಕು, ಗಂಟು ತಾನಾಗಿ ಬಿಚ್ಚಿಕೊಂಡು, ಕ್ಷಣಾರ್ಧದಲ್ಲಿ ಹಗ್ಗವು ಕೈಗೆ ಬರುತ್ತದೆ. ಇದಕ್ಕೊಂದು ಕಥೆ, ಹಿಂದಿನ ಕಾಲದಲ್ಲಿ, ಹೆದ್ದಾರಿಗಳಲ್ಲಿ ದಾರಿಗಳ್ಳರು ಕುದುರೆ ಸವಾರಿ ಮಾಡುತ್ತಿದ್ದು, ಪ್ರಯಾಣೀಕರನ್ನು ದೋಚುತ್ತಿದ್ದರು. ತಮ್ಮ ಕುದುರೆಗಳನ್ನು ಕಟ್ಟುವಾಗ ಈ ಗಂಟನ್ನು ಮರಕ್ಕೋ, ಕೊಂಬೆಗೋ ಕಟ್ಟುತ್ತಿದ್ದರು. ತುರ್ತು ಹೊರಡಬೇಕಾದಾಗ ತಮ್ಮ ಕುದುರೆಯನ್ನೇರಿ, ಕೊನೆಯನ್ನು ಹಿಡಿದು ಜಗ್ಗಿ, ದೌಡಾಯಿಸುತ್ತಿದ್ದರು. ಜಗ್ಗಿದಾಗ ಗಂಟು ಬಿಚ್ಚಿಕೊಂಡು, ಹಗ್ಗವು ಕೈಗೆ ಬಂದ ಕ್ಷಣ ಮಾತ್ರದಲ್ಲಿ, ಸುರಕ್ಷಿತವಾಗಿ ಮಾಯವಾಗಲು ಸಹಾಯವಾಗುತ್ತಿತ್ತು.

**ಕಟ್ಟುವ ರೀತಿ:** ಹಗ್ಗದಲ್ಲಿ ಒಂದು ಕುಣಿಕೆ ಮಾಡಿಕೊಳ್ಳಬೇಕು. ಮರವನ್ನು ಹತ್ತಬೇಕು. ಈ ಕುಣಿಕೆಯ ಭಾಗವನ್ನು ಮರ/ಕೊಂಬೆಯನ್ನು ಸುತ್ತಿ ತೆಗೆದುಕೊಳ್ಳಬೇಕು. ಎಳೆತವಿರುವ ಭಾಗದ ಹಗ್ಗವನ್ನು ತೂರಿಸಬೇಕು. ಈಗ ಅದರಲ್ಲೊಂದು ಕುಣಿಕೆ ಮಾಡಿಕೊಳ್ಳಬೇಕು. ಈ ಕುಣಿಕೆಯೊಳಗೆ, ಎಳೆತವಿಲ್ಲದ ಹಗ್ಗದ ಭಾಗವನ್ನು ತೂರಿಸಬೇಕು. ಈಗ ಎಳೆತದ ಭಾಗಕ್ಕೆ ಭಾರಬಿದ್ದರೆ (ಜಗ್ಗಿಸಿ ಎಳೆದರೆ) ಗಂಟು ಹಿಡಿದುಕೊಳ್ಳುತ್ತದೆ.



ಎಳೆತದ ಭಾಗವನ್ನು ಎಷ್ಟೇ ಎಳೆದರೂ ಗಂಟು ಗಟ್ಟಿಯಾಗುತ್ತಾ ಹೋಗುತ್ತದೆ. ಅದೇ ಇನ್ನೊಂದು ಕೊನೆಯನ್ನು ಎಳೆದರೆ, ಕ್ಷಣಾರ್ಧದಲ್ಲಿ ಗಂಟು ಮಾಯವಾಗಿ, ಹಗ್ಗವು ಕೈಗೆ ಬರುತ್ತದೆ.

ದೋಣಿಯನ್ನು ಹಿಡಿದು ಕಟ್ಟಲು ಈ ಗಂಟು ಉಪಯೋಗಕ್ಕೆ ಬರುತ್ತದೆ. ಎತ್ತರದಲ್ಲಿರುವ ಅಡ್ಡವಾಗಿ ಚಾಚಿಕೊಂಡಿರುವ ಮರದ ಕೊಂಬೆಗೆ ಈ ಗಂಟನ್ನು ಹಾಕಿರಿ. ಸ್ಕೌಟುಗಳು ಮೇಲೆ ಹತ್ತಲೂ, ಕೆಳಗಿಳಿಯಲೂ, ಎಳೆತದ ಭಾಗದ ಹಗ್ಗವನ್ನು ಉಪಯೋಗಿಸಬಹುದು. ಅದೇ ಕೆಳಗಿಳಿದ ಮೇಲೆ, ಕೊನೆಯದಾಗಿ ಇನ್ನೊಂದು ಭಾಗದ ಹಗ್ಗವನ್ನೆಳೆದರಾಯಿತು, ಹಗ್ಗವು ಕೈಗೆ ಬರುತ್ತದೆ. ರ್‍ಯಾಲಿಗಳಲ್ಲಿ, ಮೇಳಗಳಲ್ಲಿ ಇದೊಂದು ಆಕರ್ಷಕ ಪ್ರದರ್ಶನ ವಿಷಯವಾಗುತ್ತದೆ.

**(3) ಹಿಡಿಕೆ ಗಂಟು (Man harness knot):** ಮೂಲತಃ ಸೈನ್ಯದವರಿಂದ ಬಂದೂಕು ಬಂಡಿಯುಲ್ಲಿ ಅಥವಾ ನಡೆದಾಡುವಾಗ ಭುಜದ ಮೇಲೆ, ಬಂದೂಕುಗಳನ್ನು ಹಿಡಿದಿಟ್ಟುಕೊಳ್ಳಲು, ಈ ಗಂಟನ್ನು ಉಪಯೋಗಿಸಲಾಗುತ್ತಿದ್ದಿತು. ಹಗ್ಗದ ಒಂದು ಕೊನೆಯನ್ನು ಬಂದೂಕು ಬಂಡಿಯ ಅಚ್ಚಿಗೆ ಕಟ್ಟಿ ಇನ್ನೊಂದು ಕೊನೆಯನ್ನು ಭುಜದ ಮೇಲೆ ಕುಣಿಕೆ ಹಾಕಿ ಕಟ್ಟಿಕೊಳ್ಳಲಾಗುತ್ತಿದ್ದಿತು. ಈ ಮಧ್ಯೆ ಹಗ್ಗದಲ್ಲಿ ಅಲ್ಲಲ್ಲಿ ಹಿಡಿಕೆ ಗಂಟುಗಳನ್ನು ಹಾಕಿ, ಬಂದೂಕುಗಳನ್ನು ತೂರಿಸಲಾಗುತ್ತಿದ್ದಿತು. ಇದರಿಂದ ಸೈನಿಕರು, ನಿರಾಳವಾಗಿ ಕೈಬೀಸುತ್ತಾ ನಡೆಯಬಹುದಾಗಿದ್ದಿತು. ಬಂದೂಕುಗಳನ್ನು ಹೊತ್ತಂತೆಯೂ ಆಯಿತು.

ಗಂಟು ಹಾಕುವ ರೀತಿ: ಹಗ್ಗದ ಮಧ್ಯದಲ್ಲಿ ಕುಣಿಕೆ ಮಾಡಿಕೊಂಡು, ಒಂದು ತಿರುಚು ಹಾಕಿ, ಅದನ್ನು ಎಳೆತದ ಹಗ್ಗದ ಮೇಲೆ ತಂದು, ತಿರುಚಿನ ಹೊರಗಿನ ಕುಣಿಕೆಯನ್ನು ಒಳಗೆ ಹಾಕಿ (ಚಿತ್ರ ನೋಡಿ)



ಇಬ್ಬರು ಮೂವರು ಸೇರಿ ಭಾರವಾದ ವಸ್ತುವಾಹನಗಳನ್ನೊಯ್ಯಲು ಈ ಗಂಟು ಉಪಯೋಗಕ್ಕೆ ಬರುತ್ತದೆ. ಉದಾ: ಕೈಗಾಡಿ ಎಳೆಯುವುದು.

**ಹಗ್ಗವನ್ನು ಹೊಸೆದು ಕೂಡಿಸುವುದು (Rope Splicing)**

ಹಗ್ಗದ ಕೊನೆಯಲ್ಲಿ ಸ್ವಲ್ಪದೂರ ಎಳೆಗಳನ್ನು ಬಿಚ್ಚಿಕೊಳ್ಳುವುದು. ಈ ಎಳೆಗಳನ್ನು ಬೇರೆ ಹಗ್ಗದ ಎಳೆಗಳೊಡನೆ ಅಥವಾ ಅದೇ ಹಗ್ಗದ ಎಳೆಗಳೊಡನೆ ಹೆಣೆಯಬೇಕು ಎಂದರೆ ಎಳೆಗಳನ್ನು ಕೂಡಿಸಬೇಕು. ಇದರ ಉದ್ದೇಶಗಳು ಮೂರು: (i) ಎರಡು ಹಗ್ಗಗಳನ್ನು ಒಂದು ಸೇರಿಸುವುದು, (ii) ಹಗ್ಗವನ್ನು ಶಕ್ತಿಯುತವನ್ನಾಗಿ ಮಾಡುವುದು (iii) ಹಗ್ಗದ ಕೊನೆಯಲ್ಲಿ ಅಥವಾ ಮಧ್ಯ ಭಾಗದಲ್ಲಿ ಕುಣಿಕೆಯನ್ನು ಮಾಡುವುದು.

ಸ್ಕೌಟುಗಳು ಕುಣಿಕೆ ಹೆಣಿಗೆ (ಹಿಮ್ಮುಖ ಹೆಣಿಗೆ) (Back splice) ಕಿರು ಹೆಣೆತ (Short splice) ಮತ್ತು ಕಣ್ಣುಣಿಕೆ ಹೆಣೆತ (Eye splice) ಇವುಗಳನ್ನು ತಿಳಿದಿರಬೇಕು. ಇವೇ ಅಲ್ಲದೇ ಸೇರಿಸಿ ಹೊಸೆದ ಕಣ್ಣುಣಿಕೆಯ (Tucked Eye Splice) ಬಗ್ಗೆಯೂ ತಿಳಿದಿರಬೇಕು. ಸೇರಿಸಿ ಹೊಸೆದ ಕಣ್ಣುಣಿಕೆಯನ್ನು ಡಾಕ್ಕರ್ಸ್ ಸ್ಪ್ಲೈಸ್ ಎಂದೂ ಕರೆಯುತ್ತಾರೆ.

**(i) ಹಿಮ್ಮುಖ ಹೆಣಿಗೆ:** ಹಿಮ್ಮೊಗ ಹೆಣೆತವು, ಹುರಿಸುತ್ತುವುದಕ್ಕೆ ಒಳ್ಳೆಯ ಪರ್ಯಾಯವಾಗುತ್ತದೆ. ಇದರಿಂದ ಹಗ್ಗದ ಕೊನೆಯು ದಪ್ಪವಾಗುತ್ತದೆ. ಇದೊಂದು ಪ್ರತಿಕೂಲ ಅಂಶ ಏಕೆಂದರೆ ಹಗ್ಗವನ್ನು ರಾಟೆ ಅಥವಾ ಗಡೆ ಗಡೆಯ (Pulley) ಒಳಗೆ ಸೇರಿಸಲು ಕಷ್ಟವಾಗುತ್ತದೆ.

ಈ ಹೊಸೆತವನ್ನು ಪ್ರಾರಂಭಿಸಲು ಮೊದಲು ಕಿರೀಟ ಗಂಟು ಹಾಕಿಕೊಳ್ಳಬೇಕು. ಕೆಲವು ಇಂಚುಗಳಷ್ಟು ಎಳೆಗಳನ್ನು ಬಿಚ್ಚಿಕೊಳ್ಳುವುದು. ಈಗ ಒಂದು ಎಳೆಯಲ್ಲಿ ಕುಣಿಕೆ ಮಾಡಿಕೊಂಡು, ಅದರ ಮುಂದಿನ ಎಳೆಯನ್ನು ಕುಣಿಕೆಯೊಳಗೆ ತೂರಿಸಬೇಕು. ಅಪ್ರದಕ್ಷಿಣವಾಗಿ ಮುಂದುವರೆಯಬೇಕು. ಕೊನೆಯ ಎಳೆಯ ಕುಣಿಕೆಯೊಳಗೆ, ಮೊದಲ ಎಳೆಗಳನ್ನು ತೂರಿಸಬೇಕು. ಈಗ ಎಲ್ಲಾ ಎಳೆಗಳೂ

ಕುಣಿಕೆಗಳೊಳಗೆ ಸೇರಿ ಕಿರೀಟಗಂಟು (Crown knot) ಪ್ರಾರಂಭವಾಯಿತು. ಒಂದೊಂದೇ ಎಳೆಯನ್ನು ಎಳೆದು ಬಿಗಿಸಿಕೊಳ್ಳಿ. (ಚಿತ್ರವನ್ನು ನೋಡಿ) ಬಿಚ್ಚಿಕೊಂಡ ಎಳೆಗಳು ಪೂರ್ತಿ ಆಗುವವರೆಗೆ 2–3 ಬಾರಿ ಇದನ್ನು ಮುಂದುವರೆಸಿ. ಕೊನೆಯಲ್ಲಿ ತುದಿಗಳನ್ನು ಹಗ್ಗದ/ದಾರದ ಗಾತ್ರದ ಅರ್ಧದಷ್ಟನ್ನು ಬಿಟ್ಟು, ಕತ್ತರಿಸಿ, ಅಂದಗೊಳಿಸಿ. ಈ ತುದಿಯು ಉಪಯೋಗಿಸುವಾಗಿನ ಎಳೆತಗಳಿಗೆ ರಕ್ಷೆ ಇದ್ದಂತೆ. ಈ ರೀತಿ ಮಾಡದಿದ್ದರೆ, ಉಪಯೋಗಿಸುವಾಗ ಹಗ್ಗವು ಮುಂದೆ ಬಂದು, ಹೊಸೆತವು ಬಿಚ್ಚಿಕೊಳ್ಳುತ್ತದೆ.

ಹಗ್ಗದ ಕೆಲಸವು ಮುಗಿದ ಮೇಲೆ, ಹಗ್ಗವನ್ನು ನೆಲದ ಮೇಲೆ ಹಾಸಿ, ಚಪ್ಪಟೆಯಾದ ಹಲಗೆ/ಷೂ/ಚಪ್ಪಲಿಯ ಅಟ್ಟೆಗೆ ಸುತ್ತಿ ತೆಗೆದಿಡಬೇಕು.



ಹಿಮ್ಮುಖ ಹೆಣಿಗೆ

**ಕಿರು ಹೆಣಿಗೆ:**

ಸ್ವಲ್ಪ ಉದ್ದ ಎಳೆಗಳನ್ನು ಬಿಚ್ಚಿಕೊಳ್ಳಿ. ಕೊನೆಗಳನ್ನು ಎದಿರು, ಬದಿರಾಗಿಡಿ. ಈಗ ಒಂದು ಹಗ್ಗದ ಎಳೆಗಳು, ಎದುರು ಹಗ್ಗದ ಎಳೆಗಳೊಡನೆ ಒಂದಾದ ಮೇಲೊಂದರಂತೆ, ವರಸೆಯಾಗಿ ಬರುವಂತೆ, ಸೇರಿಸುತ್ತಾ ಹೋಗಿ. ಒಂದು ವಿಧದಲ್ಲಿ ಇದನ್ನು "ಹಗ್ಗಗಳ ಮದುವೆ" ಎನ್ನುತ್ತಾರೆ. ಕೊನೆಯಲ್ಲಿ ತುದಿಗಳನ್ನು ಟ್ವೈನ್ ದಾರದಿಂದ ಬಂಧಿಸಿ.



ಕಿರು ಹೆಣಿಗೆ

ಈಗ ಎದುರು ಹಗ್ಗದ ಎಳೆಗಳನ್ನು ಅದೇ ರೀತಿ ಸೇರಿಸುತ್ತಾ ಹೋಗಿ. ನಿಮ್ಮ ಕಡೆಗೆ ಹಗ್ಗವನ್ನು ತಿರುಚುತ್ತಾ, ಎಳೆಗಳನ್ನು ಸೇರಿಸುತ್ತಾ ಹೋಗಿ. ಪ್ರತಿ ಎಳೆಯನ್ನು ಒಳ ಸೇರಿಸಿದಾಗಲೂ ಬಿಗಿಸುತ್ತಾ ಹೋಗಿ. ಮಧ್ಯೆ ಮಧ್ಯೆ ಜಾಗಬಿಡದಂತೆ ಎಚ್ಚರವಹಿಸಿ.

ಸಾಮಾನ್ಯವಾಗಿ ಎರಡೂ ಕಡೆ ಎರಡೆರಡು ಬಾರಿ ಸೇರಿಸಿ ಹೊಸೆದರೆ ಸಾಕು. ಮೂರು, ಮೂರು ಬಾರಿ ಸೇರಿಸಿದರಂತೂ, ಭರ್ಜರಿ ಆಯಿತು. ಅದಕ್ಕೂ ಹೆಚ್ಚು ಬಾರಿ ಅನವಶ್ಯಕ. ಎಳೆಗಳ ತುದಿಗಳನ್ನು ಸ್ವಲ್ಪಕಾಣುವಂತೆ ಬಿಟ್ಟಿರಬೇಕು. ಇದರಿಂದ ಎಳೆತವುಂಟಾದಾಗ ಅವು ಜಾರಿಕೊಳ್ಳುವುದಿಲ್ಲ.

**ಕಣ್ಕುಣಿಕೆ:**



ಕಣ್ಕುಣಿಕೆ

ಹೆಣಿಗೆಗಳಲ್ಲೆಲ್ಲಾ ಕಣ್ಕುಣಿಕೆಯು ಹೆಚ್ಚು ಉಪಯೋಗದಲ್ಲಿದೆ. ಹಗ್ಗವನ್ನು ಹಾಸಿಕೊಂಡು, ತುದಿಯಲ್ಲಿ ಸಾಕಷ್ಟು ಉದ್ದ, ಎಳೆಗಳನ್ನು ಪಂಖದ ರೀತಿಯಲ್ಲಿ ಬಿಡಿಸಿಕೊಳ್ಳಿ. ಈಗ ಕುಣಿಕೆಯನ್ನು ಮಾಡಿಕೊಳ್ಳಿ. ಹಗ್ಗದ ಗಟ್ಟಿ ಭಾಗದಲ್ಲಿ ತಿರುಚಿ, ಮಧ್ಯಭಾಗದಲ್ಲಿ ಒಂದು ಎಳೆಯನ್ನು ಸೇರಿಸಿ. ಅದರ ಮುಂದಿನ ಭಾಗದಲ್ಲಿರುವ ಎಳೆಯನ್ನು ತಿರುಚಿ ಇನ್ನೊಂದು ಎಳೆಯನ್ನು ಸೇರಿಸಿ. ಹೀಗೆ ಎಲ್ಲಾ ಎಳೆಗಳೂ ಆದ ಮೇಲೆ ಮತ್ತೆ ಎರಡನೆಯ ಬಾರಿ ಹಾಗೆಯೇ ಮಾಡಿ. ಮೂರನೆಯ ಬಾರಿಯೂ ಹಾಗೆಯೇ ಮಾಡಬಹುದು. ಅಲ್ಲಿಗೆ ನಿಲ್ಲಿಸಿ. ಕಣ್ಕುಣಿಕೆ ತಯಾರ್. ಕೊನೆಗಳನ್ನು ಕತ್ತರಿಸಿ ಅಂದಗೊಳಿಸಿ. ಟ್ವೈನ್ ದಾರದಿಂದ ಹುರಿ ಸುತ್ತಿ ಬಂಧಿಸಿದರಂತೂ ತಾಜಾ ಕೆಲಸವೇ ಆಯಿತು.

**ಸೇರಿಸಿ ಹೊಸೆದ ಕುಣಿಕೆ:**

ಸ್ಕೌಟಿಂಗ್‌ನಲ್ಲಿ ಇದು ಡಾಕ್ಕರ್ಸ್ ಸ್ಪ್ಲೈಸ್ ಎಂದೇ ಬಳಕೆಯಲ್ಲಿದೆ. ಹಗ್ಗದಲ್ಲಿ ಕಣ್ಣುಮಾಡಿಕೊಂಡು, ಹಗ್ಗವನ್ನು ಪೂರಾ ಒಳಗೆ ಸೇರಿಸಿ, ಹಲವಾರು ಇಂಚುಗಳು ಎಳೆದುಕೊಳ್ಳಿ. ಮತ್ತೆ ಒಳಗೆ ಸೇರಿಸಿ, ಎಳೆದುಕೊಳ್ಳಿ.

ಈ ಕುಣಿಕೆಯು ಸಣ್ಣ ಗಾತ್ರದ ಹಗ್ಗಗಳು ಮತ್ತು ದಾರಗಳಿಗೆ ಹೆಚ್ಚು ಉಪಯುಕ್ತವಾದುದು. ಗಾಳಿಯು ಬೀಸುವಾಗ, ಟೆಂಟ್‌ನ ಕಂಬಗಳನ್ನು ಅಲುಗದಂತೆ

ಇರಿಸಿಕೊಳ್ಳಲು ಇದು ವಿಶೇಷವಾಗಿ ಕೆಲಸಕ್ಕೆ ಬರುತ್ತದೆ. ಉದ್ದನೆಯ ಹಗ್ಗದ ಮಧ್ಯೆ ಕಣ್ಣು ಮಾಡಿಕೊಂಡು, ಈ ಕಣ್ಕುಣಿಕೆಯನ್ನು ನಿಲುಗಂಬದ ಮೊಳೆಗೆ ಹಾಕಿ, ಹಗ್ಗದ ಎರಡು ಕೊನೆಗಳನ್ನು, ನೆಲಕ್ಕೆ ಹೊಡೆದ ಗೂಟಗಳಿಗೆ ಕಟ್ಟಿ ಬಿಗಿಸಿದರಾಯಿತು. ಅಷ್ಟೆ!

ಈ ಕಣ್ಕುಣಿಕೆಗಳಿಗೆ ಇನ್ನೂ ಅನೇಕ ರೀತಿಯ ಉಪಯೋಗಗಳಿವೆ.



## ಅಧ್ಯಾಯ–31

# ಸಂಕೇತಕ್ರಮ

ಮೋರ್ಸ್ ಸಂಕೇತ ಕ್ರಮವು, ಅಂತರಾಷ್ಟ್ರೀಯ ಸಂಕೇತ ಪದ್ಧತಿಯಾಗಿದೆ. ಅದನ್ನು ಉಪಯೋಗಿಸುವ ರೀತಿಯು ದೂರ ಸಂಚಾರ ಶೈಲಿಯಲ್ಲಾಗಬಹುದು; (Telegraph Key) ಮಾರ್ಸ್ ಬಾವುಟದಿಂದಾಗಬಹುದು (Morse Flag); ಬಿಂಬಕಿರಣ (Heliographs)ದಿಂದಾಗಬಹುದು; ಸಂಕೇತ ದೀಪ (Signal Lamps) ಗಳಿಂದಾಗಬಹುದು; ಅಥವಾ ನಾದ ಮಣಿ (Buzzers)ಗಳಿಂದಾಗಬಹುದು.

ದೂರ ಸಂಚಾರ ಶೈಲಿಯಲ್ಲಿ ವಿದ್ಯುತ್ ಆವೇಗಗಳು (Electrical impulses) ಶಬ್ದದ ಆವೇಗಗಳಾಗಿ ಪರಿವರ್ತಿತವಾಗುತ್ತವೆ. ಈ ಶಬ್ದ ಆವೇಗಗಳು ಬಿಂದುಗಳು (Dots) ಮತ್ತು ರೇಖೆಗಳ (Dashes) ರೂಪದಲ್ಲಿರುತ್ತವೆ. ವರ್ಣಮಾಲೆಯ ಅಕ್ಷರಗಳನ್ನೂ, ಸಂಖ್ಯೆ 1 ರಿಂದ 9 ಹಾಗೂ ಸೊನ್ನೆಯನ್ನೂ, ಈ ಬಿಂದು, ರೇಖೆಗಳ ಮೂಲಕ ಸಂಕೇತಗಳನ್ನು ರವಾನಿಸಲಾಗುತ್ತದೆ, ಅಥವಾ ಸ್ವೀಕರಿಸಲಾಗುತ್ತದೆ.

ಅನುಕೂಲಕರವಾದ ಗುಂಪುಗಳನ್ನಾಗಿ ಮಾಡಿ, ಕಲಿಯುವ ಮೂಲಕ ಅಕ್ಷರಗಳನ್ನು ಸುಲಭವಾಗಿ ಓದಿಕೊಳ್ಳಬಹುದು.

1) ಬಿಂದುಗಳು ಮಾತ್ರ: E● I●● S●●● H●●●●

2) ರೇಖೆಗಳು ಮಾತ್ರ: T▬ M▬▬ O▬▬▬

3) ಬಿಂದುಗಳ ಬಳಿಕ ರೇಖೆಗಳು: A●▬ U●●▬ V●●●▬

4) ರೇಖೆಗಳ ಬಳಿಕ ಬಿಂದುಗಳು: N▬● D▬●● B▬●●●

5) ಪ್ರತಿಬಿಂಬಗಳು: F●●▬● L●▬●●
G▬▬● W●▬▬
Q▬▬●▬ Y▬●▬▬

6) ವ್ಯತಿರಿಕ್ತಗಳು: K ▬●▬ R ●▬●

7) ಇತರೆ: C ▬●▬● X ▬●●▬ P ●▬▬●
J ●▬▬▬ Z ▬▬●●

8) ಸಂಖ್ಯೆಗಳು:
(ಇವೂ ಒಂದು ರೀತಿಯಲ್ಲಿ
ವ್ಯತಿರಿಕ್ತಗಳೇ)

1. ●▬▬▬▬ 6. ▬●●●●
2. ●●▬▬▬ 7. ▬▬●●●
3. ●●●▬▬ 8. ▬▬▬●●
4. ●●●●▬ 9. ▬▬▬▬●
5. ●●●●● 0. ▬▬▬▬▬

ಅಂಕೆ ಚಿಹ್ನೆ ●●▬●●
ಹೊಡೆದು ಹಾಕು ●●●●●●●●

**ಮೋರ್ಸ್ ಬಾವುಟ:**

ಬಾವುಟಗಳ ಮೂಲಕ ಸಹ ಮೋರ್ಸ್ ಸಂಕೇತವನ್ನು ಕಳುಹಿಸಬಹುದು. ಬಾವುಟವು ಬಿಳಿ ಅಥವಾ ನೀಲಿ ಬಣ್ಣದ 24" ಚೌಕದ ಬಟ್ಟೆ ಆಗಿರುತ್ತದೆ. ಇದರ ಮಧ್ಯೆ ಅಡ್ಡಡ್ಡವಾಗಿ ನೀಲಿ/ಬಿಳಿ ಬಣ್ಣದ 3" ಅಗಲದ ಅಡ್ಡ ಪಟ್ಟಿ ಇರುತ್ತದೆ. (ಬಿಳಿ ಒಡಲಿಗೆ ನೀಲಿ ಬಣ್ಣ/ನೀಲಿ ಒಡಲಿಗೆ ಬಿಳಿ ಬಣ್ಣ) ಬಾವುಟದ ಹಿಡಿಯು 2 1/2 ಅಥವಾ 3 ಅಡಿ ಉದ್ದ ಇರುತ್ತದೆ. ಇದು ಬುಡದಲ್ಲಿ 3/4" ಗಾತ್ರವಿರುತ್ತದೆ, ತುದಿಯಲ್ಲಿ 1/2" ಗಾತ್ರವಿರುತ್ತದೆ ಮತ್ತು ಪೂರಾ ಉದ್ದ ದುಂಡಗಿರುತ್ತದೆ.



ಎಡಗೈನಲ್ಲಿ ಹಿಡಿಯ ಬುಡವನ್ನು ಹಿಡಿದಿರಬೇಕು. ಈ ಕೈ, ಗಲ್ಲದ ಮಟ್ಟದಲ್ಲಿರಬೇಕು. ಎಡಗೈನಿಂದ ಸ್ವಲ್ಪ ಮೇಲೆ ಬಲಗೈನಿಂದ ಹಿಡಿಯನ್ನು ಹಿಡಿದಿರಬೇಕು. ಬಾವುಟವು ಎಡಗಡೆಗೆ $33^0$ ವಾಲಿರಬೇಕು. ಕಾಲುಗಳು ವಿಶ್ರಾಮ್ ಸ್ಥಿತಿಯಲ್ಲಿರಬೇಕು. ಇದು "ತಯಾರ್" ಸ್ಥಿತಿ.

ಎಡಗೈ ಅಲುಗದಂತೆ, ಸ್ಥಿರವಾಗಿದ್ದುಕೊಂಡು, ಬಲಗೈನಿಂದ ಬಾವುಟವನ್ನು ಚಲಿಸುವುದರ ಮೂಲಕ ಸಂಕೇತಗಳನ್ನು ಕಳುಹಿಸಲಾಗುತ್ತದೆ.

**ಬಿಂದು:** 'ತಯಾರ್' ಸ್ಥಿತಿಯಿಂದ $30^0$ ಬಲಗಡೆಗೆ ಬಾವುಟವನ್ನು ಚಲಿಸಿ, 'ತಯಾರ್' ಸ್ಥಿತಿಗೆ ವಾಪಸ್ಸಾದರೆ ಅದು ಒಂದು "ಬಿಂದು"ವಿನ ಲೆಕ್ಕ.

**ರೇಖೆ:** ತಯಾರ್ ಸ್ಥಿತಿಯಿಂದ ಬಲಗಡೆಗೆ ನೆಲಮಟ್ಟಕ್ಕೆ ಸಮಾನಾಂತರವಾಗಿ ಚಲಿಸಿ, ಕ್ಷಣಕಾಲ ಬಿಟ್ಟು ವಾಪಸ್ಸಾದರೆ ಅದು ಒಂದು "ರೇಖೆ"ಯ ಲೆಕ್ಕ.

ಬಿಂದು ರೇಖೆಗಳ ಚಲನೆಗಳು, ಆಯಾ ಅಕ್ಷರ ಅಥವಾ ಸಂಖ್ಯೆಗೆ ನಿರಂತರವಾಗಿರಬೇಕು. ಮಧ್ಯೆ ನಿಧಾನಿಸಿದರೆ ಬೇರೆಯೇ ಅಕ್ಷರ/ಸಂಖ್ಯೆಯು ಲೆಕ್ಕಕ್ಕೆ ಬಂದು ಬಿಡುತ್ತದೆ. ಅಕ್ಷರ/ಸಂಖ್ಯೆಗಳ ಮಧ್ಯೆ ಕೊಡುವ ಅಂತರಕ್ಕಿಂತ ಸ್ವಲ್ಪ ಜಾಸ್ತಿ ಅಂತರವನ್ನು ಪದಗಳ ಮಧ್ಯೆ ಕೊಡಲಾಗುತ್ತದೆ. ಈ ಅಂತರಗಳೇ ಇಲ್ಲದಿದ್ದರೆ ಏನನ್ನೂ ಅರ್ಥೈಸಲು ಆಗುವುದಿಲ್ಲ.

ಮೋರ್ಸ್ ಸಂಕೇತಗಳನ್ನು ಸಂಕೇತ ದೀಪಗಳ ಮೂಲಕ, ಟಾರ್ಚ್ ಮೂಲಕ, ಬಿಂಬಕಿರಣಗಳ ಮೂಲಕ, ನಾದ ಮಣಿಗಳ ಮೂಲಕ, ಮತ್ತಿತರ ವಿಧಗಳಲ್ಲಿ ಕಳುಹಿಸಬಹುದು.

ಅಕ್ಷರ, ಸಂಖ್ಯೆಗಳೇ ಅಲ್ಲದೇ, ವಾರ್ತೆಯನ್ನು ಕಳುಹಿಸುವಾಗ, ಸ್ವೀಕರಿಸುವಾಗ ಉಪಯೋಗಿಸಬೇಕಾದ ಕೆಲವು ಸಂಕೇತಗಳು ಹೀಗಿವೆ:

| | ಯಾರು ಕಳುಹಿಸಬೇಕು | ಉದ್ದೇಶ | ಕಳುಹಿಸುವ ಸಂಕೇತ |
|---|---|---|---|
| 1. | ಕಳುಹಿಸುವವರು | ತಯಾರಾಗಿದ್ದೀರಾ? | ನಿರಂತರವಾಗಿ V.E. |
| 2. | ಕಳುಹಿಸುವವರು | ತಪ್ಪಾಗಿದೆ. ಆ ಪದವನ್ನು ಹೊಡೆದು ಹಾಕಿ/ತೆಗೆಯಿರಿ | 8 ಬಿಂದುಗಳು. |
| 3. | ಕಳುಹಿಸುವವರು | ವಾರ್ತೆ/ಸಂದೇಶ ಮುಗಿಯಿತು | A.R. |
| 4. | ಸ್ವೀಕರಿಸುವವರು | ತಯಾರಾಗಿದ್ದೇನೆ. ಕಳುಹಿಸಿ | K. |

| | | | |
|---|---|---|---|
| 5. | ಸ್ವೀಕರಿಸುವವರು | ಸ್ವಲ್ಪ ತಡೆಯಿರಿ. ತಯಾರಾಗಿಲ್ಲ. | Q |
| 6. | ಸ್ವೀಕರಿಸುವವರು | ಸ್ವೀಕರಿಸುತ್ತಿರುವುದಕ್ಕೆ ಸಾಮಾನ್ಯ ಉತ್ತರ | T(ನಿರಂತರವಾಗಿ) |
| 7. | ಸ್ವೀಕರಿಸುವವರು | ವಾರ್ತೆ/ಸಂದೇಶವನ್ನು ಸರಿಯಾಗಿ ಸ್ವೀಕರಿಸಲಾಗಿದೆ. | R. |

**ಹೊಗೆ ಮತ್ತು ಜ್ವಾಲೆಯ ಪ್ರಕಾಶ ಸಂಕೇತಗಳು:**

**ಹೊಗೆ ಸಂಕೇತ:** ಸಣ್ಣ ಮತ್ತು ದಪ್ಪ ಗಾತ್ರಗಳಲ್ಲಿ ಅಥವಾ ಏಕದಾರೆಯಾಗಿ ಹೊಗೆ ಬಿಡುವುದರ ಮೂಲಕ ಕಳುಹಿಸಬಹುದು. ಹೊಗೆಯ ಸಂಕೇತವನ್ನು ಹಗಲು ವೇಳೆಯಲ್ಲಿಯೂ ಕಳುಹಿಸಲು ಬರುತ್ತದೆ.

**ಜ್ವಾಲೆಯ ಪ್ರಕಾಶ ಸಂಕೇತ:** ರಾತ್ರಿಯ ಹೊತ್ತು ಮಾತ್ರ ಕಳುಹಿಸಬಹುದು. ಹ್ರಸ್ವ ಮತ್ತು ದೀರ್ಘ ಕಾಲಮಿತಿಗಳ ಪ್ರಕಾಶವು, ಹಗಲು ಹೊಗೆಯ ಸಂಕೇತದಂತೆಯೇ ಅರ್ಥ ಮಾಡಲು ಸಹಾಯವಾಗುತ್ತದೆ. ಸಂದೇಶವನ್ನು ಕಳುಹಿಸಲೂ ಬರುತ್ತದೆ.

**ಬೆಂಕಿಯ ಹೊಗೆಯನ್ನು ಉಂಟುಮಾಡುವುದು:**

ಬೆಂಕಿಯ ಹೊಗೆಯನ್ನುಂಟು ಮಾಡಲು, ಸಾಮಾನ್ಯವಾಗಿ ಬೆಂಕಿ ಮಾಡುವ ರೀತಿಯಲ್ಲಿಯೇ ಒಣಗಿದ ಪುರುಳೆ, ಸಿಬಿರು ಕಡ್ಡಿಗಳು ಮತ್ತು ಸಣ್ಣ ಸೌದೆಯನ್ನು ಉಪಯೋಗಿಸಿ, ಬೆಂಕಿಯನ್ನು ಜ್ವಲಿಸಿ, ಅದು ಚೆನ್ನಾಗಿ ಉರಿಯಲು ಆರಂಭವಾದ ಮೇಲೆ, ಪೂರಾ ಒಣಗದೆ, ಸ್ವಲ್ಪ ಹಸಿ ಇರುವ, ಹುಲ್ಲು, ಎಲೆ ಇತ್ಯಾದಿ ಅದರ ಮೇಲೆ ಹಾಕಿ, ಹೊಗೆಯಾಡಿಸಿ.

ಈಗ ಒದ್ದೆ ಇರುವ ಛದ್ದರವನ್ನು ಅದರ ಮೇಲೆ ಮುಚ್ಚಿ. ಛದ್ದರವನ್ನು ಮೇಲೆತ್ತಿದರೆ ಬೆಂಕಿಯು ಚಿಮ್ಮುತ್ತದೆ. ಕೂಡಲೆ ಮುಚ್ಚಿ. ಹೀಗೆ ಚಿಮ್ಮಿಸುವ ಹೊಗೆಯ ಗಾತ್ರ ಮತ್ತು ಚಿಮ್ಮುವ ರೀತಿ, ಕಾಲಮಿತಿಯ ಮೇಲೆ ಸಂಕೇತವು ಅವಲಂಬಿಸಿರುತ್ತದೆ. 'ಬಿಂದು'ವಿಗೆ ಸಣ್ಣ ಗಾತ್ರದ ಹೊಗೆ. ಇದಕ್ಕೆ ಛದ್ದರವನ್ನು ಮೇಲೆತ್ತಿ, ಎಂಟರವರೆಗೆ ಎಣಿಸಿ ಮುಚ್ಚಿಬಿಡಬೇಕು. ಎರಡು ಚಿಮ್ಮುವಿಕೆಗಳ ಮಧ್ಯೆ ನಿಯತ ಕಾಲದ ಅಂತರವನ್ನು ಅನುಸರಿಸಬೇಕು. ಏಕಧಾರೆಯ ಹೊಗೆಗೆ ಆರು ಸೆಕೆಂಡುಗಳ ಕಾಲ ಛದ್ದರವನ್ನು ಎತ್ತಿಹಿಡಿಯಬೇಕು.



ಹೊಗೆ ಸಂಕೇತವನ್ನು ಆಫ್ರಿಕಾ ಮತ್ತಿತರ ದೇಶಗಳಲ್ಲಿನ ಮೂಲನಿವಾಸಿಗಳು, ಉಪಯೋಗಿಸುತ್ತಾರೆ. ಅವರದೇ ಆದ, ಅವರಿಗೇ ಅರ್ಥವಾಗುವ ಸಂಕೇತ ಭಾಷೆ ಇರುತ್ತದೆ.

ಸ್ಕೌಟುಗಳು ತಮ್ಮದೇ ಆದ ಸಂಕೇತಗಳನ್ನು ಕಂಡುಕೊಂಡಿದ್ದಾರೆ. ದಪ್ಪ ಗಾತ್ರದ ಹೊಗೆಯು :

1) ಮೇಲೆ ಮೇಲೆ 3 ಬಾರಿ ನಿಧಾನಗತಿಯಲ್ಲಿ ಕಂಡುಬಂದರೆ – "ಮುಂದುವರೆಯಿರಿ" ಸೂಚಿಸುತ್ತದೆ.

2) ಏಕಗತಿಯಲ್ಲಿ ಬಿಟ್ಟು ಬಿಟ್ಟು ಸಣ್ಣ ಹೊಗೆಯು ಕಂಡುಬಂದರೆ, "ಎಲ್ಲರೂ ಬನ್ನಿ. ಒಟ್ಟು ಸೇರಿರಿ" ಎಂದರ್ಥ.

3) ಏಕಧಾರೆಯಾಗಿ ಹೊಗೆ ಬಿಟ್ಟರೆ "ನಿಲ್ಲಿ" ಎಂದು ಸೂಚಿಸುತ್ತದೆ.

(4) ಸಣ್ಣ ಮತ್ತು ದಪ್ಪ ಹೊಗೆಯನ್ನು ಒಂದಾದ ಮೇಲೊಂದರಂತೆ ಚಿಮ್ಮಿಸಿದರೆ ಅದು "ಅಪಾಯ" ಸೂಚಕ.

**ಜ್ವಾಲಾಪ್ರಕಾಶ ಸಂಕೇತಗಳು:**

ಒಣ ಸೌದೆಯನ್ನು ಉಪಯೋಗಿಸಿ, ಆದಷ್ಟೂ ಪ್ರಕಾಶಮಾನವಾದ ಜ್ವಾಲೆಯು ಮೇಲೇರುವಂತೆ, ಬೆಂಕಿಯನ್ನು ಉರಿಮಾಡಿ. ಜ್ವಾಲೆಯ ಪ್ರಕಾಶಕ್ಕೆ ಅಡ್ಡವಾಗಿ, ಸಮಾಚಾರವನ್ನು ಓದುವವರಿಗೂ, ಬೆಂಕಿಗೂ ಮಧ್ಯೆ, ಇಬ್ಬರು ಸ್ಕೌಟುಗಳು ಛದ್ದರವನ್ನು, ಅಡ್ಡಹಿಡಿದು ನಿಲ್ಲುತ್ತಾರೆ. ಇದರಿಂದ ಛದ್ದರವನ್ನು

ಇಳಿಬಿಟ್ಟಾಗ ಮಾತ್ರ ಓದಿಕೊಳ್ಳುವವರಿಗೆ ಪ್ರಕಾಶವು ಕಾಣಿಸುತ್ತದೆ. ಹ್ರಸ್ವಪ್ರಕಾಶಕ್ಕೆ 2 ಎಣಿಕೆ; ದೀರ್ಘ ಪ್ರಕಾಶಕ್ಕೆ 6 ಎಣಿಕೆ, ಎರಡಕ್ಷರಗಳ ಮಧ್ಯೆ 1. ಎಣಿಕೆ ಮಾಡಿ.

ಹೊಗೆ ಸಂಕೇತ ಪದ್ದತಿಯ ನೀತಿಯೇ ಇದಕ್ಕೂ ಅನ್ವಯಿಸುತ್ತದೆ ಮೋರ್ಸ್ ಅಕ್ಷರ ಪದ್ಧತಿಯನ್ನೂ ಉಪಯೋಗಿಸಬಹುದು.

**ಶಬ್ದ ಸಂಕೇತಗಳು:**

ಕೆಲವು ಆಫ್ರಿಕಾ ಮೂಲ ನಿವಾಸಿಗಳು ಡೋಲು, ನಗಾರಿಗಳನ್ನೂ, ಮರದ ಯುದ್ಧ ಕರೆಗಂಟೆಗಳನ್ನೂ ಉಪಯೋಗಿಸುತ್ತಾರೆ.



ವಿವರಗಳಿಗಾಗಿ, "**ಬಾಲಕರಿಗಾಗಿ ಸ್ಕೌಟಿಂಗ್**" ಪುಸ್ತಕದ, ಶಿಬಿರಾಗ್ನಿ ಉದಂತ 7ನ್ನು ನೋಡಿ.



ಅಧ್ಯಾಯ–32

# ನಕ್ಷೆಯನ್ನು ಓದುವುದು

ಒಂದು ನಾಡಿನ ಸ್ವಲ್ಪ ಪ್ರದೇಶದ ಅಥವಾ ಇಡೀ ದೇಶದ, ಅಷ್ಟೇಕೆ? ಕೆಲವು ಸಂದರ್ಭಗಳಲ್ಲಿ ಇಡೀ ವಿಶ್ವದ ಚಿತ್ರಣವನ್ನು ಒಂದು ಸಮತಲ ಕ್ಷೇತ್ರದಲ್ಲಿ ನಿರೂಪಿಸಬಹುದಾದರೆ ಅದು ನಕ್ಷೆ ಎನಿಸಿಕೊಳ್ಳುತ್ತದೆ.

ಭೂಮಿಯ ಮೇಲ್ಮೈ ಲಕ್ಷಣಗಳನ್ನು ಸಾಂಕೇತಿಕವಾಗಿ ಚಿತ್ರಿಸುವುದನ್ನು ನಕ್ಷೆ ಎಂದು ಕರೆಯುತ್ತಾರೆ.

ನಕ್ಷೆಯನ್ನು ಓದುವ ಕಲೆಯು ಬಹಳ ಸ್ವಾರಸ್ಯಮಯವಾಗಿರುತ್ತದೆ. ನಕ್ಷೆಯ ಮೇಲಿನ ಸಂಕೇತಗಳನ್ನೂ, ಗೆರೆಗಳನ್ನೂ ಅರ್ಥೈಸಿ, ಅವುಗಳನ್ನು ಬೆಟ್ಟಗುಡ್ಡಗಳು, ಕಣಿವೆ ಕಾಡುಗಳು, ಹೊಲಗದ್ದೆಗಳು, ನದಿತೊರೆಗಳು, ಕೆರೆ, ಕಟ್ಟೆಗಳು ಹೀಗೆ ಹೇಳುವುದೆಷ್ಟು ರೋಮಾಂಚನಾಕಾರಿ ಆಗಿರುತ್ತದೆ!

ನಕ್ಷೆಗಳಲ್ಲಿ ಮುಖ್ಯವಾಗಿ ತಿಳಿದಿರಬೇಕಾದುದು “1 ಇಂಚು ಮೇಲ್ಮೈ ನಕ್ಷೆ”. ಅದನ್ನು ಅವನು ಶಿಬಿರವಾಸ, ಚಾರಣ, ಹೊರಸಂಚಾರ ಮುಂತಾದ ಹೊರಾಂಗಣ ಚಟುವಟಿಕೆಗಳ ವೇಳೆಗಳಲ್ಲಿ ಉಪಯೋಗಿಸುತ್ತಾನೆ. ಆಕಾರಣ ಅವನು ಅದರ ಬಗ್ಗೆ ಪೂರ್ಣವಾಗಿ ತಿಳಿದಿರಬೇಕಾಗುತ್ತದೆ.

ನಕ್ಷೆಗಳಿಗೆ 5 ಉದ್ದೇಶಗಳಿವೆ (ವಿಮಾ ದೂಮಿನಾ) ಇಂಗ್ಲೀಷ್‌ನಲ್ಲಿ ಇವುಗಳನ್ನು ನಕ್ಷೆ ಓದುವ –“5–D”ಗಳೆಂದು ಹೇಳುತ್ತಾರೆ.

**i) ವಿ. ವಿವರಗಳು (Details):**

“1 ಇಂಚು ಮೇಲ್ಮೈ ನಕ್ಷೆ”ಯನ್ನು ಹರಡಿದ ಕೂಡಲೇ, ಅದರ ಅರುಗಿನಲ್ಲಿ ಸ್ಕೌಟ್‌ಗೆ ಬಹಳ ಮುಖ್ಯವಾದ, ಅನೇಕ ವಿವರಗಳು ಕಾಣಬರುತ್ತವೆ. ನಕ್ಷೆಯ ನಂಬರು; ಅದರಲ್ಲಿ ಹರಡಿರುವ ಪ್ರದೇಶ; ಆ ಪ್ರದೇಶಕ್ಕೆ ಅನ್ವಯಿಸುವ ಅಯಸ್ಕಾಂತೀಯ ವ್ಯತ್ಯಾಸ ಎತ್ತರ ತಗ್ಗುಗಳು, ಸಮಪಾತಳಿಗಳು ಮತ್ತು ಅವುಗಳ ನಡುವಣ ವಿಶಾಲತೆ; ಆ ನಕ್ಷೆಯಲ್ಲಿ ಉಪಯೋಗಿಸುವ ಸಾಂಕೇತಿಕ ಚಿಹ್ನೆಗಳು;

ಸಮೀಕ್ಷೆ ನಡೆಸಿದ ವರ್ಷ ಇವೇ ಮುಂತಾದ ವಿವರಗಳನ್ನು ಕಾಣಬಹುದು. ನಕ್ಷೆಯನ್ನೋದಲು ಈ ಅಂಶಗಳು ಬಹಳ ಅಮೂಲ್ಯವಾಗಿವೆ.

**ii) ಮಾ. ಮಾರ್ಗಸೂಚನೆ (Direction)**

ನಕ್ಷೆಗಳು ನಿಜವಾದ ಉತ್ತರ, ಅಯಸ್ಕಾಂತೀಯ ಉತ್ರರ ಮತ್ತು ನಕ್ಷಾ ಜಾಲ ನಿರ್ದೇಶಕ (ಗ್ರಿಡ್) ಉತ್ತರಗಳನ್ನು ಸೂಚಿಸುತ್ತವೆ. ಇದರಿಂದ ನಕ್ಷೆಯ ಮೇಲಿನ ಯಾವುದೇ ಸ್ಥಳಕ್ಕೆ, ದಿಕ್ಸಬಂಧವನ್ನು ಕಂಡುಕೊಳ್ಳಬಹುದು.

**iii) ದೂ. ದೂರಗಳು (Distances)**

ನಕ್ಷೆಗಳನ್ನು ನಿಗದಿತ ಪ್ರಮಾಣಾನುಸಾರ ರಚಿಸಲಾಗುತ್ತದೆ. ಆ ಕಾರಣ ನಕ್ಷೆಯ ಮೇಲಿನ ದೂರವು, ಭೂಮಿಯ ಮೇಲಿನ ಖಚಿತವಾದ ದೂರವನ್ನು ಸೂಚಿಸುತ್ತದೆ. ನಕ್ಷೆಯ ಕೆಳಭಾಗದ ಮಧ್ಯದಲ್ಲಿ ಸೂಚಿಸಿರುವ ಪ್ರಮಾಣದಿಂದ, ಇದನ್ನು ನಾವು ನಿರ್ಧರಿಸಬಹುದು.

**iv) ಮಿ. ಮಿತಿ ನಿರ್ದೇಶನ (Demarcation)**

ನಕ್ಷೆಗಳು ಪ್ರದೇಶದ ಸ್ವಾಭಾವಿಕ ಲಕ್ಷಣವನ್ನು ಹೇಳುತ್ತದೆ. ಇದರಿಂದ ಕಾಡು ಪ್ರದೇಶ, ನೆಡುತೋಪು, ಹಣ್ಣಿನ ತೋಟ ಇತ್ಯಾದಿಗಳನ್ನು ನಾವು ಸುಲಭವಾಗಿ ಗುರುತಿಸಬಹುದು.

**v) ನಾ. ನಾಮ ನಿರ್ದೇಶನ (Designation)**

ನಕ್ಷೆಗಳ ಸಹಾಯದಿಂದ, ನಾವು ಸ್ವಾಭಾವಿಕ ಲಕ್ಷಣಗಳು, ಸ್ಥಳಗಳು, ನದಿಗಳು, ನಗರಗಳು, ಪರ್ವತಗಳು, ಸಮುದ್ರಗಳು ಇತ್ಯಾದಿಗಳ ಹೆಸರುಗಳನ್ನು ಓದಿ ತಿಳಿಯಬಹುದು.

ಭೂಮಿಯ ಮೇಲ್ಮೈ ಲಕ್ಷಣಕ್ಕೆ ಹೊಂದುವ ರೀತಿಯಲ್ಲಿ, ನಕ್ಷೆಯ ಮೇಲಿನ ಗುರುತುಗಳನ್ನು ಓದಿಕೊಳ್ಳಬೇಕಾದರೆ, ಮೊದಲಿಗೆ ನಕ್ಷೆಯ ಮೇಲಿನ ಉತ್ತರ ದಕ್ಷಿಣ ರೇಖೆಯು, ಭೂ ಮೇಲ್ಮೈನ ಉತ್ತರ–ದಕ್ಷಿಣಕ್ಕೆ ಪರಸ್ಪರ ಹೊಂದುವಂತೆ, ನಕ್ಷೆಯನ್ನು ಸರಿಹೊಂದಿಸಿಕೊಳ್ಳಬೇಕು. (set the map)

ನಿಜ ಉತ್ತರ ದಿಕ್ಕನ್ನು ವಿವಿಧ ರೀತಿಗಳಲ್ಲಿ ಕಂಡಕೊಳ್ಳಬಹುದು. (1) ಸೂರ್ಯನ ಸಹಾಯದಿಂದ (2) ಗಡಿಯಾರದ ಸಹಾಯದಿಂದ (3) ಧೃವನಕ್ಷತ್ರದ

ಸಹಾಯದಿಂದ (4) ಅಯಸ್ಕಾಂತೀಯ ದಿಕ್ಸೂಚಿಯ ಸಹಾಯದಿಂದ. ಈ ಬೇರೆ ಬೇರೆ ರೀತಿಗಳನ್ನು ಈಗಾಗಲೇ ದಿಕ್ಸೂಚಿಯ ಬಗ್ಗೆ ತಿಳಿಸುವಾಗ ವಿವರಿಸಲಾಗಿದೆ.

ಪರ್ವತ, ಗಿರಿ, ಶಿಖರಗಳನ್ನು, ಬೆಟ್ಟ-ಗುಡ್ಡಗಳನ್ನು, ಗಿರಿರೇಖೆ (hashes)ಗಳು ಉಬ್ಬು ಚಿತ್ರಗಳ ಮೂಲಕ, ಮಟ್ಟ ರೇಖೆ (Contours)ಗಳ ಮೂಲಕ, ಗಿರಿಛಾಪು (Hill Shading) ಹೀಗೆ ಹಲವಾರು ರೀತಿಗಳಲ್ಲಿ ಚಿತ್ರಿಸಲಾಗುತ್ತದೆ.

ನಕ್ಷೆಯ ಮೇಲಿನ ಮಟ್ಟ ರೇಖೆಗಳನ್ನು ಉಪಯೋಗಿಸಿಕೊಂಡು ಭೂ ಮೇಲ್ಮೈನ ಉಬ್ಬು, ತಗ್ಗುಗಳನ್ನು ಸ್ಫುಟವಾಗಿ ಕಾಣಲು ಅನುಕೂಲವಾಗುತ್ತದೆ. ಸಮುದ್ರ ಮಟ್ಟದ ಮೇಲಿನ ಒಂದೇ ಮಟ್ಟದ ರೇಖೆಗಳನ್ನು ಕಂದು ಬಣ್ಣದ ಏಕರೇಖೆಯಿಂದ ಎಷ್ಟೇ ದೂರವಾದರೂ ಸೇರಿಸಿ ಎಳೆದಿರಲಾಗುತ್ತದೆ. ನಕ್ಷೆಯಲ್ಲಿ ಉಪಯೋಗಿಸ ಲಾಗಿರುವ, ಸಾಂಪ್ರದಾಯಿಕ ಚಿಹ್ನೆಗಳನ್ನು ನಕ್ಷೆಯ ಕೆಳಗೆ ವಿವರಿಸಲಾಗಿರುತ್ತದೆ. ಈ ವಿವರಗಳನ್ನು ಓದಿಕೊಂಡರಾಯಿತು, ನಕ್ಷೆಯನ್ನು ಖಚಿತವಾಗಿ ಓದಬಹುದು.

ಮಟ್ಟ ರೇಖೆಗಳನ್ನು ಸಾಮಾನ್ಯವಾಗಿ ನಿಗದಿತ ದೂರಗಳಲ್ಲಿ ಗುರುತಿಸಲಾಗಿರುತ್ತದೆ. ಲಂಬ, ಸಮತಲ, ಅಂತರವನ್ನು (Vertical interval) ವಿ.ಐ. ಎಂದೂ, ಕ್ಷಿತಿಜ ಸಮತಲ ಅಂತರವನ್ನು (Horizontal Equivalant) ಹೆಚ್.ಇ. ಎಂದೂ ಕರೆಯುತ್ತಾರೆ.

ನಕ್ಷೆಯನ್ನು ಓದುವುದರಿಂದ, ತಾನು ಎಲ್ಲಿದ್ದೇನೆ? ಯಾವ ದಿಕ್ಕಿನಲ್ಲಿ ಇದ್ದೇನೆ? ಹೇಗೆ ಮುಂದುವರೆಯಬೇಕು? ಎಂಬ ಅಂಶಗಳ ಬಗ್ಗೆ ಸ್ಕೌಟ್‌ಗೆ ತಿಳಿಯುವಂತೆ ಇರಬೇಕು. ಅಲ್ಲದೆ ಅವನಿಗೆ ಆ ಪ್ರದೇಶದ ಸುತ್ತ ಮುತ್ತಲಿನ ಮೇಲ್ಮೈ ಲಕ್ಷಣಗಳೂ, ಸ್ವಾಭಾವಿಕತೆಯೂ ತಿಳಿಯುವಂತಿರಬೇಕು.

**ನಕ್ಷೆಯನ್ನು ಹೊಂದಿಸಿಕೊಳ್ಳುವುದು: (Setting the map)**

ನಕ್ಷೆಯನ್ನು ಭೂಮಿಯ ಮೇಲೆ ಸಮತಲವಾಗಿ ಹರಡಬೇಕು. ನಕ್ಷೆಯ ಮೇಲಿನ ಉತ್ತರ-ದಕ್ಷಿಣ ರೇಖೆಯು ಭೂಮಿಯ ಮೇಲಿನ ನಿಜವಾದ ಉತ್ತರ ದಕ್ಷಿಣ ರೇಖೆಗೆ/ಧೃವ ನಕ್ಷತ್ರ-ದಕ್ಷಿಣ ರೇಖೆಗೆ ಹೊಂದಾಣಿಕೆ ಆಗಬೇಕು. ಆಗ ನಕ್ಷೆಯನ್ನು ಹೊಂದಿಸಿಕೊಂಡಂತೆ ಆಯಿತು.

**ಸೂರ್ಯ, ಮಸೀದಿ ಅಥವಾ ಸಮಾಧಿಗಳ** ಸಹಾಯದಿಂದ ಸಹ, ಸರಿ ಸುಮಾರಾಗಿ ನಕ್ಷೆಯನ್ನು ಹೊಂದಿಸಿಕೊಳ್ಳಬಹುದು. ಸಂವೀಕ್ಷಕರು, ತಾವು ಆ

ಕ್ಷೇತ್ರದಲ್ಲಿ ಗಮನಿಸುವ ಹೆಗ್ಗುರುತುಗಳು, ನಕ್ಷೆಯಲ್ಲಿ ಸೂಚಿಸಿರುವಂತೆ ಸರಿಹೊಂದುವುದಾದರೆ ನಕ್ಷೆಯನ್ನು ಖಚಿತವಾಗಿ ಹೊಂದಿಸಿಕೊಂಡರಾಯಿತು.

**ನಕ್ಷೆಗಳನ್ನು ಈ ಕೆಳಕಾಣಿಸಿರುವ ರೀತಿಗಳಲ್ಲಿ ಹೊಂದಿಸಿಕೊಳ್ಳಬಹುದು:**

(1) **ಪ್ರಿಸ್ಮಾಟಿಕ್ ದಿಕ್ಸೂಚಿಯ ಸಹಾಯದಿಂದ:** ನಕ್ಷೆಯು ಅಯಸ್ಕಾಂತೀಯ ಉತ್ತರವನ್ನು ತಿಳಿಸುವುದಿಲ್ಲವಾದುದರಿಂದ, ಮೊದಲನೆಯದಾಗಿ, ಅಯಸ್ಕಾಂತೀಯ ಉತ್ತರವನ್ನು ಲೆಕ್ಕಮಾಡಿ ನಕ್ಷೆಯ ಮೇಲಿನ ಅಂಚಿನಲ್ಲಿ, ಅಯಸ್ಕಾಂತೀಯ ಉತ್ತರ ರೇಖೆಯನ್ನು ಗುರುತಿಸಿ ದಿಕ್ಸೂಚಿಯನ್ನು ತೆಗೆದು, ಈ ರೇಖೆಯ ಮೇಲೆ ಹೊಂದಿಸಿ. ಈ ರೇಖೆ, ಕೂದಲು ರೇಖೆ ಮತ್ತು ದಿಕ್ಸೂಚಿಯ ಮುಳ್ಳಿನ ಮೇಲಿನ ಗುರುತು ಹಾಗೂ ವರ್ತುಲದ ಮೇಲಿನ ಗುರುತು ಒಂದಾಗಬೇಕು. ದಿಕ್ಸೂಚಿಯು ಮುಚ್ಚಳವು ನಕ್ಷೆಯ ಶಿರೋನಾಮೆಯ ಕಡೆಗಿರಬೇಕು. ಈಗ ದಿಕ್ಸೂಚಿ ಸಮೇತ ನಕ್ಷೆಯನ್ನು ತಿರುಗಿಸುತ್ತಾ, ದಿಕ್ಸೂಚಿಯ ಅಂಬಿನ ಕೊನೆಯು, ಅಲುಗದೆ ನಿಂತಾಗ, ಕೂದಲು ರೇಖೆಯ ಮೂಲಕ ಉತ್ತರಕ್ಕಿರುವಂತೆ ಹೊಂದಿಸಬೇಕು.

(2) **ವಿಶಿಷ್ಟ ಗುರುತುಗಳು (features) ಇವುಗಳ ಸಹಾಯದಿಂದ:** ಪ್ರಿಸ್ಮಾಟಿಕ್ ದಿಕ್ಸೂಚಿಯು ಸಿಗದಿದ್ದಾಗ ನಕ್ಷೆಯ ಮೇಲೆ ಸೂಚಿತವಾಗಿರುವ ವಿಶಿಷ್ಟ ಗುರುತುಗಳು, ಭೂ ಮೇಲ್ಮೈನಲ್ಲಿರುವ ವಿಶಿಷ್ಟ ಗುರುತುಗಳಿಗೆ ಸರಿಹೊಂದುವಂತೆ ನಕ್ಷೆಯನ್ನು, ಭೂಮಿಯ ಮೇಲೆ ಸಮತಲವಾಗಿ ಹರಡಿ, ಹೊಂದಿಸಬೇಕು. ದೂರದ ಯಾವುದಾದರೂ ಒಂದು ಹೆಗ್ಗುರುತನ್ನು ಆರಿಸಿಕೊಳ್ಳಿ. ಅದು ನಕ್ಷೆಯಲ್ಲಿ ಸೂಚಿತವಾಗಿರಬೇಕು. ಈಗ ನೀವು ನಿಂತಿರುವ ಸ್ಥಳದಿಂದ ನಕ್ಷೆಯ ಮೇಲೆ ಸೂಚಿತವಾಗಿರುವ ಗುರುತು, ದೂರದ ಆರಿಸಿಕೊಂಡ ಗುರುತೂ ಒಂದೇ ಸಾಲಿನಲ್ಲಿ ಬರುವಂತೆ, ಒಂದು ಸ್ಕೇಲ್‌ನ ಸಹಾಯದಿಂದ ಹೊಂದಿಸಿ.

(3) **ಇತರ ರೀತಿಗಳು:**

(i) ನೀವು ನಕ್ಷೆ ಹೊಂದಾಣಿಕೆ ಮಾಡಲಿರುವ ಸ್ಥಳದ ಸಮೀಪದಲ್ಲಿ ನೇರವಾದ ರೈಲು ಮಾರ್ಗ, ರಸ್ತೆ, ಕಾಲುವೆ, ಟೆಲಿಗ್ರಾಫ್ ಲೈನ್/ ಎಲೆಕ್ಟ್ರಿಕ್ ಲೈನ್ ಮುಂತಾದವುಗಳಿಗೆ ಸಮಾನಾಂತರವಾಗಿ ಸಹ ನಕ್ಷೆಯನ್ನು ಹೊಂದಿಸಿಕೊಳ್ಳಬಹುದು.

(ii) ಸಂವೀಕ್ಷಕನ ನೆಲೆಯಿಂದ ಎಂದರೆ ಒಂದೇ ಪಥದಲ್ಲಿ (ಒಂದೇ ಸಾಲಿನಲ್ಲಿ), ಒಂದೇ ದಿಕ್ಕಿನಲ್ಲಿ ಹಾಯುವ 2–3 ವಿಶಿಷ್ಠ ಗುರುತುಗಳು ನಕ್ಷೆಯಲ್ಲಿಯೂ, ಭೂಮ್ಯೆ ಮೇಲೂ ಕಂಡುಬಂದರೆ, ಅವುಗಳನ್ನು ಸೇರಿಸಿ, ನಕ್ಷೆಯ ಮೇಲೊಂದು ರೇಖೆಯನ್ನು ಎಳೆಯಿರಿ. ಆ ರೀತಿಯಲ್ಲಿ ನಕ್ಷೆಯು ಮತ್ತು ಭೂ ಮೇಲ್ಮೈನ ರೇಖೆಗಳು ಹೊಂದುವಂತೆ, ನಕ್ಷೆಯ ಹೊಂದಾಣಿಕೆ ಮಾಡಬಹುದು.

(iii) ಭೂ ಮೇಲ್ಮೈನ ಹೆಗ್ಗುರುತುಗಳನ್ನು, ನೀವು ನಿಂತ ಸ್ಥಳದಿಂದ ಗುರುತಿಸಿಕೊಳ್ಳಿ. ನಕ್ಷೆಯ ಮೇಲೂ, ಅವುಗಳನ್ನು ಕಂಡುಕೊಳ್ಳಿ. ಈಗ ನಕ್ಷೆಯನ್ನು ಸಮತಲ ಕ್ಷೇತ್ರದಲ್ಲಿ ಹರಡಿ. ಆ ಗುರುತುಗಳು ಭೂ ಮೇಲ್ಮೈ ಮೇಲೂ, ನಕ್ಷೆಯ ಮೇಲೂ, ಹೊಂದಾಣಿಕೆ ಆಗುವಂತೆ ಮಾಡಿ.

(iv) ಕೆಲವೊಮ್ಮೆ ಸಂವೀಕ್ಷಕನ ಪಕ್ಕಗಳಲ್ಲಿ, ಎದುರು ಬದಿರಾಗಿ, ಎರಡು ವಿಶಿಷ್ಠ ಗುರುತುಗಳು ಕಾಣಬರುವುದುಂಟು. ನಕ್ಷೆಯಲ್ಲಿ ಆ ಎರಡನ್ನೂ ಸೇರಿಸಿ ರೇಖೆ ಹಾಕಿ. ನಕ್ಷೆಯನ್ನು ಹರಡಿ. ಆ ಗುರುತುಗಳೂ, ನಕ್ಷೆಯ ಮೇಲಿನ ರೇಖೆಯೂ ಒಂದೇ ಸಾಲಿನಲ್ಲಿರುವಂತೆ ಮಾಡಿದರೆ, ಆಗ ನಕ್ಷೆಯ ಹೊಂದಾಣಿಕೆ ಆಗುತ್ತದೆ.

**ಪರಾಮರ್ಶೆಯ ವಿಧಾನ (System of Reference)**

ನಕ್ಷೆಯ ಮೇಲೆ ಎಳೆಗೆಂಪುಬಣ್ಣದಲ್ಲಿ ಗುರುತಿಸಿರುವ ನಿರ್ದೇಶಕ (grid) ರೇಖೆಗಳು, ನಿಗದಿತ ರೀತಿಯಲ್ಲಿ ಚೌಕ ಚೌಕವಾಗಿರುತ್ತವೆ. ಉತ್ತರ–ದಕ್ಷಿಣವಾಗಿರುವ ಲಂಬ ರೇಖೆಗಳನ್ನು ಈಸ್ಟಿಂಗ್ಸ್ – ಪೂರ್ವಸ್ಥ ರೇಖೆಗಳು ಎನ್ನುತ್ತಾರೆ. ಇವು ಒಂದು ನಿರ್ದಿಷ್ಠ ಸ್ಥಳದಿಂದ ಪೂರ್ವಕ್ಕೆ ಇರುವ ಪ್ರಗತಿದಾಯಕ ದೂರವನ್ನು ಗಜಗಳಲ್ಲಿ ಸೂಚಿಸುತ್ತದೆ.

ಅದೇ ರೀತಿ ಪಶ್ಚಿಮದಿಂದ ಪೂರ್ವಕ್ಕೆ ಗುರುತಿಸಿರುವ ಅಡ್ಡ ರೇಖೆಗಳನ್ನು ನಾರ್ದಿಂಗ್ಸ್ ಉತ್ತರಸ್ಥ ರೇಖೆಗಳು– ಎಂದು ಕರೆಯುತ್ತಾರೆ. ಇವುಗಳು ಒಂದು ನಿರ್ದಿಷ್ಠ ಸ್ಥಳದಿಂದ ಉತ್ತರ ದಿಕ್ಕಿಗೆ ಪ್ರಗತಿದಾಯಕ ದೂರವನ್ನು ಗಜಗಳಲ್ಲಿ ಸೂಚಿಸುತ್ತದೆ.

ಒಂದು ಇಂಚು (ಒಂದು ಮೈಲಿ ದೂರಕ್ಕೆ ಒಂದು ಇಂಚು) ನಕ್ಷೆಯಲ್ಲಿ ಈ ರೇಖೆಗಳು ಪ್ರತಿ 1000 ಗಜಕ್ಕೆ ಒಂದರಂತೆ ಇರುತ್ತವೆ. ಪ್ರತಿ ಹತ್ತನೆಯ ನಿರ್ದೇಶಕ

ರೇಖೆಯೂ, ಇತರ ರೇಖೆಗಳಿಗಿಂತ ಗಾತ್ರದಲ್ಲಿ ದಪ್ಪವಿರುತ್ತವೆ. ಈ ರೇಖೆಗಳನ್ನು 2ಕ್ಕೂ ಹೆಚ್ಚು ಅಂಕೆಗಳಿಂದ ಸೂಚಿಸಲಾಗುತ್ತದೆ. ಇತರ ರೇಖೆಗಳನ್ನು 2 ಅಂಕಿಗಳಿಂದ ಸೂಚಿಸಲಾಗಿರುತ್ತದೆ. ಈ ಅಂಕೆಗಳು ಒಂದು ನಿಗದಿತ ಸ್ಥಳದಿಂದ ದೂರವನ್ನು ಸೂಚಿಸುತ್ತವೆ. ಪ್ರತಿ ದಪ್ಪ ನಿರ್ದೇಶಕ ರೇಖೆಯೊಳಗಿನ ಚೌಕವನ್ನೂ, ಇಂಗ್ಲೀಷ್ ವರ್ಣಮಾಲೆಯ ಒಂದು ಅಕ್ಷರದಿಂದ ಸೂಚಿಸಲಾಗಿರುತ್ತದೆ.

ನಿರ್ದೇಶಕ ರೇಖೆಯನ್ನು ಮೇಲೆದ್ದು ಕಾಣುವ ಅಂಕೆಯ ಮೂಲಕ ಗುರುತಿಸಲಾಗುತ್ತದೆ. ನಕ್ಷೆಯ ಮೇಲೆ ಯಾವುದೇ ವಿಶೇಷ ಗುರುತು, ಸ್ಥಳವನ್ನು ಗುರುತಿಸಲು/ಕಂಡುಕೊಳ್ಳಲು ಈ ನಿರ್ದೇಶಕ ರೇಖೆಗಳನ್ನೂ ಬಳಸಲಾಗುತ್ತದೆ. ಆ ಕಾರಣದಿಂದ ಈ ವಿಧಾನವನ್ನು "ನಿರ್ದೇಶಕ ಪರಾಮರ್ಶನೆ" (GRID reference) ಎಂದು ಹೇಳುತ್ತಾರೆ.

ನಾಲ್ಕಂಕೆಗಳ ನಿರ್ದೇಶಕ ಪರಾಮರ್ಶಕವು, ಒಂದು ಇಂಚು ನಕ್ಷೆಯ ಮೇಲೆ ಒಂದು ಚೌಕ ಪ್ರದೇಶವನ್ನು ಮಾತ್ರ ಸೂಚಿಸುತ್ತದೆ. ನಿರ್ದೇಶಕ ಪರಾಮರ್ಶಕ ಸಂಖ್ಯೆಯನ್ನು ಹೇಳುವಾಗ ಮೊದಲು "ಪೂರ್ವಸ್ಥ"ವನ್ನೂ ಆ ಬಳಿಕ "ಉತ್ತರಸ್ಥ"ವನ್ನೂ ಹೇಳಬೇಕು. ಉದಾ:ಒಂದು ಹೆಗ್ಗುರುತಿನ ಪೂರ್ವಸ್ಥ 96 ಮತ್ತು ಉತ್ತರಸ್ಥ 26 ಇದ್ದರೆ ಆಗ ಅದರ ಪರಾಮರ್ಶಕ ಸಂಖ್ಯೆಯು 9626 ಆಗಿರುತ್ತದೆ ಮತ್ತು ಅದು 1000 ಗಜಗಳೊಳಗೆ ಖಚಿತವಾಗಿ ಇರುತ್ತದೆ.

ಆರು ಅಂಕಿಗಳ ನಿರ್ದೇಶಕ ಪರಾಮರ್ಶಕ ಸಂಖ್ಯೆಯು ವಿಶಿಷ್ಟ ಗುರುತಿರುವ ಸ್ಥಳವನ್ನು 100 ಗಜಗಳೊಳಗೆ ಖಚಿತವಾಗಿ ತಿಳಿಸುತ್ತದೆ. ಅದು ಹೀಗೆ ನಾಲ್ಕಂಕೆಗಳ ನಿರ್ದೇಶಕ ಪರಾಮರ್ಶಕ ಸಂಖ್ಯೆಯನ್ನು ತಿಳಿಸುವುದು ಆ ಚೌಕದೊಳಗೆ ಉದ್ದುದ್ದವಾಗಿ, ಅಡ್ಡಡ್ಡವಾಗಿ, ಹತ್ತು ಹತ್ತು ಭಾಗ ಮಾಡಿ, ಚೌಕದ ನೈರುತ್ಯ ಮೂಲೆಯನ್ನು '0' ಎಂದೆಣಿಸಿ, ಅಲ್ಲಿಂದ ಪೂರ್ವದ ಬಿಂದು ಸಂಖ್ಯೆ ಮತ್ತು ಉತ್ತರದ ಬಿಂದು ಸಂಖ್ಯೆ ಹೇಳಿದರಾಯಿತು.

ಉದಾ: 6 ಅಂಕೆಗಳ ನಿ.ಪ. ಸಂಖ್ಯೆ ಹೇಳುವಾಗ, ಪೂರ್ವಸ್ಥ 96. ಅಲ್ಲಿಂದ ಪೂರ್ವದ ಸಂ. 3 ಎಂದಿಟ್ಟುಕೊಂಡರೆ, ಅದು 963 ಆಯಿತು. ಇನ್ನು ಉತ್ತರಸ್ಥ 26, ಅಲ್ಲಿಂದ ಉತ್ತರದ ಸಂ. 6 ಎಂದಿಟ್ಟುಕೊಂಡರೆ ಅದು 266 ಆಯಿತು. ಹಾಗಾಗಿ ಆರು ಅಂಕೆಗಳ ನಿ.ಪ.ಸಂ. 963266 ಆಯಿತು.

ಇನ್ನೂ ಖಚಿತವಾಗಿ ಹೇಳಬೇಕೆಂದರೆ 8 ಅಂಕೆಗಳ ನಿ.ಪ. ಸಂಖ್ಯೆ ಆಗಬಹುದು. ಇದು 10 ಗಜಗಳೊಳಗಿನ ಖಚಿತತೆಯನ್ನು ತಿಳಿಸುತ್ತದೆ.

ಉದಾ: 96372665

ಒಂದು ಚೌಕವನ್ನು 10 ಭಾಗಗಳನ್ನಾಗಿ ಮಾಡಿದ್ದಾಗಿ ಊಹಿಸಿ. ಆ ಊಹಾ ಸಂಖ್ಯೆಯನ್ನು 6 ಅಂಕೆಯ ನಿ.ಪ. ಸಂಖ್ಯೆ ಅಥವಾ 8 ಅಂಕೆಗಳ ನಿ.ಪ. ಸಂಖ್ಯೆಯನ್ನು ಹೇಳುವಾಗ ಉಪಯೋಗಿಸುವ ಬದಲಾಗಿ ಒಂದು "ರೋಮರ್" ಉಪಯೋಗಿಸಿ, ಆ ಸಂಖ್ಯೆಗಳನ್ನು ಕರಾರುವಾಕ್ಕಾಗಿ ಹೇಳಬಹುದು. ರೋಮರ್ ಎಂಬುದು, ಚೌಕಗಳನ್ನು 10/100 ಭಾಗಗಳಾಗಿ ಗುರುತಿಸಿರುವ ಒಂದು ದಪ್ಪ ಕಾರ್ಡ್ ಅಥವಾ ದಪ್ಪನೆಯ ಪಾರದರ್ಶಕ ಹಾಳೆಯಾಗಿರುತ್ತದೆ.

**ವಿ.ಸೂ:** ಮೇಲೆ ಹೇಳಿರುವ ನಿರ್ದೇಶಕವು ಇಂಚು, ಅಡಿ, ಗಜಗಳಲ್ಲಿರುವುದಕ್ಕಾಯಿತು. ಇದೀಗ ಬಂದಿರುವ ಹೊಸ ನಕ್ಷೆಗಳಲ್ಲಿ ಅದು ಸೆಂ.ಮೀ., ಮೀಟರುಗಳಲ್ಲಿ ಇರುವುದರಿಂದ, ಈ ಬದಲಾವಣೆಗೆ ತಕ್ಕಂತೆ ಓದಿಕೊಳ್ಳಬೇಕಾಗುತ್ತದೆ.



## ಅಧ್ಯಾಯ–33

# ಅಂದಾಜು ಮಾಡುವುದು

ದ್ವಿತೀಯ ಸೋಪಾನ, ತೃತೀಯ ಸೋಪಾನ ಪದಕಗಳನ್ನು ಪ್ರದಾನ ಮಾಡಬೇಕಾದರೆ, ಯಾವುದೇ ಸಲಕರಣೆಗಳ ಉಪಯೋಗವಿಲ್ಲದೆ, ಸ್ಕೌಟುಗಳು, ದೂರ, ಎತ್ತರ ಮತ್ತು ತೂಕಗಳನ್ನು 25% ಲೋಪದೊಳಗೆ, ಅಂದಾಜು ಮಾಡಲು ಬರಬೇಕು ಎಂಬುದೊಂದು ನಿಬಂಧನೆ ಇದೆ.

ಅಂದಾಜು ಮಾಡುವುದರಲ್ಲಿ ಸ್ಕೌಟುಗಳು ಎಷ್ಟು ಪರಿಣಿತರಾಗಬೇಕೆಂದರೆ, ಅವರು ಮಾಡಿದ ಅಂದಾಜು ಖಚಿತವಾಗಿ ಸರಿಯಾಗಿರಬೇಕು. ತಮಗೆ ತಾವು ಅಂದಾಜು ಮಾಡುವುದನ್ನು ಅಭ್ಯಾಸ ಮಾಡಿಕೊಂಡರೆ, ಇದು ಸಾಧ್ಯವಾಗುತ್ತದೆ.

ಅಂದಾಜು ಮಾಡುವುದು ಎಂದರೆ, ಆದಷ್ಟು ಖಚಿತವಾಗಿ, ಊಹೆ ಮಾಡಿ ಹೇಳುವುದು. ಸ್ಕೌಟುಗಳು, ಹೊರಸಂಚಾರ ಸಮಯದಲ್ಲಿ ತಮ್ಮಲ್ಲಿ ತಾವು ಸ್ಪರ್ಧೆಗಳನ್ನು ಇಟ್ಟುಕೊಳ್ಳಬೇಕು. ಮರಗಳು, ದೇವಾಲಯ ಗೋಪುರಗಳು ಮುಂತಾದವುಗಳ ಎತ್ತರವನ್ನು ಅಂದಾಜು ಮಾಡುವುದು. ಯಾರ ಅಂದಾಜು ಖಚಿತ ಎತ್ತರಕ್ಕೆ ಸಮೀಪವಾಗಿದೆ ಎಂಬುದನ್ನು ಕಂಡುಕೊಳ್ಳುವುದು. ಇದು ಸ್ಪರ್ಧಾತ್ಮಕವಾದಾಗ, ಅವರು ಅಂದಾಜು ಮಾಡುವುದರಲ್ಲಿ ಪರಿಣಿತರಾಗುತ್ತಾರೆ. ಇದೇ ರೀತಿಯಲ್ಲಿ ದೂರಗಳನ್ನು ಅಂದಾಜು ಮಾಡುವುದು ಉದಾ: ಮುಂದೆ ಕಾಣುವ ಬೆಟ್ಟಸಾಲು, ಮತ್ತಿತರ ಹೆಗ್ಗುರುತುಗಳು ಇವುಗಳವರೆಗೆ ಹೆಜ್ಜೆ ಹಾಕಿ ದೂರದ ಅಂದಾಜು ಮಾಡುವುದು, ಸ್ಕೌಟುಗಳಿಗೆ, ಬಹಳ ಸ್ವಾರಸ್ಯಕರವಾದ ಶಿಕ್ಷಣವಾಗಿರುತ್ತದೆ. ಸ್ಕೌಟುಗಳು ಮೇಲಿಂದ ಮೇಲೆ ಈ ರೀತಿಯ ಅಭ್ಯಾಸಗಳನ್ನಿಟ್ಟುಕೊಳ್ಳುವುದು ಒಳ್ಳೆಯದು.

**ದೂರಗಳನ್ನು ಅಂದಾಜು ಮಾಡುವುದು:**

ದೂರಗಳನ್ನು ಅಂದಾಜು ಮಾಡುವಾಗ ಸ್ಪಷ್ಟವಾಗಿ ಕಾಣಿಸುವ ವಸ್ತುಗಳನ್ನು ಕಡಿಮೆ ದೂರದಲ್ಲಿರುವಂತೆಯೂ, ಅಸ್ಪಷ್ಟವಾದ ವಸ್ತುಗಳನ್ನು ಬಹಳ ದೂರದಲ್ಲಿರುವಂತೆಯೂ ಅಂದಾಜು ಮಾಡುವುದು ಸಹಜ.

ವಸ್ತುವು ನೆರಳಿನಲ್ಲಿದ್ದಾಗ; ಕಣಿವೆಯನ್ನು ಬಳಸಿ ದೃಷ್ಟಿಹಾಯಿಸಿದಾಗ; ವಸ್ತುವೂ (ಹೆಗ್ಗುರುತು ಇತ್ಯಾದಿ) ಹಿನ್ನೆಲೆಯೂ ಒಂದೇ ಬಣ್ಣವಿರುವಾಗ; ಗಮನಿಸುವವರು ಮೊಂಡಿಯೂರಿ ಕುಳಿತಾಗ; ಮಲಗಿರುವಾಗ; ನೆಲದ ಮೇಲೆ ಕಾವಿನ ಅಲೆ ಇರುವಾಗ; ವಸ್ತುಗಳು ದೂರದಲ್ಲಿರುವಂತೆ ಭಾಸವಾಗುತ್ತವೆ.

ಗಮನಿಸುವವರ ಹಿಂದೆ ಸೂರ್ಯನಿದ್ದು, ವಸ್ತು (ಹೆಗ್ಗುರುತಿನ)ವಿನ ಮೇಲೆ ಬೆಳಕಿನ ಪ್ರಕಾಶವು ಬಿದ್ದು ಹೊಳೆಯುವಾಗ; ಮಳೆ ಬಿದ್ದು ನಿಂತ ಬಳಿಕ ಸೂರ್ಯ ಪ್ರಕಾಶವಿರುವಾಗ; ಮಟ್ಟಸಭೂಮಿ ಇರುವಾಗ; ವಸ್ತುವೂ ಹಿನ್ನೆಲೆಯೂ ಬೇರೆ ಬೇರೆ ಬಣ್ಣವಿರುವಾಗ ನೀರು ಮತ್ತು ಹಿಮವನ್ನು ಹಾಯ್ದು ನೋಡುವಾಗ; ಕಡಿದಾದ ಬೆಟ್ಟದ ತುದಿಯಿಂದ ಆಳವಾದ ಕೆಳಭಾಗವನ್ನು, ಮೇಲೂ ಕೆಳಗೂ ನೋಡುವಾಗ; ವಸ್ತುವಿನ ಪ್ರಮಾಣವೂ ಪರಿಸರದಲ್ಲಿ ಅಗಾಧವಿರುವಾಗ ಉದಾ: ಎತ್ತರವಾದ ಸ್ಮಾರಕ; ದೇವಾಲಯದ ಗೋಪುರ, ಪರ್ವತ ಇತ್ಯಾದಿ); ವಸ್ತುವು ಹತ್ತಿರದಲ್ಲಿರುವಂತೆ ಭಾಸವಾಗುತ್ತದೆ. ಹಗಲು ಹೊತ್ತಿಗಿಂತಲೂ ರಾತ್ರಿಯ ವೇಳೆಯಲ್ಲಿ ಸಹ ವಸ್ತುಗಳು ಹತ್ತಿರವಾಗಿ ಇರುವಂತೆ ಭಾಸವಾಗುತ್ತದೆ.

## ದೂರಗಳನ್ನು ಅಂದಾಜು ಮಾಡಲು ಕಲಿಯಿರಿ

ನಿಮಗೆ ನೀವೇ ಸಾಕಷ್ಟು ಅಭ್ಯಾಸ ಮಾಡಿಕೊಳ್ಳಬಹುದು. ಜನ/ವಾಹನ ಸಂದಟ್ಟಣೆ ಇಲ್ಲದ ರಸ್ತೆಗಳು, ಹೊಲಗದ್ದೆಗಳು, ಹುಲ್ಲುಗಾವಲುಗಳು ಇಂತಹ ಕಡೆ ಪ್ರಾರಂಭಿಸಿ. ಹತ್ತಿರದಲ್ಲಿ ಕಾಣಬರುವ ಬೇರೆ ಬೇರೆ ದೂರವನ್ನು ಅಂದಾಜು ಮಾಡಿ, ಅದು ಸರಿಯೇ? ಎಂಬುದನ್ನು ಹೆಜ್ಜೆ ಹಾಕಿ ತಾಳೆ ನೋಡಿ. ಅನುಭವವಾದಂತೆ, ನಿಧಾನವಾಗಿ ದೂರಗಳನ್ನು ಹೆಚ್ಚಿಸಿ. ಪರಸ್ಪರ ಸ್ಪರ್ಧಾತ್ಮಕವಾಗಿ ಈ ಕೆಲಸ ಮಾಡಿ. ಅದೊಂದು ಉಪಯುಕ್ತವೂ, ಸ್ವಾರಸ್ಯಕರವೂ ಆದ ಆಟವಾಗುವುದರಲ್ಲಿ ಸಂದೇಹವಿಲ್ಲ. ಬಿ.ಪಿ.ರವರು ತಿಳಿಸಿರುವ ಹಲವಾರು ಸ್ವಂತ ಅಳತೆಗಳು ನಿಮಗೆ ತಾಳೆ ನೋಡಲು ಸಹಾಯವಾಗುತ್ತವೆ. [ಬಾಲಕರಿಗಾಗಿ ಸ್ಕೌಟಿಂಗ್ ಪುಸ್ತಕದ, ಪುಟ 110 ರಿಂದ 114 ವರೆಗೆ ಪರಾಮರ್ಶಿಸಿ]

## ಕೈ ಅಳತೆಗಳು ತಿಳಿದಿರಬೇಕು.

(i) ಹೆಬ್ಬೆರಳಿನ ಅಗಲ: ಬೆರಳಿನ ತುದಿಗೂ
ಉಗುರಿನ ಬಳಿಯ ಕೀಲಿಗೂ ಇರುವ ಉದ್ದ
(ಸಾಮಾನ್ಯವಾಗಿ ಇದು 2.5 ಸೆಂ.ಮೀ. ಇರುತ್ತದೆ.)

(ii) ಹೆಬ್ಬೆರಳು, ತೋರ್ಬೆರಳುಗಳ ತುದಿಗಳ ಅಂತರ
(ಅಗಲ ಮಾಡಿ ಹಿಡಿದಾಗ– ಚೋಟು) ....17.78 ಸೆಂ.ಮೀ.

(iii) ಹೆಬ್ಬೆರಳು, ಕಿರುಬೆರಳುಗಳ ತುದಿಗಳ ಅಂತರ
(ಅಗಲ ಮಾಡಿ ಹಿಡಿದಾಗ– ಗೇಣು) .... 23.18 ಸೆಂ.ಮೀ.

(iv) ಮಣಿಕಟ್ಟಿನಿಂದ, ಮೊಣಕೈವರೆಗೆ
(ಇದು ಪಾದದ ಉದ್ದ ಕೂಡ) .... 25.4 ಸೆಂ.ಮೀ.

(v) ಮೊಣಕೈನಿಂದ, ತೋರುಬೆರಳು ತುದಿಯವರೆಗೆ ....42.5 ಸೆಂ.ಮೀ.
(ಇದು ಒಂದು ಮೊಳ)

(vi) ಮೊಣಕೈನಿಂದ ಮಧ್ಯದ ಬೆರಳು ತುದಿಯವರೆಗೆ .... 45 ಸೆಂ.ಮೀ.
ಹಾಗೂ ಮೊಣಕಾಲು ಮಧ್ಯದಿಂದ ನೆಲದವರೆಗೆ
ಕೂಡಾ ಸುಮಾರು ಒಂದೇ ಉದ್ದವಿರುತ್ತದೆ.

(vii) ಭುಜ (ಕಂಕುಳು ಬಳಿ)ದಿಂದ ತೋರ್ಬೆರಳು .... 65 ರಿಂದ 70 ಸೆಂ.ಮೀ
ಮಧ್ಯಬೆರಳು ತುದಿವರೆಗೆ
(ಇದು ಒಂದು ಮಾರು)

(viii) ಎರಡು ಕೈಗಳನ್ನೂ ಚಾಚಿಹಿಡಿದಾಗ, ... ನಿಮ್ಮ ಎತ್ತರಕ್ಕೆ ಸರಿ
ಮಧ್ಯಬೆರಳುಗಳ ತುದಿಯಿಂದ ತುದಿಗೆ ಹೊಂದುತ್ತದೆ.
(1 ಮಟ್ಟ= 1 ಫ್ಯಾದಂ=1 ಆಳುದ್ದ)
(ಸಾಮಾನ್ಯವಾಗಿ 1 ಮಟ್ಟು=6 ಅಡಿ=180 ಸೆಂ.ಮೀ)

**ಜ್ಞಾಪಕವಿರಲಿ:** ದೂರಗಳನ್ನು ಅಂದಾಜು ಮಾಡುವಾಗ, ಅವು ಎಷ್ಟೆಷ್ಟು ದೂರಗಳಲ್ಲಿ ಯಾವ ರೀತಿ ಕಾಣಬಹುದು ಗಮನಿಸಿದರೆ, ಕಾಣುವ ರೀತಿಯ ಮೇಲೆ ದೂರವನ್ನು ಹೇಳಲು ಬರುತ್ತದೆ.

| | | |
|---|---|---|
| ಉದಾ: ಒಬ್ಬ ವ್ಯಕ್ತಿ ದೂರದಲ್ಲಿದ್ದಾನೆ. | 800 ಗಜಗಳು (727.27 ಮೀ) | ... ಕಂಬದಂತೆ ಕಾಣುತ್ತಾನೆ |
| ಅವನು ಹೇಗೆ ಕಾಣುತ್ತಾನೆ? ನೋಡಿ. | 700 " (636.36 ಮೀ) | ... ತಲೆಯನ್ನು ಪ್ರತ್ಯೇಕಿಸಲಾಗುವುದಿಲ್ಲ. |
| | 600 " (545.45 ಮೀ.) | ...ಭುಜಮಟ್ಟದಲ್ಲಿ ಸೀಸೆಯಂತೆ ಕಾಣುತ್ತಾನೆ |
| | 400 " (363.63 ಮೀ.) | ...ಕಾಲುಗಳ ಚಲನೆಯು ತಿಳಿಯುತ್ತದೆ. |
| | 300 " (272.72 ಮೀ.) | ...ಮುಖವು ಕಾಣಿಸುತ್ತದೆ. |
| | 200 " (181.81 ಮೀ) | ...ಧರಿಸಿರುವ ವಸ್ತ್ರದ ವಿವರವನ್ನು ಕಾಣಬಹುದು |
| | 100 " ( 90.90 ಮೀ) | ...ಕಣ್ಣು, ಬಾಯಿ ಇತ್ಯಾದಿ ಚುಕ್ಕೆಯಂತೆ ಕಾಣುತ್ತದೆ. |
| | 50 " (45.45 ಮೀ) | ...ಕಣ್ಣು, ಬಾಯಿ ಇತ್ಯಾದಿ ಸ್ಫುಟವಾಗಿ ಕಾಣಬರುತ್ತದೆ. |

ಇನ್ನೂ ದೂರದ ವಸ್ತುಗಳನ್ನು ಅಂದಾಜು ಮಾಡುವಾಗ, ಅತಿ ದೂರದಲ್ಲಿ ಕಾಣಬರುವ ರೀತಿಯನ್ನು, ಸ್ಫುಟವಾಗಿ ಕಾಣಬರುವ ಅತಿ ಸ್ವಲ್ಪ ದೂರವನ್ನೂ ಗಮನಿಸಿ. ಅವೆರಡರ ಸರಾಸರಿ ತೆಗೆದುಕೊಳ್ಳಿ. ಅಷ್ಟೇ!!

**ವಸ್ತುಗಳ ಎತ್ತರವನ್ನು ಕಂಡುಹಿಡಿಯುವುದು:**

ಅಂದಾಜು ಮಾಡುವುದು ಬೇರೆ. ಅಳತೆ ಮಾಡುವುದು ಬೇರೆ. ಈ ಕೆಳಗೆ ತಿಳಿಸಿರುವ ವಿಧಾನಗಳು ಅಳತೆಯಡಿ ಬರುತ್ತವೆ. ಎತ್ತರವನ್ನು ಅಳತೆ ಮಾಡಲು ಹಲವು ವಿಧಾನಗಳಿವೆ. ಈ ವಿಧಾನ/ಪದ್ಧತಿಗಳನ್ನೂ ಮರಗಳು, ಗೋಪುರಗಳು, ಸ್ಥಂಭಗಳು, ಕಟ್ಟಡ, ಶಿಖರಗಳು ಇತ್ಯಾದಿಗಳ ಎತ್ತರಗಳನ್ನು ಅಷ್ಟೇ ಖಚಿತವಾಗಿ, ಅಂದಾಜು ಮಾಡಿ ಹೇಳಲು ಬರುತ್ತದೆ.

**ಗೋಪುರ/ಮರದ ಎತ್ತರವನ್ನು ಹೇಗೆ ಕಂಡುಹಿಡಿಯುವುದು:**

ಗೋಪುರ/ಮರದ ಎತ್ತರವನ್ನು ಹಲವಾರು ರೀತಿಗಳಲ್ಲಿ ಕಂಡುಹಿಡಿಯಬಹುದು.

**1. ಸೆಂ.ಮೀ – ಮೀಟರ್ ವಿಧಾನ:**

ಗೋಪುರ/ಮರದ ಬುಡದಿಂದ 9 ಮೀಟರ್ (ಅಥವಾ ಸ್ಕೌಟ್ ದಂಡ/ನೀವೇ ನಿಗದಿಪಡಿಸಿಕೊಂಡ ಇತರೇ ಏಕಮಾನ) ದೂರ ಹೋಗಿ. ಅಲ್ಲಿ ದಂಡವನ್ನು ನಿಲ್ಲಿಸಿ. ಅಲ್ಲಿಂದ 1 ಮೀ/1 ಏಕಮಾನದ ಬಿಂದುವನ್ನು ಗುರುತಿಸಿ. ಈ ಬಿಂದುವಿನಿಂದ ಸ್ಕೌಟ್ ದಂಡದ ಮೂಲಕ ಹಾದು ಗೋಪುರ/ಮರದ ತುದಿಯನ್ನು ಮುಟ್ಟುವ ಒಂದು ರೇಖೆಯನ್ನು ಊಹಿಸಿಕೊಳ್ಳಿ. ಈ ಊಹಾ ರೇಖೆಯು, ದಂಡದ ಮೇಲೆ ಹಾಯುವ ಬಿಂದುವನ್ನು ಇನ್ನೊಬ್ಬ ಸ್ಕೌಟ್ ಗುರುತಿಸಿಕೊಳ್ಳಲಿ. ನೆಲಮಟ್ಟದಿಂದ ಆ ಸ್ಕೌಟು ಗುರುತಿಸಿಕೊಂಡ ಬಿಂದುವಿನ ವರೆಗೆ ಎಷ್ಟು ಸೆಂ.ಮೀ ಗಳಿವೆಯೆಂಬುದನ್ನು ನೋಡಿ. ಅದರ 1/10 ಭಾಗವನ್ನು ಮೀಟರುಗಳಲ್ಲಿ ಹೇಳಿದರೆ ಅದು ಗೋಪುರದ ಎತ್ತರವಾಗುತ್ತದೆ. ಉದಾ:ದಂಡದ ಮೇಲಿನ ಗುರುತು 55 ಸೆಂ.ಮೀ ಇದೆಯೆನ್ನಿ. ಆಗ ಗೋಪುರದ ಎತ್ತರ 55 ಸೆಂ.ಮೀ.ನ್ನು 10 ರಿಂದ ಭಾಗಿಸಿದರೆ ಬರುವ ಭಾಗಲಬ್ಧ=5.5 ಆದ್ದರಿಂದ ಗೋಪುರದ ಎತ್ತರ 5.5 ಮೀ.ಗಳು.

ವಿ.ಸೂ.: ದಶಮಾಂಶ ಪದ್ಧತಿಯು ರೂಢಿಗೆ ಬರುವ ಮುನ್ನ ಗೋಪುರ/ಮರದ ಎತ್ತರವನ್ನು ಅಂದಾಜು ಮಾಡಲು "ಇಂಚು-ಫುಟ್" ವಿಧಾನವನ್ನು ಉಪಯೋಗಿಸಲಾಗುತಿತ್ತು. ಇದರಲ್ಲಿ 9 ಏಕಮಾನಗಳ ಬದಲು 11 ಏಕಮಾನಗಳ ದೂರ ಹೋಗಿ ಅಲ್ಲಿಂದ ಮುಂದೆ ಒಂದು ಏಕಮಾನದ ಬಿಂದುವಿನಿಂದ ಗೋಪುರದ ತುದಿಯನ್ನು ಮುಟ್ಟುವ ಊಹಾ ರೇಖೆಯು ದಂಡದ ಮೇಲೆ ಹಾಯುವ ಬಿಂದುವು ನೆಲಮಟ್ಟದಿಂದ ಎಷ್ಟು ಇಂಚುಗಳಿವೆಯೋ ಗೋಪುರವು ಅಷ್ಟು ಎತ್ತರ ಇರುತ್ತದೆ, ಎಂದು ಹೇಳಲಾಗುತ್ತಿತ್ತು.

## 2. ಚೌಬೀನೆಯವನ ವಿಧಾನ (Lumberman's method)

ಮರಗಳನ್ನು ಉರುಳಿಸಿದರೆ ಅದರ ತುದಿ ಎಲ್ಲಿ ಬೀಳಬಹುದು? ಎಂದು ಊಹಿಸುವುದು ಈ ವಿಧಾನದಲ್ಲಿ ಅಡಗಿದೆ. ಸ್ಕೌಟ್ ದಂಡವನ್ನು ನೇರವಾಗಿ, ಕೈ ಪೂರಾ ಮುಂದೆ ಮಾಡಿ, ತೋಳು ದೂರದಲ್ಲಿ ಹಿಡಿಯಿರಿ, ದಂಡದ ತುದಿಯೂ, ಮರದ ತುದಿಯೂ, ಒಂದೇ ರೇಖೆಯಲ್ಲಿ ಬರುವಂತೆ, ದಂಡವನ್ನು ಮೇಲೆ ಮಾಡುತ್ತಾ, ಆ ರೇಖೆಯು ಸಂಧಿಸಿದ ಕೂಡಲೇ ದಂಡವನ್ನು ಅಲುಗಾಡದಂತೆ ಹಿಡಿಯಿರಿ. ಈಗ ನಿಮ್ಮ ಇನ್ನೊಂದು ಕೈನಿಂದ ಮರದ ಬುಡವು ಸಂಧಿಸುವ ಊಹಾ ರೇಖೆಯ ಬಿಂದುವನ್ನು ಗುರುತಿಸಿ ಹಿಡಿಯಿರಿ. ಈಗ ಬುಡದ ಊಹಾ ರೇಖೆಯ ಬಿಂದುವನ್ನು ಚಲಿಸದಂತೆ, ತಿರುಗಣಿಯ ರೀತಿಯಲ್ಲಿ ದಂಡವನ್ನು ನೆಲಕ್ಕೆ

ಸಮಾನಾಂತರವಾಗಿರುವಂತೆ ಮಾಡಿ. ಈಗ ದಂಡದ ತುದಿಯ ಮೂಲಕ, ಒಂದು ಊಹಾ ರೇಖೆಯು ನೆಲವನ್ನು ಮುಟ್ಟುವ ಬಿಂದುವನ್ನು ಗುರುತಿಸಿ. ಇದಕ್ಕೆ ಇನ್ನೊಬ್ಬ ಸ್ಕೌಟ್ಸ್‌ನ ಸಹಾಯವನ್ನು ತೆಗೆದುಕೊಳ್ಳಿ. ಈ ಬಿಂದುವಿನಿಂದ ಮರದ ಬುಡಕ್ಕೆ ಅಳತೆ ಮಾಡಿದರೆ, ಅದು ಆ ಮರದ ಎತ್ತರವನ್ನು ಕೊಡುತ್ತದೆ.

### 3. ಪೆನ್ಸಿಲ್ ವಿಧಾನ (Artists or Pencil method)

ಇದರಲ್ಲಿ ಮರದ ಬಳಿ ಇರುವ ತಿಳಿದ ವಸ್ತುವಿನೊಡನೆ ಹೋಲಿಸಿ ಮರದ ಎತ್ತರವನ್ನು ಅಂದಾಜು ಮಾಡಲಾಗುತ್ತದೆ.



ನಿಮ್ಮ ಸ್ನೇಹಿತನನ್ನು ಮರದ ಬುಡದಲ್ಲಿ ನೇರವಾಗಿ ನಿಲ್ಲಲು ಹೇಳಿ. ಪೂರಾ ತೋಳು ದೂರದಲ್ಲಿ ಪೆನ್ಸಿಲ್ ಹಿಡಿದು ಅವನ ಎತ್ತರವನ್ನು ಪೆನ್ಸಿಲ್ ಮೇಲೆ ಊಹಿಸಿ.



ಈಗ ಅಂತಹ ಎಷ್ಟು ಎತ್ತರಗಳು ಮರದ ತುದಿಯವರೆಗೆ ಇವೆ ಎಂಬುದನ್ನು ಕಂಡುಕೊಳ್ಳಿ. ನಿಮ್ಮ ಸ್ನೇಹಿತನ ಎತ್ತರವನ್ನು ಆ ಸಂಖ್ಯೆಯಿಂದ ಗುಣಿಸಿದರೆ ಮರದ ಎತ್ತರ ಸಿಗುತ್ತದೆ.

## 4. ನೀರಿರುವ ಬೋಗುಣಿ ವಿಧಾನ (Basin of water method)

ಒಂದು ಬೋಗುಣಿಯಲ್ಲಿ (ಬೇಸಿನ್) ನೀರನ್ನು ತೆಗೆದುಕೊಳ್ಳಿ. ಅದನ್ನು ಅಲ್ಲಲ್ಲಿ ಇಡುತ್ತಾ, ಮರದ ಪ್ರತಿಬಿಂಬವನ್ನು ನಿಮ್ಮ ಎತ್ತರದಷ್ಟು ದೂರದಲ್ಲಿ ನಿಂತು ಗಮನಿಸುತ್ತಾ ಹೋಗಿ. ಯಾವ ಸ್ಥಳದಲ್ಲಿ ಇಟ್ಟಾಗ ಮರದ ತುದಿಯ ಪ್ರತಿಬಿಂಬವು ಬೋಗುಣಿಯ ನೀರಿನ ಮಧ್ಯದಲ್ಲಿ ಕಾಣಬರುತ್ತದೆ ಗಮನಿಸಿ. ಆ ಸ್ಥಳದಿಂದ ಮರದ ಬುಡಕ್ಕಿರುವ ದೂರವು ಮರದ ಎತ್ತರವನ್ನು ಸೂಚಿಸುತ್ತದೆ.

ನೀರಿನ ಮಣ್ಣು ತಳಸೇರಿದ, ಸ್ವಚ್ಛ ನೀರಿನಲ್ಲಿ ಪ್ರತಿಬಿಂಬವು ಚೆನ್ನಾಗಿ ಕಾಣುತ್ತದೆ. ಬೋಗುಣಿಯ ನೀರು ಮಟ್ಟವಾಗಿರುವುದು ಅವಶ್ಯಕ. ಬೋಗುಣಿ ನೀರಿನ ಬದಲು ನೆಲದ ಮೇಲೆ ಕನ್ನಡಿಯನ್ನು ಉಪಯೋಗಿಸಲು ಬರುವುದಿಲ್ಲ.

ಬೋಗುಣಿಯನ್ನು ಅಲ್ಲಲ್ಲಿ ಇಡುತ್ತಾ, ಗಮನಿಸುತ್ತಾ, ತೆಗೆಯುತ್ತಾ ಮತ್ತೆ ಇಡುತ್ತಾ ಹೋಗಿ, ಯಾವ ಸ್ಥಳದಲ್ಲಿಟ್ಟಾಗ ಪ್ರತಿಬಿಂಬವು ಪ್ರಸ್ಫುಟವಾಗಿದ್ದಿತು ಎಂಬುದನ್ನು ಖಚಿತಪಡಿಸಿಕೊಳ್ಳಬೇಕು. ಪ್ರತಿಬಾರಿ ಸ್ಥಳ ಬದಲಾಯಿಸಿದಾಗಲೂ, ನೀರಿನ ಮೇಲ್ಮೈಯು ಅಲುಗದೆ, ಪ್ರಶಾಂತವಾಗಿದ್ದು, ಪ್ರತಿಬಿಂಬವು ಸ್ಫುಟವಾಗಲು ಕಾಯಬೇಕು.

## 5. ನೆರಳು ವಿಧಾನ (Shadow method)

ಇದರಗುಟ್ಟು ನೆರಳಿನ ಉದ್ದವನ್ನು ಹೋಲಿಸುವುದರಲ್ಲಿದೆ. ಮರದ ತುದಿಯ ನೆರಳು ಎಲ್ಲಿದೆ ಗುರುತಿಸಿ. ಸ್ಕೌಟ್ ದಂಡವನ್ನು ಹಿಡಿದು ಅದರ ನೆರಳೆಲ್ಲಿದೆ ಗುರುತಿಸಿ



$$\text{ಮರದ ಎತ್ತರ} = \frac{\text{ದಂಡದ (ಎತ್ತರ)ಉದ್ದ} \times \text{ಮರದ ನೆರಳಿನ ಉದ್ದ}}{\text{ದಂಡದ ನೆರಳಿನ ಉದ್ದ}}$$

### 6. ರೆಡ್ ಇಂಡಿಯನ್ ವಿಧಾನ (Red Indian method)

ಅಮೆರಿಕದ ರೆಡ್ ಇಂಡಿಯನ್ನರು ಮರಗಳ ಅಥವಾ ಇತರ ಗುರಿಗಳ ಎತ್ತರವನ್ನು ಹೀಗೆ ಅಂದಾಜು ಮಾಡುತ್ತಿದ್ದರು. ಮರಕ್ಕೆ ಬೆನ್ನು ಮಾಡಿ, ಕಾಲುಗಳನ್ನು ಅಗಲಿಸಿ ನಿಂತು, ಮುಂದಕ್ಕೆ ಬಾಗಿ, ಕಾಲುಗಳ ಮಧ್ಯದಿಂದ ಮರದ/ಗುರಿಯ ತುದಿಯನ್ನು ನೋಡುತ್ತಿದ್ದರು.

ಮುಂದೆ ಬಾಗುವುದು ಸರಿಯಾಗಿರಬೇಕು. ಅಭ್ಯಾಸ ಬಲದಿಂದ ಇದು ಸಾಧ್ಯವಾಗುತ್ತದೆ. ಸರಿಯಾಗಿ ಬಾಗುವುದನ್ನು ಕಲಿತ ಮೇಲೆ ಅಂದಾಜು ಮಾಡುವುದು ಸುಲಭ.

ಮರದ ಬುಡದಿಂದ, ನೀವು ನಿಂತಿರುವವರೆಗಿನ ದೂರವು ಮರದ ಎತ್ತರವಾಗಿರುತ್ತದೆ.

ಇಲ್ಲಿ ಗಮನಿಸಬೇಕಾದ ಅಂಶವೆಂದರೆ, ಮರದ ತುದಿಯಲ್ಲಿ ನೋಡುವ ನಿಮ್ಮ ದೃಷ್ಟಿಯು $45^0$ ಗಳಲ್ಲಿರಬೇಕು. ಅದು ಎಷ್ಟು ನಿಖರವಾಗಿದ್ದರೆ ನಿಮ್ಮ ಅಂದಾಜು ಅಷ್ಟು ಸರಿಯಾಗಿರುತ್ತದೆ. ಇಲ್ಲದಿದ್ದರೆ ತಪ್ಪಾಗುತ್ತದೆ.

### 7. ಕಾಗದ ಮಡಿಕೆಯ ವಿಧಾನ (Folded paper method)

ಒಂದು ಚೌಕಾಕಾರದ ದಪ್ಪ ರಟ್ಟನ್ನು ತೆಗೆದುಕೊಂಡು ಕರ್ಣದ ಮೇಲೆ ಮಡಿಸಿದಾಗ ನಮಗೆ ಒಂದು ಸಮ ದ್ವಿಬಾಹು ಲಂಬಕೋನ ತ್ರಿಕೋನ ದೊರಕುತ್ತದೆ.




ಉಳಿದ ಎರಡು ಕೋನಗಳು ಪ್ರತಿಯೊಂದೂ $45^0$ ಇರುತ್ತವೆ.

ಇದರ ಪಾದ (AB) ಭೂಮಿಗೆ ಸಮಾನಾಂತರವಾಗಿರುವಂತೆ ಹಾಗೂ ಮತ್ತೊಂದು ಬಾಹು (AC) ಎದುರಿಗಿರುವ ವಸ್ತುವಿನ ಕಡೆಗಿರುವಂತೆ ಹಿಡಿದು ತ್ರಿಭುಜದ ವಿಕರ್ಣ (BC)ದ ಮೂಲಕ ವಸ್ತುವಿನ ತುದಿ



XY+BY=XZ (ವಸ್ತುವಿನ ಎತ್ತರ)

ನೋಡುತ್ತಾ ಹಿಂದೆ ಮುಂದೆ ಚಲಿಸಬೇಕು. ವಸ್ತುವಿನ ತುದಿಯು BC ನೇರದಲ್ಲಿ ಬಂದ ಸ್ಥಾನದಲ್ಲಿ ನಿಲ್ಲಬೇಕು (Y). ಅಲ್ಲಿಂದ ವಸ್ತುವಿಗೆ ಇರುವ ದೂರ (X, Y) ಹಾಗೂ ಭೂಮಿಯಿಂದ ತ್ರಿಭುಜ ಹಿಡಿದಿರುವ ಎತ್ತರ (BY) ಇವುಗಳನ್ನು ಕೂಡಿದರೆ ವಸ್ತುವಿನ ಎತ್ತರ (XY + BY) ದೊರಕುತ್ತದೆ.

## ಅಗಲ, ಆಳಗಳ ಅಂದಾಜು

ನದಿಗಳಿಗೆ, ತೊರೆಗಳಿಗೆ ತಾತ್ಕಾಲಿಕವಾಗಿ, ಸಾಂದರ್ಭಿಕವಾಗಿ ಕಟ್ಟಬಹುದಾದ ಸೇತುವೆಗಳನ್ನು ವಿಚಾರ ಮಾಡಿದೆವು. ಹಾಗೆ ಮಾಡಲು ನದಿಗಳ ಅಗಲ, ಆಳಗಳನ್ನು ತಿಳಿಯಬೇಕಲ್ಲವೇ?

### ನದಿಯ ಅಗಲವನ್ನು ಅಂದಾಜು ಮಾಡುವುದು :

### (1) ಸರ್ವಸಮ ತ್ರಿಕೋನ ಪದ್ಧತಿ (Congruent Triangles Method):

ನದಿಯ ಎದುರು ದಡದಲ್ಲಿ ಮರವನ್ನು (ಅಥವಾ ಯಾವುದೇ ಸ್ಥಿರವಾದ ವಸ್ತು) ಗುರುತಿಸಿ ಅದನ್ನು 'X' ಎನ್ನೋಣ. ನೀವು ನಿಂತಿರುವ ಜಾಗವನ್ನು 'A' ಎನ್ನೋಣ. 'A' ಬಿಂದುವಿನಲ್ಲಿ ಒಂದು ದಂಡವನ್ನು ನೆಡಿ. ಈಗ ನದಿಯ ದಡಕ್ಕೆ ಸಮಾನಾಂತರವಾಗಿ, 'A'ಯಿಂದ 'AX' ಗೆ ಸಮಕೋನದಲ್ಲಿ, ಸುಮಾರು 20 ನಡಿಗೆ ಹೆಜ್ಜೆ ನಡೆಯಿರಿ. ಅಲ್ಲೊಂದು ದಂಡವನ್ನು ನೆಡಿ. ಇದನ್ನು 'B' ಎನ್ನೋಣ. ಈಗ ಅದೇ ಕೋನದಲ್ಲಿ ಮತ್ತೆ 20 ಹೆಜ್ಜೆ ನಡೆಯಿರಿ. ಇಲ್ಲೊಂದು ದಂಡವನ್ನು ನೆಡಿ. ಇದನ್ನು 'C' ಎನ್ನೋಣ. ಈಗ 'A'C' ಯಿಂದ ಸಮಕೋನದಲ್ಲಿ ನೆಲದ ಮೇಲೆ ಒಳನಡಿಗೆ ನಡೆಯಿರಿ. ಯಾವ ಬಿಂದುವಿನಿಂದ, ನೀವು ನಿಂತಿರುವ ಸ್ಥಳ, 'B' ದಂಡವಿರುವ ಸ್ಥಳ ಮತ್ತು ಆಚೆಯ ದಡದಲ್ಲಿರುವ ಮರ, ಒಂದೇ ರೇಖೆಯಲ್ಲಿ ಬರುತ್ತದೆಯೋ ಗುರುತಿಸಿ. ಈ ಬಿಂದುವನ್ನು 'D' ಎನ್ನೋಣ. 'C'D' ದೂರವು 'A'X'ನಷ್ಟಿರುತ್ತದೆ. (ಚಿತ್ರವನ್ನು ನೋಡಿ)




XAB ಮತ್ತು DCB ಸರ್ವಸಮ ತ್ರಿಕೋನಗಳು.

BC = AB ಆದ್ದರಿಂದ CD = AX

## (2) ಮಡಿಕೆ ಕಾಗದ ವಿಧಾನ (Paper fold method)

ಚೌಕಾಕಾರದ ದಪ್ಪ ರಟ್ಟನ್ನು ತೆಗೆದುಕೊಂಡು ಕರ್ಣದ ಮೇಲೆ ಮಡಿಸಿದಾಗ, ನಮಗೆ ಒಂದು ಸಮ ದ್ವಿಬಾಹು ಲಂಬಕೋನ ತ್ರಿಕೋನ ದೊರಕುತ್ತದೆ. ಉಳಿದ ಎರಡು ಕೋನಗಳು ಪ್ರತಿಯೊಂದು $45^0$ ಇರುತ್ತವೆ.

ನದಿಯ ಇನ್ನೊಂದು ದಡದಲ್ಲಿ ಸ್ಥಿರವಾದ ವಸ್ತುವನ್ನು ಗುರುತಿಸಿ ಕರ್ಣ 'X' ತ್ರಿಕೋನಾಕಾರದ ರಟ್ಟನ್ನು ಭೂಮಿಗೆ ಸಮಾನಾಂತರವಾಗಿ ಹಿಡಿದುಕೊಳ್ಳಿ, ('X' ವಸ್ತುವು ACನೇರದಲ್ಲಿರುವಂತೆ) ನೀವಿರುವ ಜಾಗವನ್ನು ಗುರುತಿಸಿಕೊಳ್ಳಿ 'Y' ಆಗಿರಲಿ. AYಯಿಂದ ಮುಂದಕ್ಕೆ ನಡೆಯಬೇಕು. 'BC' ವಿಕರ್ಣದ ನೇರದಲ್ಲಿ 'X' ನ್ನು ನೋಡುತ್ತಾ ಯಾವ ಜಾಗದಲ್ಲಿ 'X' ಬಿಂದು BC ನೇರದಲ್ಲಿ ಬರುತ್ತದೋ ಆ ಬಿಂದುವನ್ನು ಗುರ್ತಿಸಿ. 'Z' ಆಗಿರಲಿ ಆಗ YZ (ನಡೆದ ದೂರ) = XY (ನದಿಯ ಅಗಲ)




### (3) ದಿಕ್ಸೂಚಿ ವಿಧಾನ (Compass method)
(ಈ ವಿಧಾನ "ಸಿಲ್ವಾ" ದಿಕ್ಸೂಚಿಗೆ ಸೂಕ್ತ)

ನದಿಯ ಇನ್ನೊಂದು ದಡದಲ್ಲಿ ಸ್ಥಿರವಾದ ವಸ್ತುವನ್ನು ಗುರುತಿಸಿಕೊಳ್ಳಿ.
(A) ದಿಕ್ಸೂಚಿಯ ಮೇಲಿರುವ ಪ್ರಬಂಧ ದಿಕ್ಕನ್ನು ಸೂಚಿಸುವ ಬಾಣವನ್ನು ವಸ್ತುವಿಗೆ



ಹೊಂದಿಸಿ. ನೀವಿರುವ ಜಾಗ 'B' ಆಗಿರಲಿ. ದಿಕ್ಸೂಚಿಯ ಕಾಂತ ಸೂಜಿಯನ್ನು 45° ಕೋನಕ್ಕೆ ಹೊಂದಿಸಿ. ಈಗ ನದಿಯ ದಡದಲ್ಲಿ ನಡೆಯುತ್ತಾ ಹೋಗಿ. (ಪಯಣದ ದಿಕ್ಕಿನ ಬಾಣ A ಕಡೆಗೆ ಇರುವಂತೆ) ಯಾವ ಬಿಂದುವಿನಲ್ಲಿ ದಿಕ್ಸೂಚಿಯು ಪ್ರಯಾಣದ ದಿಕ್ಕಿನ ಕರ್ಣದ ನೇರಕ್ಕೆ ಬರುವುದೋ ಆ ಬಿಂದುವನ್ನು ಗುರುತಿಸಿ (C) ಆಗ BC(ನಡೆದ ದೂರ)=AB(ನದಿಯ ಅಗಲ).

### (4) ವಸ್ತು ಸ್ಥಾನಾಭಾಸ (Parallox) ವಿಧಾನ:

ನದಿಯ ಈ ಕಡೆ ದಡದಲ್ಲಿ ನೀವು ನಿಂತಿದ್ದೀರಿ. ಈ ಬಿಂದುವನ್ನು 'A' ಎನ್ನೋಣ. ಎದುರು ದಡದಲ್ಲಿ ಎರಡು ಹೆಗ್ಗುರುತುಗಳನ್ನು (ಮರಗಳು ಎನ್ನೋಣ) ಗುರುತಿಸಿಕೊಳ್ಳಿ. ಒಂದು ರೂಲ್ ದೊಣ್ಣೆಯನ್ನು, ಕೈ ಪೂರಾ ಚಾಚಿ ನೇರವಾಗಿ ಹಿಡಿಯಿರಿ. ರೂಲ್ ದೊಣ್ಣೆಯ ತುದಿಯಲ್ಲೊಂದು ಕಡೆ ಹಾಗೂ ಅದನ್ನು ಹಿಡಿದಿರುವ ಹೆಬ್ಬೆರಳಿನ ಬಳಿ. ನೀವು ಗುರುತಿಸಿದ ಹೆಗ್ಗುರುತು ಬರುವಂತೆ ರೂಲ್ ದೊಣ್ಣೆಯನ್ನು ಸರಿಸುತ್ತಾ ಹೋಗಿ. ಈಗ ಹೆಬ್ಬೆರಳಿಗೂ ರೂಲ್ ದೊಣ್ಣೆಯ ಅಂಚಿಗೂ ಇರುವ ಅಂತರವನ್ನು ಗಮನಿಸಿ. ಇದು 8" ಎಂದಿಟ್ಟುಕೊಳ್ಳೋಣ.

ಈಗ ರೂಲ್ ದೊಣ್ಣೆಯ ತುದಿಯಿಂದ 4" (ಈಗಾಗಲೇ ಗಮನಿಸಿರುವ ಅಂತರದ ಅರ್ಧ ಭಾಗ) ಗುರುತಿಗೆ ತನ್ನಿ. ಈಗ ಹಿಂದೆ ಸರಿಯುತ್ತಾ ಹೋಗಿ. ಯಾವ ಸ್ಥಾನದಲ್ಲಿ, ಈಗಾಗಲೆ ಗುರುತಿಸಿದ ಎರಡೂ ಹೆಗ್ಗುರುತುಗಳು, ರೂಲ್ ದೊಣ್ಣೆಯ ತುದಿಯಲ್ಲೊಂದು, ಈಗ ಹಿಡಿದಿರುವ ಹೆಬ್ಬೆರಳ ಬಳಿ ಒಂದು ಬರುತ್ತದೋ, ಆ ಬಿಂದುವನ್ನು ಗುರುತಿಸಿ. ಇದನ್ನು 'B' ಎನ್ನೋಣ. ಈಗ 'A'ಯಿಂದ 'B' ವರೆಗಿನ ದೂರವನ್ನು ಕಂಡುಕೊಳ್ಳಿ. ಈ ಅಂತರವು ನದಿಯ ಅಗಲವಾಗಿರುತ್ತದೆ.

### (5) ಕಡ್ಡಿ ಎಸೆತ (Lob stick) ವಿಧಾನ:

ಸಮೀಪದ ಜಂಗ್ಲಿ ಗಿಡದಲ್ಲಿ ಬಲವಾದ ಹಲವಾರು ರೆಂಬೆಗಳಿರುವ ಕೊಂಬೆಯೊಂದನ್ನು ಕತ್ತರಿಸಿಕೊಳ್ಳಿ. ಆ ರೆಂಬೆಗಳ ಮಧ್ಯೆ ಭಾರವಾದ ಕಲ್ಲನ್ನು ಕಟ್ಟಿ, ಅದಕ್ಕೆ ಉದ್ದನೆಯ ದಾರವನ್ನು ಕಟ್ಟಿ, ನದಿ/ತೊರೆಯ ಆಚೆ ದಡಕ್ಕೆ ಎಸೆಯಿರಿ. ನಿಮ್ಮ ಕಡೆ ದಾರದ ಮೇಲೆ, ನದಿ ದಡವನ್ನು ಮುಟ್ಟಿದಂತಿರುವ ಬಿಂದುವನ್ನು ಗುರುತಿಸಿ. ಈಗ ನಿಧಾನವಾಗಿ ದಾರವನ್ನು ನಿಮ್ಮ ಕಡೆಗೆ ಎಳೆದುಕೊಳ್ಳಿ.

ಕೊಂಬೆಯ ಕಲ್ಲು ಕಟ್ಟಿದ ಬಿಂದುವಿನಿಂದ, ದಾರದ ಮೇಲೆ ಗುರುತು ಮಾಡಿರುವ ಬಿಂದುವಿನವರೆಗೆ ಇರುವ ದಾರದ ಉದ್ದವು ನದಿಯ ಅಗಲವನ್ನು ಹೇಳುತ್ತದೆ.

ಈ ವಿಧಾನವು ನದಿಯು ಕಡಿಮೆ ಅಗಲದ್ದಾಗಿದ್ದರೆ ಅಥವಾ ತೊರೆಗಳಿಗೆ ಉಪಯೋಗಕ್ಕೆ ಬರುತ್ತದೆ.

### (6) ನೆಪೋಲಿಯನ್ ವಿಧಾನ

ನೆಪೋಲಿಯನ್ನನು ಒಮ್ಮೆ ತನ್ನ ಎಂಜಿನಿಯರುಗಳಿಗೆ, ಒಂದು ನದಿಯ ಅಗಲವನ್ನು ಎಷ್ಟೆಂದು ಕೂಡಲೇ ತಿಳಿಸಲು ಹೇಳಿದನು. ಆ ಇಂಜಿನಿಯರುಗಳೋ, ಬಹುಶಃ ಏನು ಮಾಡಬೇಕು? ಹೇಗೆ ಮಾಡಬೇಕೆಂಬ ಸಂದಿಗ್ಧಪರಿಸ್ಥಿತಿಯಲ್ಲಿ ಬಿದ್ದು ನಿಧಾನವಾಗಿರುವುದನ್ನು ಗಮನಿಸಿದನು. ನೆಪೋಲಿಯನ್ನನಿಗೋ ಅವಸರ. ಯುದ್ಧ ಭೂಮಿಯಲ್ಲಿ ನಿಧಾನ ಸಲ್ಲುವುದಿಲ್ಲ. ಕ್ಷಣ ಮಾತ್ರದಲ್ಲಿ ನಿರ್ಧಾರಗಳಾಗ ಬೇಕಲ್ಲವೇ? ಅವನ ತಾಳ್ಮೆ ನಶಿಸಿತು, "ನೋಡಿ, ನಿಮ್ಮ ನಿಧಾನ ಸಲ್ಲ. ನಾನೇ ಹೇಳುತ್ತೇನೆ" ಎಂದ.

ನದಿಯ ದಡದಲ್ಲಿ ನಿಂತು, ಆಚೆಯ ದಡವನ್ನು ತದೇಕಚಿತ್ತನಾಗಿ ನೋಡುತ್ತಾ ತನ್ನ ಹ್ಯಾಟ್‌ನ ಚಾಚು ಏಣನ್ನು (Brim) ಕೆಳಕ್ಕಿಳಿಸುತ್ತಾ, ಅದು ಇನ್ನೂ ದೃಷ್ಟಿಯಲ್ಲಿದೆ, ಮತ್ತೆ ಸರಿಸಿದರೆ ಅದು ದೃಷ್ಟಿಗೆ ಅಡ್ಡ ಬರುತ್ತದೆ ಎನ್ನುವ ಸ್ಥಿತಿಗೆ ತಂದನು. ಸ್ವಲ್ಪವೂ ಅಲುಗದಂತೆ ಪಕ್ಕಕ್ಕೆ ತಿರುಗಿದನು. ದಡದ ಆಚೆಯಬದಿಗೆ ನೆಟ್ಟ ದೃಷ್ಟಿಯನ್ನು ಬದಲಿಸದೆ, ಆ ಬಿಂದುವನ್ನು ಭೂಮಿಯ ಮೇಲಕ್ಕೆ ಬದಲಾಯಿಸಿದನು. ಆ ಬಿಂದುವನ್ನು ಗುರುತು ಮಾಡಲು ಹೇಳಿದನು. ತಾನು ನಿಂತ ಸ್ಥಳದಿಂದ ಆ ಬಿಂದುವಿನವರೆಗೆ ಅಳತೆ ಮಾಡಿಸಿದನು. ಅದು ನದಿಯ ಅಗಲವಾಗಿದ್ದಿತು.

ಇದೊಂದು ಬಹಳ, ಸರಳವಾದ, ವಿವೇಕಯುತ ವಿಧಾನ ಹ್ಯಾಟ್‌ನ ಚಾಚುಏಣಿನ ಬದಲು ನಿಮ್ಮ P ಕ್ಯಾಪ್‌ನ ಚಾಚುಏಣಾಗಬಹುದು ಅಥವಾ ಅಂಗೈ ಅಗಲ ಮಾಡಿ ಹ್ಯಾಟ್‌ನ ಚಾಚು ಏಣಿನಂತೆ ಮಾಡಿಕೊಂಡು ಕಣತಲೆಯ ಮೇಲಿಟ್ಟುಕೊಂಡು ನೆಪೋಲಿಯನ್‌ನು ಮಾಡಿದಂತೆಯೇ ಮಾಡಿದರಾಯಿತು. ನದಿಯ ಅಗಲ ದೊರಕುತ್ತದೆ

## ಸಂಖ್ಯಾಬಲದ ಅಂದಾಜು

ಸ್ಕೌಟುಗಳು ಅಭ್ಯಾಸ ಮಾಡಿಕೊಳ್ಳಬಹುದಾದ ಮತ್ತೊಂದು ಜಾಣ್ಮೆ ಎಂದರೆ ಸಂಖ್ಯಾಬಲದ ಅಂದಾಜು. ಕೆಲವು ವೇಳೆ ಗುಂಪಿನಲ್ಲಿ ಎಷ್ಟು ಜನರಿದ್ದಾರೆ? ಹಿಂಡಿನಲ್ಲಿ ಎಷ್ಟು ಕುರಿಗಳಿವೆ? ಮಂದೆಯಲ್ಲಿ ಎಷ್ಟು ದನಗಳಿವೆ? ವಿನೋದ ಕೇಳಿಯಲ್ಲಿ ಎಷ್ಟು ಜನ ಪಾಲ್ಗೊಂಡಿದ್ದಾರೆ? ಹಾಕಿ, ಫುಟ್‌ಬಾಲ್, ಕ್ರಿಕೆಟ್ ಇತ್ಯಾದಿ ಪಂದ್ಯಗಳನ್ನು ವೀಕ್ಷಿಸುತ್ತಿರುವ ಎಷ್ಟು ಪ್ರೇಕ್ಷಕರಿದ್ದಾರೆ? ಹೀಗೆ ಅಂದಾಜು ಮಾಡುವ ಸಂದರ್ಭವು ಒದಗಿಬರಬಹುದು. ಇದನ್ನು ಅಭ್ಯಾಸ ಮಾಡಿಕೊಳ್ಳಲು ಹಿಂಡಿನ/ಗುಂಪಿನ ಸ್ವಲ್ಪ ಭಾಗವನ್ನು ಅಂದಾಜು ಮಾಡಿ, ಸಾಧ್ಯವಾದರೆ ಎಣಿಕೆ ಮಾಡಿ ಆ ಬಳಿಕ ಅಂತಹ ಎಷ್ಟು ಭಾಗಗಳು ಅಂದಾಜು ಮಾಡಿ ಗುಣಿಸಿ. ಆಗ ಹೆಚ್ಚು ಕಡಿಮೆ ಸರಿಯಾದ ಲೆಕ್ಕ ಸಿಗುತ್ತದೆ, ಅಭ್ಯಾಸವಾದಂತೆ, ಗುಂಪನ್ನು ನೋಡಿದ ಕೂಡಲೇ ಸಂಖ್ಯೆಯನ್ನು ಹೇಳುವಷ್ಟು ಜಾಣ್ಮೆ ಕರಗತವಾಗುತ್ತದೆ.

ಆದರೊಂದು ಮಾತು. ಇದೇನೂ ಪರೀಕ್ಷಾಂಶವಲ್ಲ

## ಶಬ್ದದ ಮೂಲಕ ದೂರವನ್ನು ಹೇಳುವುದು

ಶಬ್ದ ಮತ್ತು ನೋಟದ ಮೂಲಕ ದೂರವನ್ನು ಅಂದಾಜು ಮಾಡಬಹುದು. ದೂರದಲ್ಲಿ ಬಂದೂಕು ಹೊಡೆದಾಗ ಕೂಡಲೇ ಮಿನುಗು ಪ್ರಕಾಶವು ಕಾಣಬರುತ್ತದೆ. ಅದಾದ ಕೆಲವು ಕ್ಷಣಗಳ ಬಳಿಕ ಶಬ್ದವು ಕೇಳಿಬರುತ್ತದೆ. ಮಿನುಗು ಪ್ರಕಾಶವು ಕಂಡಾಗಿನಿಂದ, ಶಬ್ದವು ಕೇಳಿಬರುವವರೆಗಿನ ಅವಧಿಯನ್ನು ಗಮನಿಸಿ, ಶಬ್ದವು 1 ಸೆಕೆಂಡಿಗೆ 365 ಗಜ ಅಥವಾ 337 ಮೀ. ಕ್ರಮಿಸುತ್ತದೆ. ಇದರ ಆಧಾರದಿಂದ, ನೀವು ಬೆಳಕನ್ನು ಗಮನಿಸಿದ, ಶಬ್ದವು ಕೇಳಿಬಂದ ಮಧ್ಯದ ಅವಧಿಗೆ ಅನ್ವಯಿಸಿ ಲೆಕ್ಕ ಮಾಡಿದರೆ ನಿಮಗೂ ಬಂದೂಕು ಹೊಡೆದ ಸ್ಥಳಕ್ಕೂ ಇರುವ ದೂರವನ್ನು ಸುಲಭವಾಗಿ ಹೇಳಬಹುದು.

ಗುಡುಗು ಮಿಂಚಿನಿಂದ ಕೂಡಿದ, ಹೊಯ್ಲು ಮಳೆಯು ಧಾರಾಕಾರವಾಗಿ ಸುರಿಯುವಾಗ, ಗುಡುಗು ಮಿಂಚುಗಳ ಮಧ್ಯೆ ನಡೆಯುವ ಈ ಘಟನೆಯು, ಕಿಲೋ ಮೀಟರುಗಳಾಚೆ ನಡೆಯುತ್ತಿರುವ ಸಹಜವಾದ ಘಟನೆಯೆಂಬುದಾಗಿ, ಧೈರ್ಯಹೀನರಿಗೆ ಅದನ್ನು ತೋರಿಸಿ ವಿವರಿಸಿ ಹೇಳಬಹುದು.

ಮರದ ಎತ್ತರವನ್ನು ಕಂಡುಕೊಳ್ಳುವುದು ಹೇಗೆ? ನದಿಯ ಅಗಲವನ್ನು ಹೇಗೆ ಕಂಡುಕೊಳ್ಳುವುದು? ಮುಂತಾದ ಶೀರ್ಷಿಕೆಗಳ ಕೆಳಗೆ ವಿವರಿಸಿರುವ ವಿಧಾನಗಳು ವಾಸ್ತವವಾಗಿ ಖಚಿತತೆಯನ್ನು ಪರೀಕ್ಷಿಸುವ ವಿಧಾನಗಳಷ್ಟೆ. ಅವುಗಳು ಮೂಲಭೂತವಾಗಿ ಜ್ಯಾಮಿತಿಯ ಸೂತ್ರಗಳ ಮೇಲೆ ಆಧಾರವಾಗಿವೆ. ಆ ಕಾರಣ ವಿಧಾನಗಳನ್ನು ಸರಿಯಾಗಿ ಅನುಸರಿಸಿದಲ್ಲಿ ಉತ್ತರವೂ ಖಚಿತವಾಗಿರುತ್ತದೆ. ಅಂದಾಜು ಮಾಡಿ ಹೇಳುವುದೆಂದರೆ ಊಹೆ ಮಾಡಿ ಹೇಳುವುದೇ ಹೊರತು, ಅಳತೆ ಮಾಡುವುದಲ್ಲ ಎಂದು ತಿಳಿದುಕೊಂಡರೆ ಸಾಕು. ಅಂದಾಜು ಮಾಡುವುದು ಎಂದರೆ, ಖಚಿತವಾಗಿ ಊಹೆ ಮಾಡುವುದು ಎಂದರ್ಥ.

## ಸಮಕೋನವನ್ನು ರಚಿಸುವುದು ಹೇಗೆ?

(1) **3–4–5 ವಿಧಾನ:** ಮೊದಲಿಗೆ ಮಟ್ಟವಾದ ನೆಲದ ಮೇಲೆ 3 ಅಡಿ ಉದ್ದದ, ನೇರವಾದ 'A','B' ರೇಖೆಯನ್ನು ಹಾಕಿ. Aನಿಂದ ಪ್ರಾರಂಭಿಸಿ 4 ಉದ್ದದ ತ್ರಿಜ್ಯ ರೇಖೆಯಿಂದ (Radius) ಒಂದು ವೃತ್ತ ಖಂಡವನ್ನು (arc) ರಚಿಸಿ. ಈಗ 'B' ಇಂದ ಪ್ರಾರಂಭಿಸಿ, 5' ಉದ್ದದ ತ್ರಿಜ್ಯ ರೇಖೆಯಿಂದ ಮೊದಲಿನ ವೃತ್ತ ಖಂಡವನ್ನು ಕತ್ತರಿಸಿ. ಈ ಬಿಂದುವನ್ನು 'C' ಎನ್ನೋಣ. ಈಗ 'C' ಇಂದ 'A' ಮತ್ತು 'B' ಗಳಿಗೆ ಗೆರೆ ಹಾಕಿ. ಈಗ 'A'B'C' ತ್ರಿಕೋನವು ಎರಡು ಸಣ್ಣ ಪಕ್ಕಗಳ ಸೇರುವಿಕೆಯಿಂದ ಒಂದು ಸಮಕೋನಯುಕ್ತ ತ್ರಿಕೋನವಾಯಿತು. ಎರಡು ಸಣ್ಣ ಪಕ್ಕಗಳಿಂದ ಉಂಟಾದ ಕೋನವು ಸಮಕೋನವಾಗಿರುತ್ತದೆ. ಇದೇ ರೀತಿ 5–12–13 ಸಹ ಒಂದು ಸಮಕೋನ ತ್ರಿಕೋನವನ್ನು ಕೊಡುತ್ತದೆ.

(2) **ಬೇರ್ಪಡಿಸಿದ ದಾರದ ವಿಧಾನ:** ಒಂದು ಅಥವಾ ಎರಡು ಮೀ. ಉದ್ದದ ದಾರವನ್ನು ತೆಗೆದುಕೊಳ್ಳಿ. ಇದು 'A'B' ಆಗಲಿ. ಇದನ್ನು ಎರಡು ಸಮಭಾಗಗಳಾಗಿ ಮಡಿಸಿ, ಮಧ್ಯ ಬಿಂದು 'C'ಯನ್ನು ಗುರುತಿಸಿ. ಈ ದಾರದಿಂದ ನಾವು ಸುಲಭವಾಗಿ ಒಂದು ಸಮಕೋನವನ್ನು ರಚಿಸಬಹುದು.

ನೆಲದ ಮೇಲೆ 'P'Q' ರೇಖೆಯನ್ನು ರಚಿಸಲಾಗಿದೆ ಎನ್ನೋಣ. ನಮಗೆ 'P' ಇಂದ ಸಮಕೋನವು ಬೇಕಾಗಿದೆಯೆನ್ನಿ. ದಾರದ 'A' ಬಿಂದುವನ್ನು 'P' ಬಿಂದುವಿನ ಮೇಲಿಡಿ. 'B' ಬಿಂದುವನ್ನು 'Q' ಬಿಂದುವಿನ ಮೇಲಿಡಿ. 'C' ಬಿಂದುವನ್ನು ಆದಷ್ಟೂ ಮೇಲೆಳೆಯಿರಿ. ಈಗ 'A'B'C'ಯು ಒಂದು

ಸಮಭುಜ ತ್ರಿಕೋನವಾಯಿತು. 'A'B'C ಬಿಂದುಗಳನ್ನು ದೃಢಪಡಿಸಿ. ಈಗ 'B'C' ರೇಖೆಯನ್ನು ಹಾಗೇ ಇಟ್ಟುಕೊಂಡು 'A'ಯನ್ನು ಚಲಿಸುತ್ತಾ, C'A' ರೇಖೆಯು 'B'C' ರೇಖೆಯ ಲಂಬನೆಯ ರೇಖೆಯಾಗುವವರೆಗೂ ಚಲಿಸಿ. ಈಗ 'A' ಬಿಂದುಗಳನ್ನು ಎಂದರೆ 'P' ('A' ಬಿಂದುವಿನ ಮೊದಲ ಸ್ಥಾನ) ಮತ್ತು ಈಗಿನ 'A' ('B'C'-'C'A' ಲಂಬ ರೇಖೆಯಲ್ಲಿ ಈಗಿನ ಸ್ಥಾನ)ಗಳನ್ನು ಸೇರಿಸಿ. ಈ ರೇಖೆಯು P ಬಿಂದುವಿನ ಬಳಿ ಸಮಕೋನದಲ್ಲಿರುತ್ತದೆ.



## ಅಧ್ಯಾಯ–34

# ಸ್ಕೌಟ್ ಮಾಸ್ಟರ ಪ್ರಗತಿ

**(ಅ) ದಳವನ್ನು ದಕ್ಷತೆಯಿಂದ ನಡೆಸುವ ಸಲುವಾಗಿ:**

1. ಮೂಲ ತರಬೇತಿ ಶಿಬಿರ
2. ಪ್ರೌಢ ತರಬೇತಿ ಶಿಬಿರ
3. ಹಿಮಾಲಯ ವುಡ್ ಬ್ಯಾಡ್ಜ್ ಶಿಬಿರ (ವೃಕ್ಷಮಣಿದಾರರ ಶಿಬಿರ)

**(ಆ) ದಳವನ್ನು ನಡೆಸುವುದರ ಜೊತೆಗೆ ಸೇವೆ:**

1 ಸಂಸ್ಥೆಯ ವಿವಿಧ ಹಂತಗಳ ಸಂಘಟನೆಗಳಲ್ಲಿ ಪದಾಧಿಕಾರಿಗಳಾಗಿ ಪಾಲ್ಗೊಳ್ಳುವಿಕೆ.

**2. ತರಬೇತುದಾರರು**

i) **ಎ.ಎಲ್.ಟಿ.:** ಮೂಲ ಮತ್ತು ಪ್ರೌಢ ತರಬೇತಿ ಶಿಬಿರಗಳನ್ನು ನಡೆಸಬಹುದು

ii) **ಎಲ್.ಟಿ.:** ಮೇಲಿನ ಶಿಬಿರಗಳ ಜೊತೆಗೆ ಹಿಮಾಲಯ ವುಡ್ ಬ್ಯಾಡ್ಜ್ ಶಿಬಿರವನ್ನು ಸಹ ನಡೆಸಬಹುದು.

**ಗಮನಿಕೆ:** ಎ.ಎಲ್.ಟಿ., ಎಲ್.ಟಿ. ಇವು ಶಿಬಿರಗಳನ್ನು ನಡೆಸುವ ಸಲುವಾಗಿ ಪಡೆದಿರಬೇಕಾದ ಅರ್ಹತೆ, ಅಧಿಕಾರ, ಇದನ್ನು "ಡಿಗ್ರಿ" ಪಡೆದಂತೆ ಭಾವಿಸಿ ಹೆಸರಿನ ಕೊನೆಯಲ್ಲಿ ಸೇರಿಸಿಕೊಳ್ಳಬಾರದು. ಇದು ಹೆಗ್ಗಳಿಕೆ ಮತ್ತು ಡಂಭತನದ ಕುರುಹಲ್ಲ.



## ಅಧ್ಯಾಯ–35

# ಹಾರೈಕೆ

ಸ್ಕೌಟ್ ಮಾಸ್ಟರ್ ಬಗ್ಗೆ ಈ ಪುಸ್ತಕದಲ್ಲಿ ಒಂದು ವಿಚಾರ ಧಾರೆಯನ್ನು ಓದಿದಿರಿ. ಆ ಬಳಿಕ ಸ್ಕೌಟ್ ಮಾಸ್ಟರ್ ತಮ್ಮ ಕೆಲಸಕಾರ್ಯಗಳನ್ನು ಸುಸೂತ್ರವಾಗಿ ನಡೆಸಿಕೊಂಡು ಹೋಗಲು ಅನುಕೂಲವಾಗುವಂತಹ ಸಲಹಾತ್ಮಕ ಮೂಲಭೂತ ಅಂಶಗಳನ್ನು ತಿಳಿದುಕೊಂಡಿರಿ.

ಸ್ಕೌಟ್ ಮಾಸ್ಟರು ತಮ್ಮ ಕೆಲಸ ನಿರ್ವಹಣೆಯಲ್ಲಿ ಉತ್ತಮರೆನಿಸಿಕೊಳ್ಳಬೇಕು. ಗಿಡಮರಗಳಂತೆ ಊರ್ಧ್ವಮುಖರಾಗಬೇಕು. ಉನ್ನತಿಯ ಹಾದಿಯನ್ನು ಹಿಡಿಯಬೇಕು. ಆ ದಿಕ್ಕಿನಲ್ಲಿ ಬೆಳಕು ತೋರುವ ದಾರಿ ಈ ಅಧ್ಯಾಯದಲ್ಲಿದೆ.

**(ಸ್ವಾಧ್ಯಾಯ–ಸಕ್ರಿಯತೆ– ಸ್ವಾನುಭವ–ಕಾರ್ಯದಕ್ಷತೆ=ಸ್ವಾನಂದ)**

**ತಾವಾಗಿ ತಿಳುವಳಿಕೆ ಪಡೆಯುವುದು–** (ಅಧ್ಯಯನ) ಓದುವುದರ ಮೂಲಕ; ಅನುಭವ ಪಡೆದವರ, ಪಡೆಯುತ್ತಿರುವವರ ಸಾಹಚರ್ಯೆಯಲ್ಲಿ ಹೇಳಿ, ಕೇಳಿ ನೋಡಿ, ಮಾಡಿ ತಿಳಿಯುವುದರ ಮೂಲಕ. ಇದು **ಸ್ವಾಧ್ಯಾಯ.**

**ತಿಳಿದಿರುವುದನ್ನು ತಿಳಿಸುವುದು:** (ಸಕ್ರಿಯತೆ–ಅನುಭವ) ಮಕ್ಕಳಿಗೆ ಕಲಿಸುವುದು, ತಮ್ಮ ನ್ಯೂನತೆಗಳನ್ನು ಸರಿಪಡಿಸಿಕೊಳ್ಳುತ್ತಾ ತಾವೂ ಕಲಿಯುತ್ತಾ ಉತ್ತಮರಾಗುವುದು. ತಿಳಿಯುವುದು–ತಿಳಿಸುವುದು; ತಿಳಿದಿದ್ದನ್ನು, ಮತ್ತಷ್ಟು ತಿಳಿಯುವುದು–ತಿಳಿಸುವುದು–ಸಕ್ರಿಯವಾಗಿ ತಿಳಿಸುತ್ತಾ, ಉತ್ತಮ ತಿಳುವಳಿಕೆ ಮತ್ತು ಅನುಭವ ಪಡೆಯುತ್ತಾ ಮುನ್ನಡೆಯುವುದು. ಇದು **ಸಕ್ರಿಯತೆ** ಮತ್ತು **ಸ್ವಾನುಭವ.**

**ಕಾರ್ಯದಕ್ಷತೆ–ಆನಂದ:** ಅನುಭವ ಹೆಚ್ಚಿದಂತೆ ಕಾರ್ಯದಕ್ಷತೆ ಹೆಚ್ಚುತ್ತದೆ. ಮಾಡಿದ ಕೆಲಸ ಪ್ರಭಾವಶಾಲಿಯಾಗುತ್ತದೆ. ಪರಿಣಾಮಕಾರಿ ಆಗುತ್ತದೆ. ಅದರಿಂದ ಆನಂದ ಸಿಗುತ್ತದೆ. ಇದೇ **ಸ್ವಾನಂದ.**

ರಸ್ಕಿನ್ ಬಾಂಡ್‌ರವರು ಹೇಳುವಂತೆ "ನಾವು ಮಾಡುವ ಯಾವುದೇ ಕೆಲಸ ಕಷ್ಟಕರವೆನಿಸಬಾರದು. ಬೆವರು ಸುರಿಸುವ ಬವಣೆಯೆನಿಸಬಾರದು. ಅದೊಂದು

ಸ್ಫೂರ್ತಿ ನೀಡುವ ಮಾಧ್ಯಮವಾಗಬೇಕು. ಅದರಿಂದ ದಿವ್ಯಾನುಭೂತಿ ಆನಂದ ನಮ್ಮದಾಗಬೇಕು. ನಮ್ಮ ಪೂರ್ವಜರ ಹೇಳಿಕೆಯನ್ನು ಗಮನಿಸಿ". ಲವಣದಷ್ಟು ಶ್ರವಣ; ಮೇರುವಿನಷ್ಟು ಮನನ; ಆಕಾಶದಷ್ಟು ಆಚರಣ" ಎಂದರೆ ನಾವು ಹೇಳಿ, ಕೇಳಿ, ಓದಿ, ನೋಡಿ ಮಾಡಿ ಕಲಿಯುವುದು ಊಟದಲ್ಲಿ ಉಪಯೋಗಿಸುವ **ಉಪ್ಪಿನಷ್ಟು**" ನಾವು ಅದನ್ನು ಅರ್ಥಮಾಡಿಕೊಂಡು ಜೋಪಾನ ಮಾಡುವುದು **ಮೇರು ಪರ್ವತದಷ್ಟು**; ಅದು ಕೈಜಾರದಂತೆ ಜಾಗ್ರತೆವಹಿಸಿ, ಅನುಷ್ಠಾನದ ಮೂಲಕ ಭದ್ರ ಮಾಡಿಕೊಂಡು ನಿರಂತರವಾಗಿ ಆಚರಿಸಬೇಕಾದದ್ದು **ಆಕಾಶದಷ್ಟು**. ಈ ಸೂಕ್ತಿಗಳು ನಿಮಗೆ ದಾರಿ ದೀಪವಾಗಲಿ.

ನಿಮ್ಮಿಂದ ಉತ್ತಮ ಪೌರರಾಗಿ ರೂಪುಗೊಂಡ ಬಾಲಕರು ನಿಮ್ಮನ್ನು ಆಜೀವ ಪರ್ಯಂತ ನೆನೆಸುತ್ತಾರೆ. ಅದರಿಂದ ನಿಮಗೆ ಅಪ್ಯಾಯಮಾನವಾದ ಆನಂದ ದೊರಕುತ್ತದೆ.

"ತಮ್ಮ ನಡೆವಳಿಕೆಯ ಮೂಲಕ ಆದರ್ಶ ಸ್ಕೌಟ್ ಮಾಸ್ಟರ್‌ಗಳಾಗಿ ಬಾಳಿ, ಆಳಿ ಅಳಿದ ಹಾಗೂ ಜೀವಂತವಿರುವ ಅನೇಕ ಸ್ಕೌಟ್ ಗುರುಗಳನ್ನು (ಉದಾ: ದಿ॥ ಎಂ.ಹೆಚ್.ಆರ್. ಅಂತಹವರು*). ಇಂದಿಗೂ ಪ್ರತಿವರ್ಷ ಸಭೆಸೇರಿ ನೆನೆಸುವ ನನ್ನ ಅನೇಕ ಒಡನಾಡಿಗಳನ್ನು ಕಂಡಿದ್ದೇನೆ. ಕರ್ನಾಟಕದಲ್ಲೇ ಅಲ್ಲ. ದೇಶದ ಅನೇಕ ರಾಜ್ಯಗಳಲ್ಲಿ ಇಂತಹ ನೆನಪಿನ ಸಭೆಗಳಲ್ಲಿ ನಾನು ಭಾಗವಹಿಸಿದ್ದೇನೆ. ಅಂತಹ ಮರೆಯಲಾಗದ ಸ್ಕೌಟ್ ಮಾಸ್ಟರ್ ನೀವಾಗಬೇಕೆಂದು ನನ್ನ ಹಾರೈಕೆ.

ಪ್ರಗತಿ ಹಾದಿಯಲ್ಲಿ ಪ್ರೌಢ, ಪುನಶ್ಚೇತನಾ ಶಿಬಿರಗಳಲ್ಲಿ ಪಾಲ್ಗೊಳ್ಳಿ. "ಸ್ಕೌಟಿಂಗ್‌ನ ದಕ್ಷತೆಯ ಚೊಕ್ಕ ಮುದ್ರೆ" (Hallmark of Scout efficiency) ಎನ್ನಲಾಗುವ ಹಿಮಾಲಯ ವುಡ್ ಬ್ಯಾಡ್ಜ್‌ಧಾರಿಗಳಾಗಿ. ನಿಮ್ಮ ಜ್ಞಾನ, ಕೌಶಲ, ಅನುಭವಗಳನ್ನು ಹೆಚ್ಚಿಸಿಕೊಳ್ಳುತ್ತಾ, ಹಂಚಿಕೊಳ್ಳುತ್ತಾ ಸಂಸ್ಥೆಯ ಮೆಚ್ಚುಗೆ ಪಡೆದು "ಶ್ರೇಣಿ ಪದಕ" (Medal of merit) ಪಡೆಯುವಂತಹವರಾಗಿರೆಂದು ಹಾರೈಸುತ್ತೇನೆ. ಉತ್ತಮ ಪ್ರಜೆಗಳ ರೂವಾರಿಯೆಂಬ ಹೆಮ್ಮೆ ನಿಮ್ಮದಾಗಲೆಂದು ಹಾಗೂ ಈ ಮಹತ್ಕಾರ್ಯದಲ್ಲಿ ದೈವಾನುಗ್ರಹ, ಸ್ವಾನಂದ ನಿಮಗೆ ದೊರಕಲಿ ಎಂದು ಆಶಿಸುತ್ತೇನೆ.



# ವಿವಿಧ ಚಟುವಟಿಕೆಗಳಲ್ಲಿ ತೊಡಗಿರುವ ಸ್ಕೌಟ್‌ಗಳು











# ಬೇಡನ್ ಪೊವೆಲ್ ಅಂತಿಮ ಸಂದೇಶ

ಆತ್ಮೀಯ ಸ್ಕೌಟ್ ಗೈಡ್ ಬಂಧುಗಳೇ,



ನೀವು ಯಾವಾಗಲಾದರೂ 'ಪೀಟರ್ ಪ್ಯಾನ್' ನಾಟಕ ನೋಡಿದ್ದರೆ, ಅದರಲ್ಲಿ ಕಡಲುಗಳ್ಳರ ಮುಖ್ಯಸ್ಥ ಯಾವಾಗಲೂ ತನ್ನ ಅಂತಿಮ ದಿನಗಳ ಭಾಷಣವನ್ನು ಹೇಗೆ ಮಾಡುತ್ತಿದ್ದ ಎನ್ನುವುದನ್ನು ಜ್ಞಾಪಿಸಿಕೊಳ್ಳುತ್ತೀರಿ. ಅವನು ಏಕೆ ಹಾಗೆ ಮಾತನಾಡುತ್ತಿದ್ದನೆಂದರೆ, ಒಂದು ವೇಳೆ ತಾನು ಸಾಯುವ ಕಾಲ ಬಂದಾಗ ಅದರಿಂದ ತಪ್ಪಿಸಿಕೊಳ್ಳಲು ತನಗೆ ಸಮಯಾವಕಾಶ ಇರುವುದಿಲ್ಲವೆಂದು ಅವನು ಹೆದರಿದ್ದ. ನನ್ನ ಸ್ಥಿತಿಯೂ ಅದೇ ಆಗಿದೆ. ನಾನು ತಕ್ಷಣದಲ್ಲಿ ಸಾಯುತ್ತಿಲ್ಲವಾದರೂ ಎಂದಾದರೊಂದು ದಿನ ಸಾಯಲೇಬೇಕಲ್ಲ. ಅಂತೇ ನಿಮಗೆ ಕೊನೆಯ ನಮಸ್ಕಾರದ ನುಡಿಗಳನ್ನು ಹೇಳಬೇಕೆಂದಿದ್ದೇನೆ. ನೆನಪಿರಲಿ. ಇದೇ ಕೊನೆ. ಮತ್ತೆಂದೂ ನೀವು ನನ್ನನ್ನು ಕೇಳಲಾರಿರಿ. ಆದ್ದರಿಂದ ವಿಚಾರಮಾಡಿ. ನಾನು ಅತ್ಯಂತ ನೆಮ್ಮದಿಯ ಜೀವನವನ್ನು ನಡೆಸಿದೆ. ಹಾಗೆಯೇ ನಿಮ್ಮಲ್ಲಿ ಪ್ರತಿಯೊಬ್ಬರೂ ನನ್ನಂತೆ ನೆಮ್ಮದಿಯ ಜೀವನವನ್ನು ಅನುಭವಿಸುವಂತಾಗಬೇಕೆಂದು ನಾನು ಇಚ್ಛಿಸುತ್ತೇನೆ. ನಾವು ಸುಖವಾಗಿದ್ದುಕೊಂಡು ಬದುಕನ್ನು ಪೂರ್ಣವಾಗಿ ಅನುಭವಿಸಬೇಕೆಂದೇ ಭಗವಂತನು ನಮ್ಮನ್ನು ಈ ಮನೋಹರ ವಿಶ್ವದಲ್ಲಿ ಇಟ್ಟಿದ್ದಾನೆಂದು ನಾನು ನಂಬಿದ್ದೇನೆ. ನಾವು ಶ್ರೀಮಂತರಾಗಿರುವುದರಿಂದಾಗಲೀ, ನಮ್ಮ ಉದ್ಯೋಗದಲ್ಲಿ ಯಶಸ್ವಿಯಾಗಿರುವುದರಿಂದಾಗಲೀ ಅಥವಾ ಸ್ವಯಂಪಾಪಕ್ಷಮೆ ಯಿಂದಾಗಲೀ ಸುಖ ಉಂಟಾಗುವುದಿಲ್ಲ. ಸುಖ–ಸಂತೋಷಗಳತ್ತ ಇಡುವ ಒಂದು ಹೆಜ್ಜೆಯೆಂದರೆ, ನೀವು ಹುಡುಗರಾಗಿದ್ದಾಗ ನಿಮಗೆ ನೀವೇ ಆರೋಗ್ಯವಾಗಿರುವುದು ಮತ್ತು ಸಶಕ್ತರಾಗಿರುವುದು. ಆಗ ಮಾತ್ರ ನೀವು ಲೋಕಕ್ಕೆ ಬೇಕಾದವರಾಗಿರಬಹುದು ಮತ್ತು ದೊಡ್ಡವರಾದಾಗ ಬದುಕನ್ನು ಚೆನ್ನಾಗಿ ಅನುಭವಿಸಬಹುದು.

ನೀವು ಅನುಭವಿಸಲಿಕ್ಕಾಗಿಯೇ ಭಗವಂತ ಈ ವಿಶ್ವವನ್ನು ಎಷ್ಟು ಸುಂದರ ಮತ್ತು ಸೋಜಿಗದ ವಸ್ತುಗಳಿಂದ ತುಂಬಿದ್ದಾನೆ! ಇದು ನಿಸರ್ಗದ ಅಧ್ಯಯನದಿಂದ ನಿಮಗೆ ತಿಳಿಯುತ್ತದೆ. ನಿಮಗೆ ಇರುವಷ್ಟರಲ್ಲೇ ತೃಪ್ತಿಪಟ್ಟುಕೊಂಡು, ಅದರಿಂದಲೇ ಹೆಚ್ಚಿನ ಪ್ರಯೋಜನ ಪಡೆಯಿರಿ. ಕತ್ತಲೆ ಕವಿದ ಭಾಗವನ್ನು ನೋಡದೆ ಬೆಳಕಿರುವ ಭಾಗವನ್ನು ನೋಡಿ. ಏನಿದ್ದರೂ ಸುಖವನ್ನು ಪಡೆಯುವ ನಿಜವಾದ ಮಾರ್ಗವೆಂದರೆ ಇತರರಿಗೆ ಸುಖವನ್ನು ಕೊಡುವುದು. ಈ ಜಗತ್ತನ್ನು ನೀವು ಕಂಡುದಕ್ಕಿಂತ ಸ್ವಲ್ಪ ಉತ್ತಮವೆನಿಸುವಂತೆ ಮಾಡಿ. ಸಾಯುವ ಸಮಯ ಬಂದಾಗ, ಯಾವುದೇ ಕಾರಣಕ್ಕೆ ನಿಮ್ಮ ಸಮಯವನ್ನು ವ್ಯರ್ಥಗೊಳಿಸದೆ ಸಾಧ್ಯವಾದಷ್ಟೂ ಸಾರ್ಥಕ ಕೆಲಸ ಮಾಡಿದ್ದೇನೆಂಬ ತೃಪ್ತ ಭಾವನೆಯಿಂದ ನೀವು ಸುಖವಾಗಿ ಸಾಯಬಹುದು.

ಹೀಗೆ ಸುಖವಾಗಿ ಬದುಕಲು ಮತ್ತು ಸುಖವಾಗಿ ಸಾಯಲು ನೀವು 'ಸಿದ್ಧರಾಗಿ'. ನೀವು ಬಾಲ್ಯದ ಹಂತವನ್ನು ದಾಟಿ ದೊಡ್ಡವರಾದರೂ ನಿಮ್ಮ ಸ್ಕೌಟ್ಸ್ / ಗೈಡ್ಸ್ ಪ್ರತಿಜ್ಞೆಗೆ ಬದ್ಧರಾಗಿರಿ. ದೇವರು ನಿಮಗೆ ನೆರವಾಗುತ್ತಾನೆ.

ನಿಮ್ಮ ಸ್ನೇಹಿತ

Baden-Powell of Gilwell

ಬೇಡನ್ ಪೊವೆಲ್